## ಮೊದಲ ಮಾತು



ನಾನು ಗುಜರಾತಿನಲ್ಲಿ ಆರು ವರ್ಷ ನೌಕರಿ ಮಾಡಿದವನು. ಸರ್ದಾರ್ ಪಟೇಲರು ಹುಟ್ಟಿದ ಊರು ಕರಮ್‌ಸದ್‌ನಲ್ಲಿ ಒಂದೂವರೆ ವರ್ಷ ವಾಸ ಮಾಡಿದವನು. ಮಹಾತ್ಮ ಗಾಂಧಿ ಮತ್ತು ಸರ್ದಾರ್ ಪಟೇಲರಿಗೆ ಜನ್ಮವಿತ್ತು, ಇಡೀ ಆಧುನಿಕ ಭಾರತವನ್ನು ಪ್ರಭಾವಿಸಿದ ನಾಡು ಅದು. ಮಹಾತ್ಮರ ಮಹಾತ್ಮೆಯನ್ನು ಬಿಡಿಸಿ ಹೇಳುವ ಅಗತ್ಯವಿಲ್ಲ. ಪಟೇಲರಿಲ್ಲದಿದ್ದರೆ ಭಾರತವು ಒಂದು ರಾಷ್ಟ್ರವಾಗಿ ಉಳಿಯುತ್ತಿರಲಿಲ್ಲ. ಇಂತಹ ಗುಜರಾತ್ ರಾಜಕೀಯವಾಗಿ ಭಾರತದ ಇತರ ರಾಜ್ಯಗಳಂತೆ ಎಂತಹ ನಾಯಿಪಾಡಿಗೆ ಇಳಿದಿದೆ! ಇದರ ಕಾರಣವೇನು? ಎಂದು ನಾನು ಹಲವು ವರ್ಷಗಳು ಚಿಂತಿಸಿದ್ದೇನೆ.

ಯೋಗಾಯೋಗ: ಗುಜರಾತಿನ ರಾಜಕೀಯದಲ್ಲಿ ನರೇಂದ್ರ ಮೋದಿಯವರ ಉದಯ ವಾಯಿತು. ಆ ರಾಜ್ಯದ ಅಸ್ಮಿತೆಯು ಪುನರುಜ್ಜೀವನಗೊಂಡಿತು. ಆ ಮೂಲಕ ಇಡೀ ಭಾರತಕ್ಕೆ ಒಂದು ಮಾದರಿಯ ಸೃಷ್ಟಿಯಾಯಿತು. ಈಗ ಭಾರತದ ಅದ್ಯಂತ ಗುಜರಾತ್ ಮಾದರಿ ಎಂಬ ಕಲ್ಪನೆಯು ಹೊಳೆಯುತ್ತಿದೆ. ಇದರ ಕರ್ತೃ ನರೇಂದ್ರ ಮೋದಿಯ ವರನ್ನು ರಾಷ್ಟ್ರದ ವಿದ್ಯಾವಂತ ಯುವ ಜನತೆಯು ಭಾರತದ ಬಹುದೊಡ್ಡ ಮಾತ್ರವಲ್ಲ ಏಕೈಕ ಸೂರ್ಯ ಎಂದು ಹೊಗಳುತ್ತಿದೆ. ಯಾವ ಒಣ ಸಿದ್ಧಾಂತಕ್ಕೂ ಕಟ್ಟುಬೀಳದೆ ಆರು ವರ್ಷಗಳಲ್ಲಿ ತನ್ನ ರಾಜ್ಯವನ್ನು ಎಲ್ಲ ವಿಧದಲ್ಲೂ ರಾಷ್ಟ್ರದ ನಂಬರ್ ಒನ್ ಆಗಿ ಮಾಡಿದ ಈತನ ಕ್ರತು ಶಕ್ತಿ, ಚಾರಿತ್ರ್ಯ ಶುದ್ಧಿ ಮತ್ತು ನಿಷ್ಕಳಂಕ ವ್ಯಕ್ತಿತ್ವವನ್ನು ಕನ್ನಡಿಗರು ತಿಳಿಯಬೇಕು. ಹಂದಿಯಿದ್ದ ಊರು ಹೇಗೆ ಶುದ್ಧವೋ ಹಾಗೆ ನಿಂದಕರಿರಬೇಕು ಎಂಬ ದಾಸರವಾಣಿ ಯಂತೆ ಮೋದಿಯನ್ನು ತೆಗಳುವುದನ್ನೇ ಏಕೈಕ ಕಸುಬು ಮಾಡಿಕೊಂಡಿರುವ ಕೆಲವು ಇಂಗ್ಲಿಷ್ ಮಾಧ್ಯಮದವರು, ಅವರನ್ನು ಅನುಸರಿಸುವ ಸೆಕ್ಯುಲರಿಸ್ಟರು ಜನಾಭಿಪ್ರಾಯದ ಹಾದಿ ತಪ್ಪಿಸುವ ಕಾರ್ಯದಲ್ಲಿ ಸತತವಾಗಿ ತೊಡಗಿದ್ದರೂ ಇತ್ತೀಚಿನ ಚುನಾವಣೆಯಲ್ಲಿ ಗುಜರಾತಿನ ಜನತೆ ಮೋದಿಯವರನ್ನು ಮತ್ತೆ ಪ್ರಚಂಡ ಬಹುಮತದಿಂದ ಗೆಲ್ಲಿಸಿತು.

ನನಗೆ ಈಗಲೂ ಗುಜರಾತಿನ ಸಂಪರ್ಕವಿದೆ. ಆಗಾಗ್ಗೆ ಅಲ್ಲಿಗೆ ಹೋಗುತ್ತೇನೆ. ಅಲ್ಲಿಯ

ಜನಜೀವನ ಮತ್ತು ರಾಜಕೀಯ ತಿರುವುಗಳನ್ನು ಕೇಳಿ ತಿಳಿಯುತ್ತೇನೆ. ಸಂಸತ್ತಿನಲ್ಲಿ ಮೂರನೇ ಎರಡು ಬಹುಮತದೊಡನೆ ನರೇಂದ್ರ ಮೋದಿಯು ಕನಿಷ್ಠ ಇಪ್ಪತ್ತು ವರ್ಷ ಭಾರತದ ಪ್ರಧಾನಿಯಾದರೆ ಕಳೆದ ಅರವತ್ತು ವರ್ಷದಿಂದ ಆರ್ಥಿಕವಾಗಿ, ನೈತಿಕವಾಗಿ, ಸಾಮಾಜಿಕವಾಗಿ ಭ್ರಷ್ಟವಾಗಿರುವ ಭಾರತವು ಎಲ್ಲ ರೀತಿಯಲ್ಲೂ ಪ್ರಪಂಚದ ನಂಬರ್ ಒನ್ ರಾಷ್ಟ್ರವಾಗಬಹುದು. ಈಗ ಕೊಳೆತು ನಾರುತ್ತಿರುವ ಬಡತನ, ಜಾತೀಯತೆ, ಸಾಮಾಜಿಕ ಅನ್ಯಾಯ, ವೋಟುಬ್ಯಾಂಕಿನ ಮತ ಧಾರ್ಮಿಕ ಒಡಕು, ಸಂವೇದನಾರಾಹಿತ್ಯ ಮತ್ತು ಕರ್ತವ್ಯಹೀನತೆಗಳು ತೊಳೆದುಹೋಗಬಹುದು ಎಂಬ ಕಲ್ಪನೆ ನನಗೆ ಎಷ್ಟೋ ಬಾರಿ ಬಂದಿದೆ.

ಈ ಪುಸ್ತಕವನ್ನು ಬರೆದಿರುವ ಪ್ರತಾಪ್ ಸಿಂಹ ಚುರುಕು ಬುದ್ಧಿಯ, ವ್ಯಕ್ತಿಪರ ದುಡಿಮೆಯ, ಅಪರೂಪದ ಧೈರ್ಯದ, ಸ್ವತಂತ್ರ ಬುದ್ಧಿಯ ಪತ್ರಕರ್ತ. ಅವರ ಲೇಖನ ಮತ್ತು ಪುಸ್ತಕಗಳನ್ನು ಕರ್ನಾಟಕದ ಜನತೆ ಮುಗಿಬಿದ್ದು ಓದುತ್ತಾರೆ. ಅವರು ಮೋದಿಯವರನ್ನು ಕುರಿತು ಸಾಕಷ್ಟು ವಿಷಯ ಸಂಗ್ರಹಿಸಿ ಬರೆದಿರುವ ಈ ಪರಿಚಯಾತ್ಮಕ ಪುಸ್ತಕವನ್ನು ಓದುಗರು ಇನ್ನೂ ಹೆಚ್ಚಿನ ಆಸ್ಥೆಯಿಂದ ಓದುತ್ತಾರೆಂಬ ಭರವಸೆ ನನಗಿದೆ. ಇನ್ನೂ ಹೆಚ್ಚು ವಿವರ ಮತ್ತು ವಿಶ್ಲೇಷಣೆಯೊಡನೆ ಪ್ರತಾಪ್ ಸಿಂಹರು ಮೋದಿಯವರನ್ನು ಕುರಿತು ಇನ್ನೊಂದು ಗ್ರಂಥವನ್ನು ಬರೆಯಲೆಂದು ಆಶಿಸುತ್ತೇನೆ.

**ಎಸ್.ಎಲ್. ಭೈರಪ್ಪ**
ಮೈಸೂರು
23.4.2008



# ನನ್ನುಡಿ



ಪ್ರತಿ ಶನಿವಾರಕ್ಕೂ ಹೊಸದೊಂದು ವಿಚಾರವನ್ನು ಹೆಕ್ಕಿ ತಂದು ಬರೆಯುವುದು ನನಗಂತೂ ರೂಢಿಯಾಗಿ ಬಿಟ್ಟಿದೆ. ಹಾಗೆ ಬರೆದ ಲೇಖನಗಳನ್ನು ನೀವು ಕಾದು ಓದುತ್ತೀರಿ. ನನ್ನ ಎಷ್ಟೋ ಓದುಗರು ಈ ಶನಿವಾರದ ಅಂಕಣವನ್ನು ಓದಿದ ಮರುಕ್ಷಣವೇ ಮುಂದಿನ ವಾರದವರೆಗೂ ಕಾಯುವ ಕಾಯಕ ಆರಂಭಿಸುತ್ತಾರೆ. ಶನಿವಾರದವರೆಗೂ ಕಾಯುವುದಕ್ಕಾಗುವುದಿಲ್ಲ, ನಿತ್ಯವೂ ನೀನೇಕೆ ಬರೆಯಬಾರದು ಎಂದು ಕೇಳಿದವರು, ಸಲಹೆ ನೀಡಿದವರೂ ಸಾಕಷ್ಟಿದ್ದಾರೆ. ಇವೆಲ್ಲದಕ್ಕಿಂತ ಆಶ್ಚರ್ಯ ತರುವ ಸಂಗತಿಯೆಂದರೆ ಶನಿವಾರದವರೆಗೂ ಕಾದು, ಆಸ್ಥೆಯಿಂದ ಓದಿದ ಲೇಖನಗಳೇ 'ಬೆತ್ತಲೆ ಜಗತ್ತು' ಎಂಬ ಹೆಸರಿನಡಿ ಪುಸ್ತಕವಾಗಿ ಬಂದಾಗಲೂ ಮುಗಿಬಿದ್ದು ಖರೀದಿಸುವ ನಿಮ್ಮ ಪ್ರೀತಿ!

ಇಂತಹ ಪ್ರೀತಿ, ವಿಶ್ವಾಸವನ್ನು ಕಂಡಾಗಲೆಲ್ಲ ನಾನು ಪ್ರೇರೇಪಿತನಾಗಿದ್ದೂ ಇದೆ. ಕಳೆದ ಎಂಟು ವರ್ಷಗಳಿಂದ ಸತತವಾಗಿ ಅಂಕಣ ಬರೆಯುತ್ತಾ ಬರುತ್ತಿರುವ ನಾನು, ಪುಸ್ತಕವೊಂದನ್ನು ಬರೆಯುವ ಸಾಹಸಕ್ಕೇಕೆ ಕೈಹಾಕಬಾರದು ಎಂದು ಸಾಕಷ್ಟು ಸಲ ಅಂದುಕೊಂಡಿದ್ದೇನೆ.

ಆದರೆ ಕಾಲ ಕೂಡಿ ಬಂದಿರಲಿಲ್ಲ.

"ಸೊಕ್ಕನ್ನೂ ಸಂಪಾದಿಸಿಕೊಳ್ಳಬೇಕು. ಗರ್ವವನ್ನೂ ಗಳಿಸಿಕೊಳ್ಳಬೇಕು" ಎಂದು ನಂಬಿದವನು ನಾನು. ಅಷ್ಟಕ್ಕೂ ಸೊಕ್ಕು, ಗರ್ವಗಳು ಪುಕ್ಕಟೆ ಬರುವುದಿಲ್ಲ. ಒಂದು ವಿಷಯವನ್ನು ಚೆನ್ನಾಗಿ ತಿಳಿದುಕೊಂಡಿದ್ದರಷ್ಟೇ ಹಠಕ್ಕೆ ಬಿದ್ದಂತೆ ವಾದಿಸಲು, ಪ್ರತಿವಾದದ ಪಟ್ಟುಹಾಕಿ ಇತರರ ಬಾಯಿ ಮುಚ್ಚಿಸಲು ಸಾಧ್ಯ. ಆದರೆ ಕೆಲವೊಮ್ಮೆ ತೀವ್ರತರ ವಿರೋಧ ಎದುರಾದಾಗ ನನ್ನ ನಂಬಿಕೆಯ ಬಗ್ಗೆ ನನ್ನೊಳಗೇ ಸಣ್ಣ ಅನುಮಾನ, ಆತಂಕ ಮೂಡಿದ್ದೂ ಇದೆ. ಹಾಗೆ ಅನುಮಾನ ಮೂಡಿದಾಗಲೆಲ್ಲ ಗುಜರಾತ್ ಮುಖ್ಯಮಂತ್ರಿ ನರೇಂದ್ರ ಮೋದಿ ನೆನಪಾಗುತ್ತಾರೆ. ನನ್ನ ವಿಶ್ವಾಸ ಗಟ್ಟಿಯಾಗುತ್ತದೆ. ಒಂದು ಸಣ್ಣ ಸ್ಥಳೀಯ ಪತ್ರಿಕೆಯಿಂದ

ಅಂತಾರಾಷ್ಟ್ರೀಯ ಮಾಧ್ಯಮಗಳವರೆಗೂ ಟೀಕೆ, ದೂಷಣೆಗೆ ಗುರಿಯಾದ ವ್ಯಕ್ತಿ ಅವರು. ಅಂತಹ 'ಮಾನ್‌ಸ್ಟರ್ ಮಾಧ್ಯಮ'ಗಳ ವಿರೋಧವನ್ನೂ ಲೆಕ್ಕಿಸದೇ ತಮ್ಮ ನಂಬಿಕೆಯನ್ನು ಬಿಡದೆ ಸಾಧಿಸಿದವರು ಮೋದಿ. ಸಾವಿರಾರು ಜನರ ಮಾರಣಹೋಮಕ್ಕೆ ಕಾರಣವಾದ ಗುಜರಾತ್ ಹಿಂಸಾಚಾರದ ಕ್ಷಮೆ, ವಿಷಾದ ವ್ಯಕ್ತಪಡಿಸುವುದಕ್ಕೂ ಸ್ಪಷ್ಟವಾಗಿ 'ನೋ' ಎನ್ನುವ ಮೋದಿಯವರನ್ನು ದ್ವೇಷಿಸುವವರು ಸಾಕಷ್ಟಿದ್ದಾರೆ. "ಗುಜರಾತ್ ಮಾಡೆಲ್ ಅಂದರೆ 2002ನ್ನು ಪುನರಾವರ್ತನೆಗೊಳಿಸುವುದೇ?" ಎಂದು ಯಾರಾದರೂ ಸಿಟ್ಟಿನಿಂದ ಕೇಳಿದರೆ "ಹಾಗಾದರೆ ನೀವು ಗೋಧ್ರಾ ರೈಲು ದುರಂತವನ್ನು ಮರುಕಳಿಸುತ್ತೀರಾ?" ಎಂದು ಮೋದಿ ಪ್ರತಿ ಪ್ರಶ್ನೆ ಹಾಕುತ್ತಾರೆ. ಅವರ ಮಾತುಗಳು ಸೊಕ್ಕಿನಿಂದ ಕೂಡಿದ್ದರೂ ಅವುಗಳಲ್ಲಿ ತರ್ಕವಿದೆ. ನಾವೇಕೆ ಮೋದಿಯವರನ್ನು ಇಷ್ಟಪಡುತ್ತೇವೆಂದರೆ ನಮ್ಮಲ್ಲೂ ಒಬ್ಬ ಮೋದಿ ಇದ್ದಾರೆ! ಮಿಗಿಲಾಗಿ ನಾವು ವೈಯಕ್ತಿಕ ಹಾಗೂ ಸಾರ್ವಜನಿಕ ಜೀವನದಲ್ಲಿ ಶುದ್ಧಚಾರಿತ್ರ್ಯವನ್ನು ಹೊಂದಿದ್ದರಷ್ಟೇ ಗರ್ವವನ್ನು ಬೆಳೆಸಿಕೊಳ್ಳಲು ಸಾಧ್ಯ. ಈ ಹಿನ್ನೆಲೆಯಲ್ಲಿ ನಾನು ಬರೆಯುವ ಮೊದಲ ಪುಸ್ತಕ ಸಹಜವಾಗಿಯೇ ಮೋದಿಯವರ ಬಗೆಗಿನದ್ದಾಗಿದೆ.

ಅವರು ನನಗೆ ಯಾವತ್ತೂ ಅಚ್ಚರಿಯಾಗಿ ಕಾಡುತ್ತಾರೆ.

ಅವರ ಬಗ್ಗೆ ಯೋಚಿಸಿದಾಗಲೆಲ್ಲ ಅಚ್ಚರಿಯಾಗುತ್ತದೆ. ಅಂತಹ ಅಚ್ಚರಿಯ ಬೆನ್ನುಹತ್ತಿ ಹೊರಟಾಗ ಅವರ ಬದುಕಿನ ಮೈನವಿರೇಳಿಸುವ ಪುಟಗಳು ತೆರೆದುಕೊಳ್ಳುತ್ತಾ ಹೋದವು. ಅವುಗಳನ್ನು ನಿಮ್ಮ ಮುಂದೆ ಮುಂದೆ ತೆರೆದಿಡುವ ಪ್ರಯತ್ನ ಇಲ್ಲಿದೆ.

ಈ ಪ್ರಯತ್ನದಲ್ಲಿ ನಾನೆಷ್ಟು ಯಶಸ್ವಿಯಾಗಿದ್ದೇನೆ ಎಂದು ತೀರ್ಪು ಕೊಡಬೇಕಾದವರು ನೀವೇ.

**ಪ್ರತಾಪ್ ಸಿಂಹ**
ವಿಜಯ ಕರ್ನಾಟಕ



# ಆಭಾರಿ

ವಿದೇಶ ಪ್ರವಾಸಕ್ಕೆ ಸಿದ್ಧತೆ ನಡೆಸುತ್ತಿರುವ ಒತ್ತಡದ ನಡುವೆಯೂ ಈ ಪುಸ್ತಕದ ಕರಡು ಪ್ರತಿಯ ಮೇಲೆ ಕಣ್ಣಾಡಿಸಿ, ತಪ್ಪುಗಳನ್ನು ಸರಿಪಡಿಸಿ, ಅನಿಸಿಕೆ ಬರೆದುಕೊಟ್ಟ ಖ್ಯಾತ ಸಾಹಿತಿ ಎಸ್.ಎಲ್. ಭೈರಪ್ಪನವರಿಗೆ ನಾನು ಆಭಾರಿ.

ಇಂತಹ ಒಂದು ಪುಸ್ತಕದ ಕಲ್ಪನೆಯನ್ನು ಬಿತ್ತಿದ ಹಾಗೂ ಅದನ್ನು ಕೃತಿಗಿಳಿಸಲು ಕಾರಣರಾದ 'ಅಸೀಮಾ' ನಿಯತಕಾಲಿಕೆಯ ಸಂಪಾದಕ, ಸ್ನೇಹಿತ ಮಹೇಶ್ ಪ್ರಭುಗೆ,

ಈ ಪುಸ್ತಕವನ್ನು ಅತಿ ಶೀಘ್ರವಾಗಿ ಹೊರತರುವಲ್ಲಿ ಎಲ್ಲ ರೀತಿಯಿಂದಲೂ ನೆರವಾಗಿರುವ ಆತ್ಮೀಯ ಸ್ನೇಹಿತರಾದ ಚೈತನ್ಯ ಹೆಗಡೆ, ತ್ರಿಶ ಪುಣಚ, ಶ್ರೀವತ್ಸ ಅಡಿಗ, ಕೆ.ಎಸ್. ಜಗನ್ನಾಥ್, ವಾದಿರಾಜ್ ಅವರಿಗೆ,

ಅಕ್ಕನ ಪ್ರೀತಿ, ವಾತ್ಸಲ್ಯ ನೀಡಿರುವ ಶಶಿರೇಖಾ ಹೆಗಡೆಗೆ,

ನನ್ನ ಎಲ್ಲ ಪುಸ್ತಕಗಳನ್ನೂ ಅಚ್ಚುಕಟ್ಟಾಗಿ ಪ್ರಕಟಿಸುತ್ತಿರುವ ಹಾಗೂ ಕಷ್ಟ ಕಾಲದಲ್ಲಿ ಸಹಾಯವನ್ನೂ ಮಾಡುತ್ತಿರುವ ಸಾಹಿತ್ಯ ಪ್ರಕಾಶನದ ಎಂ.ಎ. ಸುಬ್ರಹ್ಮಣ್ಯ,

ಸದಾ ಬೆಂಗಾವಲಿಗೆ ನಿಲ್ಲುವ, ಬೆನ್ನುತಟ್ಟಿ ಪ್ರೋತ್ಸಾಹಿಸುವ ನನ್ನ ನೆಚ್ಚಿನ ಸಂಪಾದಕರಾದ ವಿಶ್ವೇಶ್ವರ್ ಭಟ್ ಅವರಿಗೆ

ಹಾಗೂ ಓದುಗರಾದ ನಿಮಗೆ ನಾನು ಆಭಾರಿ.

# ಮೋದಿ ಹಾದಿಯ ತಿರುವುಗಳು






# 1
# ಗುಜರಾತ್‌ನ ತೋಟದಲ್ಲಿ ಅರಳಿದ 'ಪೀಲೂ ಫೂಲ್'!

ಆವನ ಓರಗೆಯ ಗೆಳೆಯರೆಲ್ಲ ಆಟ, ಊಟ, ಚೆಲ್ಲಾಟಗಳಲ್ಲಿ ಮೈಮರೆಯುತ್ತಿದ್ದರೆ ಹನ್ನೆರಡು ವರ್ಷದ ಬಾಲಕನೊಬ್ಬ ಮೌನವಾಗಿ ಅದೇನನ್ನೋ ಧೇನಿಸುತ್ತಿದ್ದ. ಅವನ ಮೌನದೊಳಗೆ ಸಮಾಜವನ್ನು ಬೇರ್ಪಡಿಸಿದ್ದ ಅಸಮಾನತೆಯೆಡೆಗೆ ಅಸಹನೆಯಿತ್ತು. ಮಾನವ ಸಂಬಂಧಗಳನ್ನೇ ತಲ್ಲಣಗೊಳಿಸಿದ್ದ ಅಸ್ಪೃಶ್ಯತೆಯ ಬಗ್ಗೆ ಆಕ್ರೋಶವಿತ್ತು. ಪ್ರಗತಿಯ ಹಾದಿಯನ್ನೇ ಕಾಣದ ಸಾಮಾಜಿಕ ವ್ಯವಸ್ಥೆಯ ಬಗ್ಗೆ ತೀವ್ರ ಅಸಮಾಧಾನವಿತ್ತು. ಅಂತಹ ಅಸಹನೆ, ಆಕ್ರೋಶ, ಅಸಮಾಧಾನಗಳ ಜತೆಜತೆಗೇ ಆ ಪೋರನ ಮನಸ್ಸಿನ ಒಂದು ಮೂಲೆಯಲ್ಲಿ ತನ್ನ ಜನರನ್ನು ಜತನದಿಂದ ಒಂದುಗೂಡಿಸುವ ಕಾಳಜಿಯಿತ್ತು, ಪ್ರೀತಿಯೂ ಇತ್ತು, ಜಾತಿರಹಿತ ಸಮಾಜವೊಂದನ್ನು ಕಟ್ಟುವ ಕನಸಿತ್ತು. ಇವೆಲ್ಲವುಗಳೂ ಒಂದುಗೂಡಿದಾಗ ಆವನ ಕಲ್ಪನೆಯಲ್ಲಿ ಕುಡಿಯೊಡೆದಿದ್ದೇ "ಪೀಲೂ ಫೂಲ್"!

ಸಾಮಾನ್ಯ ಹುಡುಗರೆಲ್ಲ ಹೋಂ ವರ್ಕ್ ಬರೆಯಲೂ ಹೆಣಗಾಡುವ ವಯಸ್ಸಿನಲ್ಲಿ ಈ ಬಾಲಕ ಅಂದಿನ ಸಾಮಾಜಿಕ ವ್ಯವಸ್ಥೆಯನ್ನೇ ಚಿತ್ರಿಸಿದ ನಾಟಕವೊಂದನ್ನು ಬರೆದು ಎಲ್ಲರನ್ನೂ ಚಕಿತಗೊಳಿಸಿದ. ಆತ ರಚಿಸಿದ್ದ "ಪೀಲೂ ಫೂಲ್"(ಹಳದಿ ಹೂವು) ಎಂಬ ಏಕಾಂಕ ನಾಟಕ ಗುಜರಾತಿನ ಅಂಗಳದಲ್ಲಿ ಆಶಾವಾದದ ಮೊಗ್ಗೊಂದನ್ನು ಅರಳಿಸಿತ್ತು.

ಅಷ್ಟಕ್ಕೂ "ಪೀಲೂ ಫೂಲ್"ನಲ್ಲಿ ಏನಿತ್ತು?

ಅವಳೊಬ್ಬಳು ದಲಿತ ಮಹಿಳೆ. ಆಕೆಗೊಂದು ಮಗುವಿತ್ತು. ಒಮ್ಮೆ ಅನಾರೋಗ್ಯಕ್ಕೆ ತುತ್ತಾದ ಆ ಮಗು ಹಾಸಿಗೆ ಹಿಡಿಯಿತು. ಆದರೆ ದಲಿತಳಾದ ಕಾರಣ ಆಕೆಯ ಮಗುವಿಗೆ ಚಿಕಿತ್ಸೆ ನೀಡಲು ಯಾರೂ ಒಪ್ಪುವುದಿಲ್ಲ. ಸರ್ವಸಂಗ ಪರಿತ್ಯಾಗಿಗಳಾದ ಸಾಧುಗಳ ಬಳಿಗೆ ಹೋದ ಆಕೆ ತನ್ನ ಕರುಳ ಕುಡಿಯ ಪ್ರಾಣ ಉಳಿಸಿಕೊಡುವಂತೆ ಬೇಡಿಕೊಳ್ಳುತ್ತಾಳೆ. ಊಹೂಂ,

ಸಾಧುಗಳೂ ಒಳ್ಳೆ ಎನ್ನುತ್ತಾರೆ. ಆದರೆ ತಾಯಿ ಹೃದಯ ಕೇಳಬೇಕಲ್ಲಾ, ಹೇಗಾದರೂ ಮಾಡಿ ಮಗುವನ್ನು ಉಳಿಸಿಕೊಳ್ಳಲೇಬೇಕೆಂಬ ಆಸೆಯಿಂದ ಮಾಟ-ಮಂತ್ರ ಮಾಡುವವರ ಬಳಿಗೆ ಹೋಗುತ್ತಾಳೆ. ಮಗುವನ್ನು ಉಳಿಸಿಕೊಡಿ ಅಂತ ಅಂಗಲಾಚುತ್ತಾಳೆ. ಆದರೆ ಅಲ್ಲಿಯೂ ನಿರಾಸೆಯೇ ಕಾದಿತ್ತು. ಹಾಗೆ, ಆಕೆ ಹತಾಶಳಾಗಿರುವ ಸಂದರ್ಭದಲ್ಲಿ, ದೇವಸ್ಥಾನಕ್ಕೆ ಹೋಗಿ ''ಹಳದಿ ಹೂ''(ಪೀಲೂ ಫೂಲ್)ವೊಂದನ್ನು 'ಪ್ರಸಾದ'ವಾಗಿ ಪಡೆದುಕೊಂಡು ಬಂದರೆ ನಿನ್ನ ಮಗುವಿಗೆ ಚಿಕಿತ್ಸೆ ನೀಡುತ್ತೇನೆ ಎಂದು ಯಾರೋ ಒಬ್ಬರು ಆಸೆ ತೋರಿಸುತ್ತಾರೆ. ಅವರ ಮಾತು ಕೇಳಿದ ಆಕೆಗೆ ಹೋದ ಜೀವ ಮರಳಿ ಬಂದಂತಾಗುತ್ತದೆ. ಆದರೆ ಸಾಮಾಜಿಕ ವ್ಯವಸ್ಥೆ ಬಿಡಬೇಕಲ್ಲ? ಕೆಳಜಾತಿಗೆ ಸೇರಿದವರನ್ನು ಜನರೇ ಹತ್ತಿರಕ್ಕೆ ಬಿಟ್ಟುಕೊಳ್ಳದಿದ್ದ ಸಂದರ್ಭ ಅದು. ಇನ್ನು ಮಡಿವಂತಿಕೆಯ ಮೂರ್ತ ರೂಪದಂತಿದ್ದ ದೇವಾಲಯಗಳನ್ನು ಕೇಳಬೇಕೆ?! ಪ್ರಸಾದ ನೀಡುವ ಮಾತು ಹಾಗಿರಲಿ, ದೇವಾಲಯದೊಳಕ್ಕೆ ಪ್ರವೇಶಿಸುವುದಕ್ಕೂ ಆ ದಲಿತ ಮಹಿಳೆಗೆ ಅವಕಾಶ ನೀಡಲಿಲ್ಲ, ಅತ್ತು-ಕರೆದರೂ ಸ್ಪಂದಿಸಬೇಕಾದ ಕಿವಿಗಳೇ ಕಿವುಡಾಗಿದ್ದವು, ಅನುಕಂಪವಿಲ್ಲದೆ ಹೃದಯಗಳು ಕಲ್ಲಾಗಿದ್ದವು. ಒಂದೆಡೆ ಆಕೆ ಪ್ರಸಾದಕ್ಕಾಗಿ ಅಂಗಲಾಚುತ್ತಿದ್ದರೆ ಇನ್ನೊಂದೆಡೆ ಅನಾಥವಾಗಿ ಮಲಗಿದ್ದ ಮಗು ಸಾವಿನ ಜತೆ ಸೆಣಸಾಡುತ್ತಿತ್ತು. ಎಷ್ಟೇ ಬೇಡಿಕೊಂಡರೂ ಆಕೆಗೆ ಪ್ರಸಾದ ದೊರೆಯಲಿಲ್ಲ, ಅಷ್ಟೇ ಅಲ್ಲ, ಆಕೆಯನ್ನು ದೇವಸ್ಥಾನದಿಂದ ಹೊರದಬ್ಬಿ ಅವಮಾನ ಮಾಡಿ ಕಳುಹಿಸಿದರು. ಹತಾಶಳಾದ ಆಕೆ ಮನೆಗೆ ಬರುವಷ್ಟರಲ್ಲಿ ಒಂಟಿಯಾಗಿ ಬಿಟ್ಟುಹೋಗಿದ್ದ ಮಗುವಿನ ಪ್ರಾಣವೇ ಹಾರಿ ಹೋಗಿರುತ್ತದೆ.

ಇದು ''ಪೀಲೂ ಫೂಲ್'' ನಾಟಕದಲ್ಲಿ ಬರುವ ಸನ್ನಿವೇಶ.

ದೇವರ ಎದುರು ಎಲ್ಲರೂ ಸಮಾನರು. ದೇವರ ಪ್ರಸಾದ ಎಲ್ಲರಿಗೂ ಸಲ್ಲಬೇಕು ಎಂಬುದೇ 'ಪೀಲೂ ಫೂಲ್'ನ ಸಂದೇಶ. ಆದರೆ ಅದು ಬರೀ ನಾಟಕವಾಗಿರಲಿಲ್ಲ, ಗುಜರಾತ್‌ನಲ್ಲಿದ್ದ ಪರಿಸ್ಥಿತಿಯ ಪ್ರತಿಬಿಂಬವಾಗಿತ್ತು. ಮೇಲು-ಕೀಳೆಂಬ ತಾರತಮ್ಯಗಳಿಂದಾಗಿ ಸಮಾಜ ಸಂಪೂರ್ಣವಾಗಿ ಒಡೆದಿತ್ತು. ಕಂದಕಗಳು ಮುಚ್ಚಲಾಗದಷ್ಟು ದೊಡ್ಡದಾಗಿದ್ದವು. ಗುಜರಾತಿಗಳು ವ್ಯಾಪಾರಕ್ಕೆ ಹೆಸರಾದವರು. ತಾರತಮ್ಯದಲ್ಲೂ ಅಷ್ಟೇ 'ಹೆಸರು' ಮಾಡಿದ್ದರು. ಯಾವ ಪಕ್ಷಗಳು ಅಧಿಕಾರಕ್ಕೆ ಬಂದರೂ ಸಮಾಜದಲ್ಲಿ ಐಕ್ಯತೆಯನ್ನು ತರಲು ಮಾತ್ರ ಸಾಧ್ಯವಿರಲಿಲ್ಲ. ಇಂದು ನೀವೇನಾದರೂ ಗುಜರಾತನ್ನು ನೋಡಿದರೆ 'ಪೀಲೂ ಫೂಲ್' ನಾಟಕದಲ್ಲಿ ತೋರಿಸಿದ್ದು ಗುಜರಾತನ್ನೇ? ಎಂದು ಆಶ್ಚರ್ಯಪಡುತ್ತೀರಿ, ಆ ಮಟ್ಟಿಗೆ ಬದಲಾವಣೆಯಾಗಿದೆ! ಇಡೀ ದೇಶದಲ್ಲಿಯೇ ಕಾಣಲಾಗದಂತಹ ಸಾಮಾಜಿಕ ಏಕತೆ ಕಂಡು ಬರುತ್ತಿದೆ. ಅಲ್ಲಿ 'ಜಾತಿರಹಿತ ಹಿಂದೂ ಸಮಾಜ' ನಿರ್ಮಾಣಗೊಳ್ಳುತ್ತಿದೆ. ಜನರು ಜಾತಿ





ಭೇದ ಮರೆತು ನವರಾತ್ರಿ ಆಚರಿಸುತ್ತಿದ್ದಾರೆ, ಒಟ್ಟಿಗೇ 'ದಾಂಡಿಯಾ' ಆಡುತ್ತಿದ್ದಾರೆ. ಅಂತಹ ಸೌಹಾರ್ದಯುತ ಹಾಗೂ ಆರೋಗ್ಯಕರ ಸಮಾಜವಾಗಿ ಗುಜರಾತ್ ಹೊರಹೊಮ್ಮುತ್ತಿದೆ. ಸುಮಾರು ನಲವತ್ತೈದು ವರ್ಷಗಳ ಹಿಂದೆ ''ಪೀಲೂ ಫೂಲ್'' ನಾಟಕವನ್ನು ಬರೆದು, ಅಭಿನಯಿಸಿದ ಹುಡುಗನ ಕನಸು ಇಂದು ನನಸಾಗಿದೆ. ಆಶ್ಚರ್ಯವೆಂದರೆ ಅಂದಿನ ಕನಸು ಕಂಗಳ ಬಾಲಕನೇ ಇಂದಿನ ಗುಜರಾತಿನ ಗಂಡೆದೆಯ ಮುಖ್ಯಮಂತ್ರಿ, ದೂರದೃಷ್ಟಿಯ ನೇತಾರ!

ನರೇಂದ್ರ ದಾಮೋದರದಾಸ್ ಮೋದಿ!!

ಅವರು ಅಂದು 'ಪೀಲೂ ಫೂಲ್'ನಲ್ಲಿ ಮಾಡಿದ್ದೂ ಏಕಪಾತ್ರಾಭಿನಯ, ಇಂದು ಗುಜರಾತನ್ನು ಪ್ರಗತಿಯಪಥದತ್ತ ಕೊಂಡೊಯ್ಯುತ್ತಿರುವುದೂ ಏಕಾಂಗಿಯಾಗಿಯೇ. ಸ್ವತಃ ಕೆಳಜಾತಿಗೆ(ಗಾಣಿಗ) ಸೇರಿದ ಮೋದಿಯವರು ಸಾಮಾಜಿಕ ತಾರತಮ್ಯದ ಬಗ್ಗೆ ಸುಖಾಸುಮ್ಮನೆ ಭಾಷಣ ಮಾಡಿದವರಲ್ಲ, ಅವರ ಯಾವ ಭಾಷಣಗಳಲ್ಲೂ ಮೇಲ್ಜಾತಿ-ಕೆಳಜಾತಿಗಳೆಂಬ ಪ್ರಬೇಧಗಳು ಕೇಳಿಬರುವುದಿಲ್ಲ, ಉತ್ತರ ಪ್ರದೇಶದ ಮಾಯಾವತಿಯವರಂತೆ ಅಧಿಕಾರಕ್ಕೇರುವುದಕ್ಕಾಗಿ 'ವೋಟ್ ಹಮಾರಾ, ರಾಜ್ ತುಮ್ಹಾರಾ. ಯೇ ನಹೀ ಚಲೇಗಾ' ಅಂತ ಮೇಲ್ಜಾತಿಯವರ ವಿರುದ್ಧ ಹಗೆತನವನ್ನೂ ಸಾಧಿಸಿದವರಲ್ಲ, ''ಗುಜರಾತ್ ಅಸ್ಮಿತಾ''(ಆತ್ಮಗೌರವ, ಹೆಮ್ಮೆ) ಎಂಬ ಸೂತ್ರವನ್ನಿಟ್ಟುಕೊಂಡು ಜನರನ್ನು ಒಗ್ಗೂಡಿಸಲು ಯತ್ನಿಸಿದರು. ನಾವೆಲ್ಲ ಒಂದೇ ಎಂಬ ಸಂದೇಶವನ್ನು ಮುಟ್ಟಿಸಲು, ಮನವರಿಕೆ ಮಾಡಿಕೊಡಲು ಪ್ರಯತ್ನಿಸಿದರು. ಅಂತಹ ಸಮಷ್ಟಿಭಾವವನ್ನು ಮೂಡಿಸುತ್ತಿರುವ ಕಾರಣ ಗುಜರಾತ್ ಬಗ್ಗೆ ಯಾರಾದರೂ ವಿನಾಕಾರಣ ಟೀಕೆ ಮಾಡಿದರೆ ಅಲ್ಲಿನ ಜನ ರೊಚ್ಚಿಗೇಳುತ್ತಾರೆ, ಒಟ್ಟಾಗಿ ಮುಗಿಬೀಳುತ್ತಾರೆ. ನರ್ಮದಾ ಅಣೆಕಟ್ಟಿನ ಬಗ್ಗೆ ಅನಗತ್ಯವಾಗಿ ಮೂಗುತೂರಿಸಿದ ಬಾಲಿವುಡ್ ನಟ ಆಮೀರ್ ಖಾನ್‌ಗೆ ಇದರ ಅನುಭವವಾಗಿದೆ. ಗುಜರಾತ್ ಜನರಲ್ಲಿ ಇಂದು ಕಾಣುತ್ತಿರುವ 'ಆತ್ಮಗೌರವ'ವೆಂಬ 'ಸಾಕ್ಷಿಪ್ರಜ್ಞೆ'ಗೆ ದೊಡ್ಡ ಇತಿಹಾಸವೂ ಇದೆ.

ಒಮ್ಮೆ ಮಹಾರಾಜ ಅಕ್ಬರ್‌ಗೆ 'ದೀಪಕ್ ರಾಗ'ವನ್ನು ಕೇಳುವ ಬಯಕೆಯಾಗುತ್ತದೆ. ಮೊಘಲ್ ರಾಜರಲ್ಲಿಯೇ ಅತ್ಯಂತ ಸಹನಶೀಲನಾಗಿದ್ದ ಆತನ ಆಸ್ಥಾನದಲ್ಲಿ ಬೀರಬಲ್ಲನಂಥ ವಿದೂಷಕನ ಜತೆಗೆ ತಾನ್‌ಸೇನ್‌ನಂತಹ ಮಹಾನ್ ಸಂಗೀತಗಾರನೂ ಇರುತ್ತಾನೆ. ಇವತ್ತಿಗೂ ಸಂಗೀತವೆಂದ ಕೂಡಲೇ ತಟ್ಟನೆ ನೆನಪಾಗುವುದು ತಾನ್‌ಸೇನ್ ಹೆಸರು. ಆತ ಹಾಡಲು ನಿಂತರೆ ಜನರೇಕೇ, ಪ್ರಕೃತಿಯೂ ತಲೆದೂಗುತ್ತಿತ್ತು. ಅಂತಹ ಸಂಗೀತ ದಿಗ್ಗಜನಿಗೆ

ಅಕ್ಬರನ ಕರೆ ಹೋಗುತ್ತದೆ. ಅಂದು ತಾನ್‌ಸೇನ್ ಆವೇಶಭರಿತನಾಗಿ ಹಾಡುತ್ತಿದ್ದರೆ ಆತನ ದೇಹ ಉರಿಯುವ ಜ್ವಾಲೆಯಂತಾಗುತ್ತದೆ. ಆತನ ಪ್ರಾಣಕ್ಕೇ ಕುತ್ತು ಎದುರಾಗುತ್ತದೆ. ಇರುವುದೊಂದೇ ದಾರಿ. ಯಾರಾದರೂ 'ಮಲ್ಹಾರ್ ರಾಗ'ದಲ್ಲಿ ಹಾಡಬೇಕು. ಆದರೆ ಅಂತಹ ಕಲಾವಿದರಾರೂ ಕಾಣುತ್ತಿಲ್ಲ. ಯಾವ ಹೆಸರುಗಳೂ ನೆನಪಾಗುತ್ತಿಲ್ಲ. ಇತ್ತ ಕುದಿಯುವ ದೇಹವೂ ತಣ್ಣಗಾಗುತ್ತಿಲ್ಲ. ಹಾಗಾಗಿ 'ಮಲ್ಹಾರ್ ರಾಗ'ದಲ್ಲಿ ಹಾಡುವ ಸಂಗೀತಗಾರರನ್ನು ಹುಡುಕುತ್ತಾ ಹೊರಡುತ್ತಾನೆ ತಾನ್‌ಸೇನ್. ಹಾಗೆ ಹುಡುಕುತ್ತಾ ಹುಡುಕುತ್ತಾ ಆತ ಗುಜರಾತ್‌ನ ವಾಡ್‌ನಗರಕ್ಕೆ ಬರುತ್ತಾನೆ. ಅಲ್ಲಿ 300ಕ್ಕೂ ಹೆಚ್ಚು 'ಸಾರಂಗಿ' ವಾದಕರಿದ್ದಾರೆ ಎಂದು ಯಾರೋ ಹೇಳಿರುತ್ತಾರೆ. ಇಂತಹ ಭರವಸೆಯ ಆಶಾಕಿರಣವೇ ಆತನನ್ನು ವಾಡ್‌ನಗರಕ್ಕೆ ಎಳೆದು ತಂದಿರುತ್ತದೆ. ಅಷ್ಟಕ್ಕೂ ಪ್ರಾಣ ಉಳಿಸಿಕೊಳ್ಳಲು ಬೇರೆ ದಾರಿಯೇ ಇಲ್ಲದಾಗಿರುತ್ತದೆ.

ಇತ್ತ 'ಶರ್ಮಿಷ್ಠಾ ಸರೋವರ'ಕ್ಕೆ ನೀರು ತರಲು ಆಗಮಿಸಿದ್ದ ತಾನಾ ಮತ್ತು ರೀರೀಗೆ ತಾನ್‌ಸೇನ್ ಆಗಮಿಸಿರುವ ಸುದ್ದಿ ತಿಳಿದುಬರುತ್ತದೆ. ಆತನಿಗೆ ಎದುರಾಗಿರುವ ಅಪಾಯವೂ ಗೊತ್ತಾಗುತ್ತದೆ. ಮೊದಲೇ ಸಂಗೀತ ಸುಧೆಯನ್ನು ಉಣಬಡಿಸಿ ವಾಡ್‌ನಗರದ ಮೆಚ್ಚುಗೆಗೆ ಪಾತ್ರರಾಗಿದ್ದ ತಾನಾ ಮತ್ತು ರೀರೀಗೆ ತಾನ್‌ಸೇನ್ ಅವರ ಮುಂದೆ ಹಾಡುವುದು ಗೌರವದ ವಿಷಯವೆನಿಸಿತು. ಅಂದು ಅವರಿಬ್ಬರೂ 'ಮಲ್ಹಾರ್ ರಾಗ'ದಲ್ಲಿ ಮಂತ್ರಮುಗ್ಧರಾಗುವಂತೆ ಹಾಡಿದಾಗ ತಾನ್‌ಸೇನ್‌ನ ದೇಹ ತಣಿದು ಅಪಾಯ ದೂರವಾಗುತ್ತದೆ.

ಈ ವಿಷಯ ಮಹಾರಾಜ ಅಕ್ಬರ್‌ಗೆ ತಿಳಿಯುತ್ತದೆ.

ಅವರಿಬ್ಬರನ್ನೂ ಕೂಡಲೇ ಕರೆತನ್ನಿ ಎಂದು ತನ್ನ ಭಟರನ್ನು ವಾಡ್‌ನಗರಕ್ಕೆ ಕಳುಹಿಸಿ ಕೊಡುತ್ತಾನೆ. ಆದರೆ ತಾನಾ ಮತ್ತು ರೀರೀಗೆ ರಾಜನ ಆಸ್ಥಾನದಲ್ಲಿ ಹಾಡಲು ಮನಸ್ಸು ಒಪ್ಪುವುದಿಲ್ಲ. ಅದು ತಮ್ಮ ಪರಂಪರೆಗೆ ವಿರುದ್ಧ ಎಂದೆನಿಸುತ್ತದೆ. ಹಾಗಂತ ಒಲ್ಲೆ ಎಂದರೆ ರಾಜನಿಗೆ ಅವಮಾನ ಮಾಡಿದಂತೆ. ಅದರ ಪರಿಣಾಮವೂ ಚೆನ್ನಾಗಿರುವುದಿಲ್ಲ. ಇಂತಹ ಸಂದಿಗ್ಧ ಸಂದರ್ಭದಲ್ಲಿ ಮನಸ್ಸಿಗೆ ವಿರುದ್ಧವಾಗಿ ನಡೆದುಕೊಳ್ಳುವ ಮೂಲಕ ಪರಂಪರೆಯನ್ನು ಮುರಿಯುವ ಬದಲು ತಾನಾ ಮತ್ತು ರೀರೀ ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ. ಆತ್ಮಗೌರವವನ್ನು ಎತ್ತಿಹಿಡಿಯುತ್ತಾರೆ.

ಗುಜರಾತ್ ಅಸ್ಮಿತಾ, ಗುಜರಾತ್ ಅಸ್ಮಿತಾ, ಗುಜರಾತ್ ಅಸ್ಮಿತಾ ಅಂತ ಸದಾ ಗುನುಗುವ ನರೇಂದ್ರ ದಾಮೋದರದಾಸ್ ಮೋದಿಯವರು ಜನಿಸಿದ್ದೂ ವಾಡ್‌ನಗರದಲ್ಲಿಯೇ!

ಮೋದಿ ಕುಟುಂಬ ಮೂಲತಃ ಬನಸ್ಕಂತ ಜಿಲ್ಲೆಯಲ್ಲಿ ಬರುವ ನವದೋತ್ರಾ





ಗ್ರಾಮಕ್ಕೆ ಸೇರಿತ್ತು. ಹತ್ತೊಂಬತ್ತನೇ ಶತಮಾನದ ಉತ್ತರಾರ್ಧದಲ್ಲಿ ಮನೆಬಿಟ್ಟು ವಾಡ್ ನಗರಕ್ಕೆ ಬಂದ ಮಗನ್‌ಲಾಲ್ ರಾಮಚಂದದಾಸ್ ದಿನಸಿ ಅಂಗಡಿ ತೆರೆದು ವ್ಯಾಪಾರ ಆರಂಭಿಸಿದರು. ಮಗನ್‌ಲಾಲ್‌ಗೆ ಒಬ್ಬ ಪುತ್ರನಿದ್ದ-ಮೂಲ್‌ಚಂದ್. ಆತ ಅಪ್ಪನ ಕಸುಬನ್ನೇ ಮುಂದುವರಿಸಿದ. ಕಾಲಾಂತರದಲ್ಲಿ ಮೂಲ್‌ಚಂದ್‌ಗೂ ವಿವಾಹವಾಯಿತು. 1915ರಲ್ಲಿ ದಾಮೋದರದಾಸ್ ಹುಟ್ಟಿದ. ಆ ದಾಮೋದರದಾಸನ ಮೂರನೇ ಮಗನೇ ನರೇಂದ್ರ.

ಈ ಪುಸ್ತಕದ ಹೀರೊ!

ನರೇಂದ್ರ ಜನಿಸಿದ್ದು 1950, ಸೆಪ್ಟೆಂಬರ್ 17ರಂದು. 1944ರಲ್ಲಿ ಜನಿಸಿದ ನರೇಂದ್ರನ ಹಿರಿಯಣ್ಣ ಸೋಮ್‌ಭಾಯಿ ಎಸ್‌ಎಸ್‌ಸಿ ಮುಗಿಸಿದ ನಂತರ ಸ್ಯಾನಿಟರಿ ಇನ್‌ಸ್ಪೆಕ್ಷನ್‌ನಲ್ಲಿ ಡಿಪ್ಲೊಮಾ ಮಾಡಿ ರಾಜ್ಯ ಆರೋಗ್ಯ ಇಲಾಖೆಯಲ್ಲಿ ಸ್ವಾಸ್ಥ್ಯ ತಪಾಸಕನಾಗಿ ಕೆಲಸಕ್ಕೆ ಸೇರಿದರು. 1946ರಲ್ಲಿ ಹುಟ್ಟಿದ್ದ ಮತ್ತೊಬ್ಬ ಹಿರಿಯಣ್ಣ ಅಮೃತ್ ಕೂಡ ಎಸ್‌ಎಸ್‌ಸಿ ಮುಗಿಸಿ ಟರ್ನರ್ ವಿಷಯದಲ್ಲಿ ಐಟಿಐ ತರಬೇತಿ ಪಡೆದು ಖಾಸಗಿ ಕಂಪನಿಯೊಂದರಲ್ಲಿ ಚಾಕರಿ ಕೆಲಸಕ್ಕೆ ಸೇರಿಕೊಂಡ. ಆದರೆ 1952ರಲ್ಲಿ ಜನಿಸಿದ ಸಹೋದರಿ ವಾಸಂತಿಯಾಗಲಿ, ಇನ್ನಿಬ್ಬರು ಕಿರಿಯ ಸಹೋದರರಾದ ಪ್ರಹ್ಲಾದ್(1955), ಪಂಕಜ್(1958) ಆಗಲಿ ಅಷ್ಟಾಗಿ ಓದು-ಬರಹ ಕಲಿಯಲಿಲ್ಲ.





# 2
# ಬಾಲ್ಯದ ಬೆರಗು

ನರೇಂದ್ರನದ್ದು ಬಡ ಕುಟುಂಬ. ಮಣ್ಣಿನಿಂದ ನಿರ್ಮಿಸಿದ ಮನೆ. ಇದ್ದಿದ್ದು ಒಂದೇ ದೊಡ್ಡ ಕೋಣೆ. ಕುಳಿತುಕೊಳ್ಳುವುದು, ಮಲಗುವುದು ಮತ್ತು ಊಟ ಮಾಡುವುದು ಅದೇ ಕೊಠಡಿಯಲ್ಲಿ. ಆ ಕೊಠಡಿಯ ಒಂದು ಮೂಲೆಯಲ್ಲಿ ಬಚ್ಚಲು ಮನೆಯೂ ಇತ್ತು. ಮಡಿಕೆಯಲ್ಲಿ ನೀರು ತುಂಬಿರುತ್ತಿದ್ದರು. ಸ್ನಾನ ಮಾಡುವಾಗ ಪರದೆ ಕಟ್ಟುತ್ತಿದ್ದರು. ಪರದೆಯೇ ಗೋಡೆ! ಅದರ ಪಕ್ಕದಲ್ಲೊಂದು ಪುಟ್ಟ ಕೊಠಡಿ ಇತ್ತು. ಅದು ಅಡುಗೆ ಕೋಣೆಯೂ ಹೌದು, ಪುಟ್ಟ ದೇವರ ಮನೆಯೂ ಅದರೊಳಗಿತ್ತು. ಮತ್ತೊಂದು ಪುಟ್ಟ ಕೊಠಡಿಯಲ್ಲಿ ಸಾಮಾನು ಸರಂಜಾಮುಗಳ ಜತೆಗೆ ಬೆರಣಿಗಳನ್ನೂ ಜೋಡಿಸಿಡಲಾಗುತ್ತಿತ್ತು. ಅಡುಗೆ ಮಾಡಲು ಬೆರಣಿಗಳನ್ನು ಬಳಸುತ್ತಿದ್ದ ಕಾರಣ ಕಿರಿದಾದ ಮನೆ ತುಂಬಾ ಸದಾ ಹೊಗೆ ತುಂಬಿರುತ್ತಿತ್ತು. ಯಾವ ಕೊಠಡಿಗಳಿಗೂ ಕಿಟಕಿಗಳಿರಲಿಲ್ಲ, ಇಡೀ ದಿನ ಸೀಮೆಎಣ್ಣೆ ದೀಪ ಹಚ್ಚಿಡಬೇಕಿತ್ತು. ಹಾಗಾಗಿ ಹೊಗೆ ಹೇಳತೀರದು. ಆದರೆ ಮನೆ ತುಂಬಾ ಮಕ್ಕಳು! ಹಾಗಾಗಿ ನರೇಂದ್ರನ ತಂದೆ ದಾಮೋದರದಾಸ್ ಬಿದಿರಿನಿಂದ ಅಟ್ಟವೊಂದನ್ನು ನಿರ್ಮಿಸಿದರು. ಅಟ್ಟದ ಮೇಲ್ಭಾಗವನ್ನು ಸಗಣಿಯಿಂದ ಸಾರಿಸಿದ ನರೇಂದ್ರನ ತಾಯಿ, ಮಕ್ಕಳು ಮಲಗಲು ಅನುಕೂಲ ಮಾಡಿಕೊಟ್ಟರು. ಆದರೇನಂತೆ ಮನೆಯಲ್ಲಿ ಶೌಚಾಲಯವೇ ಇರಲಿಲ್ಲ, ಬೆಳಗ್ಗೆ ಎದ್ದ ಕೂಡಲೇ ಚೆಂಬು ಹಿಡಿದು ಬಯಲಿಗೆ ಓಡಬೇಕಿತ್ತು.

ನರೇಂದ್ರ ತನ್ನ ಬಾಲ್ಯವನ್ನು ಕಳೆದಿದ್ದೇ ಬಡತನದಲ್ಲಿ.

ಅಣ್ಣಂದಿರಂತೆ ಸರಕಾರಿ ಶಾಲೆಯಲ್ಲಿಯೇ ವ್ಯಾಸಂಗ ಮಾಡಿದ ನರೇಂದ್ರ, 'ಭಗವತಾಚಾರ್ಯ ನಾರಾಯಣಾಚಾರ್ಯ ಪ್ರೌಢಶಾಲೆ'ಯನ್ನು ಸೇರಿದ. ಆತ ಇಂಗ್ಲಿಷ್ ಹಾಗೂ ಸಮಾಜಶಾಸ್ತ್ರದಲ್ಲಿ ಎಲ್ಲರಿಗಿಂತ ಬುದ್ಧಿವಂತನಾಗಿದ್ದ ಎನ್ನುತ್ತಾರೆ ಆತನ ಸಹಪಾಠಿಗಳು.

ಒಂದರಿಂದ 11ನೇ ತರಗತಿಯವರೆಗೂ ಒಂದೇ ಬೆಂಚ್ ಮೇಲೆ ಕುಳಿತು ವ್ಯಾಸಂಗ ಮಾಡಿದ ಆಪ್ತ ಸ್ನೇಹಿತ ಜಸೂದ್ ಖಾನ್ ಪಠಾಣ್, ಸ್ನೇಹಿತನ ಜತೆಗೆ ಕಳೆದ ಮಧುರ ಕ್ಷಣಗಳನ್ನು ಇಂದಿಗೂ ನೆನಪಿಸಿಕೊಳ್ಳುತ್ತಾರೆ. ನಾವಿಬ್ಬರೂ ಅಕ್ಕಪಕ್ಕದ ಬಡಾವಣೆಗಳಲ್ಲೇ ವಾಸವಾಗಿದ್ದೆವು. ಆದರೆ ಪರಸ್ಪರ ಕಿತ್ತಾಡಿದ ಯಾವ ಸಂದರ್ಭಗಳೂ ನೆನಪಾಗುತ್ತಿಲ್ಲ. ಅಲ್ಲದೆ ಆ ಕಾಲದಲ್ಲಿ ಹಿಂದೂ ಮುಸ್ಲಿಮರ ನಡುವೆಯೂ ಸಂಘರ್ಷಗಳಾಗುತ್ತಿರಲಿಲ್ಲ. ಹಬ್ಬ ಹರಿದಿನಗಳನ್ನು ವಿವಾಹಗಳ ಸಮಾರಂಭಗಳನ್ನು ಒಂದಾಗಿ ಆಚರಿಸುತ್ತಿದ್ದೆವು. ಯಾವ ತಾರತಮ್ಯ, ಭೇದಭಾವಗಳೂ ಇರಲಿಲ್ಲ. ಮಿಗಿಲಾಗಿ ವಾಡ್‌ನಗರದಲ್ಲಿ ಎಂದೂ ಕೋಮುದಳ್ಳುರಿಯೇ ಸಂಭವಿಸಿಲ್ಲ ಎನ್ನುತ್ತಾರೆ ಪಠಾಣ್.

ನರೇಂದ್ರನಿಗೆ ಸ್ನೇಹಿತರ ದೊಡ್ಡ ದಂಡೇ ಇತ್ತು. ಸ್ನೇಹಿತರ ವಲಯದಲ್ಲಿ ಆತ 'ಎನ್‌ಡಿ' (ನರೇಂದ್ರ ದಾಮೋದರದಾಸ್) ಎಂದೇ ಪ್ರಖ್ಯಾತ. ಗುಂಡು ಮುಖ ಹೊಂದಿದ್ದ ಆತ ಶಾಲೆಯಲ್ಲಿರುವಾಗಲೇ ಕಟ್ಟುಮಸ್ತಾಗಿದ್ದ. ಇತ್ತ ಶಾಲೆ ಬಿಟ್ಟ ಕೂಡಲೇ ಪರಾರಿಯಾಗುತ್ತಿದ್ದ ನರೇಂದ್ರ ನೇರವಾಗಿ ಅಪ್ಪನ ಟೀ ಅಂಗಡಿಗೆ ಹೋಗಿ ನೆರವಾಗುತ್ತಿದ್ದ. ಆದರೆ ಶಾಲೆಗೆ ರಜೆ ಬಂದಾಗ ಊರಿನೊಳಗಿದ್ದ ದೊಡ್ಡ ಆಲದ ಮರದ ಕೆಳಗೆ ಸ್ನೇಹಿತರ ಜತೆಗೆ ಆಟವಾಡುತ್ತಿದ್ದ

ನರೇಂದ್ರ ಬಾಲ್ಯದಲ್ಲೇ ಪುಸ್ತಕಗಳ ಬಗ್ಗೆ ಅಪಾರ ಪ್ರೀತಿ ಬೆಳೆಸಿಕೊಂಡಿದ್ದುದು ಕಾಣುತ್ತಿತ್ತು. ವಾಡ್‌ನಗರದ ಪುಸ್ತಕ ಸಂಗ್ರಹಾಲಯದಲ್ಲೇ ಹೆಚ್ಚು ಕಾಲ ಕಳೆಯುತ್ತಿದ್ದ. ನರೇಂದ್ರ ಎಲ್ಲಿದ್ದಾನೆ ಎಂದು ಕಂಡುಹಿಡಿಯಬೇಕಾದರೆ ಲೈಬ್ರರಿಗೆ ಹೋಗಿ ಇಣುಕಿ ನೋಡಬೇಕು ಎಂದು ಹೇಳುವಷ್ಟರಮಟ್ಟಿಗೆ ಪುಸ್ತಕದ ಹುಚ್ಚು ಆತನಲ್ಲಿತ್ತು. ಶಾಲೆಯಲ್ಲಿ ತನ್ನ ಸಹಪಾಠಿಗಳ ಸಹಾಯಕ್ಕೆ ಧಾವಿಸುತ್ತಿದ್ದ ಆತನಿಗೆ 'ಮಿಸ್ತ್ರಿ ಸರ್' ಅಂದರೆ ಪಂಚಪ್ರಾಣ. ವಿಜ್ಞಾನ ವಿಷಯಕ್ಕೆ ಸಂಬಂಧಿಸಿದಂತೆ ಪ್ರಯೋಗಗಳನ್ನು ಸಿದ್ಧಪಡಿಸುವಲ್ಲಿ ಮಿಸ್ತ್ರಿ ಸರ್‌ಗೆ ನೆರವಾಗುತ್ತಿದ್ದ. ಅವನ ಪ್ರೌಢಶಾಲೆಯಲ್ಲೊಂದು ಚರ್ಚಾಕೂಟವಿತ್ತು. ಶಾಲೆಯಲ್ಲಿ ನಾಚಿಕೆ ಸ್ವಭಾವದವನು ಎಂದೇ ಹೆಸರಾಗಿದ್ದರೂ ನರೇಂದ್ರ ಈ ಚರ್ಚಾಕೂಟದಲ್ಲಿ ಮಾತ್ರ ಕಾಯಂ ಆಗಿ ಭಾಗಿಯಾಗುತ್ತಿದ್ದ. ಅದು ಯಾವುದೇ ವಿಷಯ, ವಿಚಾರವಾಗಿರಬಹುದು, ಸ್ಪಷ್ಟ ತಿಳಿವಳಿಕೆ, ನಿಲುವು ಹೊಂದಿದ್ದ ಎನ್ನುತ್ತಾರೆ ಆತನ ಶಿಕ್ಷಕರಾದ ಡಾ. ಪ್ರಿ.ಜಿ. ಪಟೇಲ್. ಒಮ್ಮೆ ಶಾಲೆಯ ಸಂಸ್ಕೃತ ಮೇಷ್ಟ್ರು ನಾಮಪದಗಳ ವಿಭಕ್ತಿ ರೂಪವನ್ನು ಬರೆದುಕೊಂಡು ಬನ್ನಿ ಎಂದು ಹೇಳಿದ್ದರು. ಹಾಗೆ ಬರೆದುಕೊಂಡು ಬಂದು ಶಾಲೆಯ ಮಾನಿಟರ್‌ಗೆ ತೋರಿಸುವಂತೆ ಸೂಚಿಸಿದ್ದರು. ಅವರು ಹೇಳಿದಂತೆ ವಿಭಕ್ತಿರೂಪವನ್ನು ಬರೆದುಕೊಂಡ ನರೇಂದ್ರ, ಅದನ್ನು ಮಾನಿಟರ್‌ಗೆ





ತೋರಿಸಲು ಮಾತ್ರ ಒಪ್ಪಲಿಲ್ಲ. ಸರಿ-ತಪ್ಪು ಎಂದು ತಿಳಿಸಬೇಕಾದವರು ಶಿಕ್ಷಕರೇ ಹೊರತು ಮಾನಿಟರ್ ಅಲ್ಲ ಎಂಬುದು ಆತನ ವಾದವಾಗಿತ್ತು.

ಸಂಸ್ಕೃತ ವಿಷಯದಲ್ಲಿ ದುರ್ಬಲರಾಗಿರುವ ವಿದ್ಯಾರ್ಥಿಗಳಿಗಾಗಿ ಪ್ರತ್ಯೇಕ ತರಗತಿಗಳನ್ನು ಆಯೋಜಿಸಲಾಗಿತ್ತು. ಆ ತರಗತಿಗಳಿಗೆ ಹಾಜರಾಗಲು ಒಪ್ಪದ ನರೇಂದ್ರ 'ಕಲಿಯಬೇಕೆಂಬ ಇಚ್ಛೆ ಇಲ್ಲದಿದ್ದರೆ ಹುಟ್ಟಿಸಿದ ಬ್ರಹ್ಮನಿಂದಲೂ ಕಲಿಸಲು ಸಾಧ್ಯವಿಲ್ಲ' ಎನ್ನುತ್ತಿದ್ದ. ಹಾಗಂತ ನರೇಂದ್ರನಿಗೆ ಕಲಿಯುವ ಆಸಕ್ತಿ ಇರಲಿಲ್ಲ ಎಂದಲ್ಲ. ಆತ ಒಳ್ಳೆಯ ಓದುಗ. ವಾಡ್‌ನಗರದ ಲೈಬ್ರರಿಗಳಲ್ಲಿ ಲಭ್ಯವಿರದಿದ್ದ 'ಬಾಲ ಸಂದೇಶ', 'ಝಗ್‌ಮಗ್' ಮತ್ತು 'ಮಿಯಾ ಫುಸ್ಕಿ' ಮುಂತಾದ ಮಕ್ಕಳ ಮ್ಯಾಗಜಿನ್‌ಗಳನ್ನು ತಪ್ಪದೆ ಓದುತ್ತಿದ್ದ. ಕುತೂಹಲ ಹುಟ್ಟಿಸುತ್ತಿದ್ದ ಪುಸ್ತಕಗಳನ್ನು ಗಂಟೆಗಟ್ಟಲೆ ಕುಳಿತಲ್ಲೇ ಕುಳಿತು ಓದುತ್ತಿದ್ದ. ಐದರಿಂದ ಹತ್ತನೇ ತರಗತಿವರೆಗೂ ನರೇಂದ್ರನ ಜತೆ ವ್ಯಾಸಂಗ ಮಾಡಿದ ಡಾ. ಸುಧೀರ್ ಜೋಶಿ ತಮ್ಮ ಸ್ನೇಹಿತನ ಬಗ್ಗೆ ಅಪಾರ ಗೌರವ ಇಟ್ಟುಕೊಂಡಿದ್ದಾರೆ. ನೇರ ನುಡಿ, ನಡತೆಗೆ ಹೆಸರಾಗಿದ್ದ ನರೇಂದ್ರ ಯಾರೇ ಸಮಸ್ಯೆಯಲ್ಲಿದ್ದರೂ ಸ್ಪಂದಿಸುತ್ತಿದ್ದ. ಅಗತ್ಯಬಿದ್ದರೆ ಶಾಲೆಯ ಪ್ರಾಂಶುಪಾಲರ ಬಳಿಗೆ ಹೋಗಿ ಮಾತನಾಡುವುದಕ್ಕೂ ಅಂಜುತ್ತಿರಲಿಲ್ಲ ಎನ್ನುತ್ತಾರೆ ವಾಡ್‌ನಗರದಲ್ಲಿ ಈಗ ಮೂಳೆತಜ್ಞರಾಗಿರುವ ಜೋಶಿ. ಮತ್ತೊಬ್ಬ ಸ್ನೇಹಿತ ಹರೀಶ್ ಪಟೇಲ್ ಶಾಲೆಯಲ್ಲಿ ನಡೆದ ಘಟನೆಯೊಂದನ್ನು ನೆನಪಿಸಿಕೊಳ್ಳುತ್ತಾರೆ. ಒಮ್ಮೆ ನಾಲ್ವರು ಹುಡುಗರು ಒಬ್ಬ ಅಮಾಯಕ ವಿದ್ಯಾರ್ಥಿಯನ್ನು ಹಿಗ್ಗಾಮುಗ್ಗಾ ಥಳಿಸುತ್ತಿರುತ್ತಾರೆ. ಮೂಕಪ್ರೇಕ್ಷಕನಂತೆ ವೀಕ್ಷಿಸುತ್ತಿದ್ದ ನರೇಂದ್ರನಿಗೆ ಏನು ಮಾಡಬೇಕು ಎಂಬುದೇ ತಿಳಿಯುವುದಿಲ್ಲ. ತನಗಿಂತ ಬಲಿಷ್ಠರಾದ ಆ ನಾಲ್ವರು ವಿದ್ಯಾರ್ಥಿಗಳಿಗೆ ಸವಾಲೆಸೆಯುವುದು ಸಾಧ್ಯವಿಲ್ಲದ ಕೆಲಸ ಎಂಬುದು ಆತನಿಗೆ ತಿಳಿದಿತ್ತು. ಹಾಗಂತ ಸುಮ್ಮನೆ ಕುಳಿತುಕೊಳ್ಳಲಿಲ್ಲ. ಬ್ಯಾಗ್‌ನಿಂದ ಇಂಕ್ ಪೆನ್ನನ್ನು ಹೊರತೆಗೆದ ನರೇಂದ್ರ ಅದರ ಶಾಯಿಯನ್ನು ಆ ನಾಲ್ವರು ಹುಡುಗರ ಮೇಲೆ ಎರಚಿ ಅಲ್ಲಿಂದ ಪರಾರಿಯಾಗಿ ಬಿಟ್ಟ. ಇತ್ತ ಅಮಾಯಕ ವಿದ್ಯಾರ್ಥಿಗೆ ಥಳಿಸಿದ ವಿಷಯ ಶಾಲೆಯ ಹೆಡ್‌ಮಾಸ್ತರ್‌ಗೆ ಗೊತ್ತಾಯಿತು. ಕ್ಲಾಸ್‌ರೂಮ್‌ಗೆ ಬಂದ ಅವರು, ಥಳಿಸಿದವರಾರು? ಎಂದು ಎಲ್ಲರನ್ನೂ ಪ್ರಶ್ನಿಸಿದರು. ಆದರೆ ಯಾರೂ ಬಾಯ್ಬಿಡಲಿಲ್ಲ. ಅಷ್ಟರಲ್ಲಿ 'ಸರ್, ಆ ಅಮಾಯಕ ವಿದ್ಯಾರ್ಥಿಯನ್ನು ಥಳಿಸಿದವರ ಅಂಗಿಯ ಮೇಲೆ ಶಾಯಿಯ ಕಲೆಯಿದೆ' ಎಂದ ನರೇಂದ್ರ. ಆತನ ಮುಂದಾಲೋಚನೆಯ ಫಲವಾಗಿ ಸುಲಭವಾಗಿ ತಪ್ಪಿತಸ್ಥರನ್ನು ಪತ್ತೆಹಚ್ಚಲು ಸಾಧ್ಯವಾಯಿತು.

ನರೇಂದ್ರನಿಗೆ ಯಾವ ಕೆಲಸವನ್ನೂ ಮಾಡು ಎಂದು ಹೇಳಬೇಕಾಗಿ ಬರುತ್ತಿರಲಿಲ್ಲ.

ಮನೆಯವರ ಕಷ್ಟವನ್ನು ಅರಿತುಕೊಂಡಿದ್ದ ಆತ ಸ್ವತಃ ಸಹಾಯಕ್ಕೆ ಮುಂದಾಗುತ್ತಿದ್ದ. ಮನೆಗೆ ನೀರು ತರುವುದು, ಕಸ ಗುಡಿಸುವುದು ಮುಂತಾದ ಕೆಲಸಗಳನ್ನು ಸ್ವ ಇಚ್ಛೆಯಿಂದ ನಿತ್ಯವೂ ಮಾಡುತ್ತಿದ್ದ. ಅಷ್ಟೇ ಅಲ್ಲ ತನ್ನ ಬಟ್ಟೆಯನ್ನು ತಾನೇ ತೊಳೆದುಕೊಳ್ಳುತ್ತಿದ್ದ. ನೋಡುವವರ ಕಣ್ಣಿಗೆ ನೀಟಾಗಿ ಕಾಣಬೇಕೆಂಬ ಪ್ರಜ್ಞೆಯೂ ಆತನಲ್ಲಿತ್ತು. ಇಸ್ತ್ರಿ ಹಾಕದ ಯಾವ ಉಡುಪನ್ನೂ ಧರಿಸುತ್ತಿರಲಿಲ್ಲ.

ನರೇಂದ್ರನ ತಂದೆಗೆ ಪ್ರಾಣಿಗಳೆಂದರೆ ಬಲು ಪ್ರೀತಿ. ಮನೆಯಲ್ಲಿ ಹಸುಗಳನ್ನು ಸಾಕಿದ್ದರು. ಅಲ್ಲದೆ ಪುಟ್ಟ ಎಣ್ಣೆ ಗಾಣವೂ ಇತ್ತು. ಇವುಗಳೆಲ್ಲವುದರ ಮೇಲ್ವಿಚಾರಣೆ ನರೇಂದ್ರನದ್ದೇ ಆಗಿತ್ತು. ಆರೇಳು ವರ್ಷದವನಿರುವಾಗಲೇ ಆತನಲ್ಲಿ ಸೇವಾ ಮನೋಭಾವ ಎದ್ದು ಕಾಣುತ್ತಿತ್ತು. ವಾಡ್‌ನಗರದಲ್ಲಿ ರಸಿಕ್‌ಭಾಯ್ ದವೆ ಎಂಬ 79 ವರ್ಷದ ವಯೋವೃದ್ಧರಿದ್ದರು. ಮೂಲತಃ ಕಾಂಗ್ರೆಸ್ಸಿಗರಾದ ಅವರು ಜಯಪ್ರಕಾಶ್ ನಾರಾಯಣರ ಪ್ರಭಾವಕ್ಕೊಳಗಾಗಿದ್ದರು. ಅವರ ಕಚೇರಿ ನರೇಂದ್ರನ ತಂದೆಯ ಟೀ ಸ್ಟಾಲ್ ಪಕ್ಕದಲ್ಲಿಯೇ ಇತ್ತು. ನಿತ್ಯವೂ ದವೆ ಅವರ ಬಳಿಗೆ ಬಂದು ಕುಳಿತುಕೊಳ್ಳುತ್ತಿದ್ದ ನರೇಂದ್ರ, ಯಾವ ಕೆಲಸ ಹೇಳಿದರೂ ಚಕಾರವೆತ್ತದೆ ಮಾಡಿಕೊಡುತ್ತಿದ್ದ. 1956ರ ಸುಮಾರಿಗೆ ಮಹಾ ಗುಜರಾತ್ ಚಳವಳಿ ಪರಾಕಾಷ್ಠೆಗೆ ತಲುಪಿತು. ಚಳವಳಿಯ ಬ್ಯಾಡ್ಜ್ ವಿತರಣೆ ಮಾಡುವ ಕೆಲಸ ನರೇಂದ್ರನದಾಗಿತ್ತು. ಅಲ್ಲದೆ ಕಾಂಗ್ರೆಸ್ ಪಕ್ಷದ ಸಭೆ ಸಮಾರಂಭಗಳು ನಡೆದಾಗಲೆಲ್ಲ ನರೇಂದ್ರ ಮತ್ತು ಆತನ ಸ್ನೇಹಿತರೇ ಅಲ್ಲಿನ ಸ್ವಯಂ ಸೇವಕರಾಗಿರುತ್ತಿದ್ದರು. ಆತ ಮುಂದೆ ರಾಷ್ಟ್ರೀಯ ಸ್ವಯಂ ಸೇವಕ ಸಂಘವನ್ನು ಸೇರಿದರೂ ದವೆಯವರಿಗೆ ಸಹಾಯ ಮಾಡುವುದನ್ನು ಮಾತ್ರ ನಿಲ್ಲಿಸಲಿಲ್ಲ. ಪಕ್ಷಕ್ಕಿಂತ ನೆರೆಯವರಿಗೆ ಸಹಾಯ ಮಾಡುವುದೇ ಮುಖ್ಯವಾಗಿತ್ತು. ಆತ ಪಕ್ಷಪಾತಿಯಾಗಿರಲಿಲ್ಲ!

ನರೇಂದ್ರನ ಬಾಲ್ಯ ಹೂವಿನ ಹಾಸಿಗೆಯಾಗಿರಲಿಲ್ಲ. ಕೆಳ ಮಧ್ಯಮ ವರ್ಗದ ಕುಟುಂಬವೊಂದರಲ್ಲಿ ಜನಿಸಿದ ಆತನ ಬಳಿ ಇದ್ದಿದ್ದು ಕೇವಲ ಎರಡು ಜತೆ ಉಡುಪುಗಳಷ್ಟೆ. ಅಮ್ಮನಿಗೆ ಆರೋಗ್ಯ ಸರಿಯಿಲ್ಲದಿದ್ದರೆ ಆ ದಿನ ನರೇಂದ್ರನದ್ದೇ ಅಡುಗೆ! ಆತ ಚಿಕ್ಕ ವಯಸ್ಸಿನಲ್ಲಿಯೇ ಉಪ್ಪು, ಮೆಣಸಿನಕಾಯಿ, ಎಣ್ಣೆ ತಿನ್ನುವುದನ್ನು ಬಿಟ್ಟಿದ್ದ ಎನ್ನುತ್ತಾರೆ ಹಿರಿಯ ಸಹೋದರ ಸೋಮ್‌ಭಾಯ್. ಅಣ್ಣಂದಿರು ಹಾಗೂ ಸಹೋದರಿಯ ಜತೆ ಎಂದೂ ಜಗಳವಾಡಿದವನಲ್ಲ. ಕುಟುಂಬದ ಯಾವ ಸದಸ್ಯರಾದರೂ ಆತನ ಮನ ನೋಯಿಸಿದರೆ, ಅನ್ಯಾಯ ಮಾಡಿದರೆ ಗಲಾಟೆ ಮಾಡುತ್ತಿರಲಿಲ್ಲ. ಜಗಳಕ್ಕೂ ಇಳಿಯುತ್ತಿರಲಿಲ್ಲ. ಮೌನಕ್ಕೆ ಶರಣುಹೋಗುತ್ತಿದ್ದ. ಕೋಪ ತಣಿಯುವವರೆಗೂ ಯಾರೊಂದಿಗೂ ಮಾತನಾಡುತ್ತಿರಲಿಲ್ಲ.





ಶಾಲಾ ಹಂತದಲ್ಲಿಯೇ ಆತನಲ್ಲಿ ಸಂಘಜೀವಿಯ ಲಕ್ಷಣಗಳು ಕಾಣುತ್ತಿದ್ದವು. ಸಾಂಘಿಕ ನಿಷ್ಠೆಯೂ ಆತನಲ್ಲಿತ್ತು.

ಆತನ ಶಾಲೆಯ ಒಂದು ಭಾಗದಲ್ಲಿ ಕಾಂಪೌಂಡ್ ಇರಲಿಲ್ಲ. ಕಾಂಪೌಂಡ್ ನಿರ್ಮಾಣ ಮಾಡಲು ಶಾಲಾ ಆಡಳಿತ ಮಂಡಳಿಯ ಬಳಿ ಹಣವೂ ಇರಲಿಲ್ಲ. ಹಾಗಾಗಿ ಹಣ ಸಂಗ್ರಹಣೆಗಾಗಿ ನಾಟಕ ಪ್ರದರ್ಶನವೊಂದನ್ನು ಹಮ್ಮಿಕೊಳ್ಳಲು ನರೇಂದ್ರ ನಿರ್ಧರಿಸಿದ. ಆ ಎಳೆಯ ವಯಸ್ಸಿಗೆ ಅದೊಂದು ದೊಡ್ಡ ನಿರ್ಧಾರವಾಗಿತ್ತು. ಆ ವಯಸ್ಸಿನಲ್ಲಿಯೇ ಆತನಲ್ಲಿ ಅಂತಹ ಧೈರ್ಯ ಇತ್ತು. ತಪಿ ಮತ್ತು ನರ್ಮದಾ ನದಿಗಳು ಉಕ್ಕಿ ಹರಿದಾಗಲೂ ಸಂತ್ರಸ್ತರ ಪರಿಹಾರಕ್ಕಾಗಿ ಆತ ನಿಧಿ ಸಂಗ್ರಹಿಸಿದ್ದ. ಕೃಷ್ಣ ಜನ್ಮಾಷ್ಟಮಿ ಸಂದರ್ಭದಲ್ಲಿ ತಿಂಡಿ ತಿನಿಸುಗಳ ಅಂಗಡಿ ಇಡುತ್ತಿದ್ದ. ಅದರಿಂದ ಬರುತ್ತಿದ್ದ ಲಾಭವನ್ನು ಪರಿಹಾರ ನಿಧಿಗೆ ನೀಡುತ್ತಿದ್ದ.

ನರೇಂದ್ರನಿಗೆ ಈಜುವುದೆಂದರೆ ಅಚ್ಚುಮೆಚ್ಚು. ಶರ್ಮಿಷ್ಠಾ ಸರೋವರವೇ ಆತನ ತಾಣ. ಆದರೆ ಆ ಸರೋವರದಲ್ಲಿ ಮೊಸಳೆಗಳದ್ದೇ ಕಾರುಬಾರು. ಎಂತಹ ಧೈರ್ಯವಂತರೂ ಈಜಲು ಹೆದರುತ್ತಿದ್ದರು. ಆದರೆ ನರೇಂದ್ರ ಮಾತ್ರ ಎಂದೂ ಎದೆಗುಂದಿದವನಲ್ಲ. ಆತ ಸಾಹಸಿ. ಶರ್ಮಿಷ್ಠಾ ಸರೋವರದ ಮಧ್ಯದಲ್ಲಿ ಪುಟ್ಟ ದೇವಾಲಯವೊಂದಿತ್ತು. ಪುರಾತನ ಕಾಲದ ಆ ದೇವಾಲಯದ ಮೇಲೆ ಬಾವುಟವೊಂದು ಹಾರುತ್ತಿತ್ತು. ವಿಶೇಷ ದಿನದಂದು ಆ ಬಾವುಟವನ್ನು ಬದಲಾಯಿಸುವುದು ಅಲ್ಲಿನ ಪದ್ಧತಿ. ಒಮ್ಮೆ ಧಾರಾಕಾರವಾಗಿ ಮಳೆ ಸುರಿದು ಇಡೀ ಸರೋವರ ತುಂಬಿ ತುಳುಕತೊಡಗಿತು. ಮೊಸಳೆಗಳು ಅತ್ತಿಂದಿತ್ತ ಈಜುತ್ತಿದ್ದವು. ಅಂತಹ ಸಂದರ್ಭದಲ್ಲಿ ಪರಂಪರೆಗನುಗುಣವಾಗಿ ಬಾವುಟವನ್ನು ಬದಲಾಯಿಸಲು ಯಾರಿಗೂ ಧೈರ್ಯ ಬರಲಿಲ್ಲ. ಆದರೆ 12 ವರ್ಷದ ನರೇಂದ್ರ ತಾನು ಬದಲಾಯಿಸುವುದಾಗಿ ಮುಂದೆ ಬಂದ. ಎಲ್ಲರೂ ಆತನನ್ನು ಗದರಿಸಿ ಅಧೀರನನ್ನಾಗಿ ಮಾಡಲು ಪ್ರಯತ್ನಿಸಿದರು. ಯಾರ ಮಾತಿಗೂ ಕಿವಿಗೊಡದ ನರೇಂದ್ರ ಹಾಗೂ ಆತನ ಇಬ್ಬರು ಸ್ನೇಹಿತರಾದ ಮಹೇಂದ್ರ ಮತ್ತು ಬಚ್ಚು ಸರೋವರಕ್ಕೆ ಧುಮುಕಿಯೇಬಿಟ್ಟರು. ಇತ್ತ ಸರೋವರದ ಬಳಿ ನೆರೆದಿದ್ದ ಜನ ತಮಟೆಗಳನ್ನು ಜೋರಾಗಿ ಬಾರಿಸುವ ಮೂಲಕ ಮೊಸಳೆಗಳನ್ನು ಬೆದರಿಸಲಾರಂಭಿಸಿದರು. ಈ ಮಧ್ಯೆ ಈಜಿ ದೇವಾಲಯದ ಮೇಲೇರಿದ ನರೇಂದ್ರ ಬಾವುಟವನ್ನು ಬದಲಾಯಿಸಿ ಮರಳಿ ದಡ ಸೇರಿದ. ಜನ ಮೆಚ್ಚುಗೆಯಿಂದ ಬೆನ್ನು ತಟ್ಟಿದರು. "ನರೇಂದ್ರ ಅಂದರೇ ಹಾಗೆ" ಎಂದರು ಆತನ ಸ್ನೇಹಿತರು.

ಬಾಲ್ಯಾವಸ್ಥೆಯಲ್ಲಿ ನರೇಂದ್ರ ದೈವಭಕ್ತನಾಗಿದ್ದ. ಪೂಜಾ ವಿಧಿ-ವಿಧಾನಗಳನ್ನು ಚಾಚೂ

ತಪ್ಪದೆ ಮಾಡುತ್ತಿದ್ದ. ಆತ ವಾಸವಾಗಿದ್ದ ಬೀದಿಯ ತುದಿಯಲ್ಲಿ ಗಿರಿಪುರ ಮಹಾದೇವ ಎಂಬ ದೇವಾಲಯವಿತ್ತು. ನಿತ್ಯವೂ ಗುಡಿಗೆ ಹೋಗುತ್ತಿದ್ದ ನರೇಂದ್ರ ಒಂದು ಮೂಲೆಯಲ್ಲಿ ಕುಳಿತು ಜಪ ಮಾಡುತ್ತಿದ್ದ. ಆ ವೇಳೆಯಲ್ಲಿ ಆತನನ್ನು ಯಾರೂ ಮಾತನಾಡಿಸುವಂತಿರಲಿಲ್ಲ. ವರ್ಷದಲ್ಲಿ ಎರಡು ಬಾರಿ ನವರಾತ್ರಿ ಉಪವಾಸ ಮಾಡುತ್ತಿದ್ದ. ಆ ಸಂದರ್ಭದಲ್ಲಿ ನಿಂಬೆರಸ ಬಿಟ್ಟರೆ ಬೇರೇನನ್ನೂ ಸೇವಿಸುತ್ತಿರಲಿಲ್ಲ.

1962-63ರ ವೇಳೆಗೆ ಕುತೂಹಲಕಾರಿ ಘಟನೆಯೊಂದು ಸಂಭವಿಸುತ್ತದೆ. ಆಗ ನರೇಂದ್ರನಿಗೆ ಸುಮಾರು 12 ವರ್ಷ. ವಾಡ್‌ನಗರಕ್ಕೆ ಸಾಧುವೊಬ್ಬರು ಆಗಮಿಸುತ್ತಾರೆ. ಅದಕ್ಕೂ ಮೊದಲು ಎಷ್ಟೋ ಸಾಧುಗಳು ಬಂದು ಹೋಗಿರುತ್ತಾರೆ. ಹಾಗೆ ಬಂದಾಗ ವಿವಿಧ ಮನೆಗಳಿಗೆ ಹೋಗಿ ಅವರು ಆಹಾರ ಸ್ವೀಕರಿಸುತ್ತಾರೆ. ಈ ಬಾರಿ ಬಂದ ಸಾಧು ಆಹಾರ ಸ್ವೀಕರಿಸುವುದಕ್ಕಾಗಿ ನರೇಂದ್ರನ ಮನೆಗೆ ಬರುತ್ತಾರೆ. ಊಟವಾದ ಬಳಿಕ ಮನೆಯಲ್ಲಿ ಯಾರದ್ದಾದರೂ ಜಾತಕವಿದೆಯೇ ಎಂದು ಕೇಳುತ್ತಾರೆ. ಮನೆಯಲ್ಲಿ ಒಟ್ಟು ಆರು ಮಕ್ಕಳಿದ್ದರೂ ಇದ್ದಿದ್ದು ಇಬ್ಬರ ಜಾತಕ ಮಾತ್ರ. ಸೋಮ್‌ಭಾಯ್ ಹಾಗೂ ನರೇಂದ್ರನದ್ದು. ಸೋಮ್‌ಭಾಯ್‌ಯ ಜಾತಕವನ್ನು ನೋಡಿದ ಸಾಧು, ಆತನದ್ದು ಎಲ್ಲರಂತೆ ಸಾಧಾರಣ ಜೀವನ. ಆದರೆ ಜೈಲಿಗೆ ಹೋಗುವ ಸಾಧ್ಯತೆಯೂ ಇದೆ ಎಂದರು. ನರೇಂದ್ರನ ಜಾತಕವನ್ನು ನೋಡಿದ ಸಾಧು, ಈತ ರಾಜಕಾರಣಕ್ಕಿಳಿಯುತ್ತಾನೆ. ಅಷ್ಟೇ ಅಲ್ಲ, ಸಾಮ್ರಾಟನಷ್ಟೇ ಬಲಿಷ್ಠ ನಾಯಕನಾಗಿ ಹೊರಹೊಮ್ಮುತ್ತಾನೆ, ಇಲ್ಲವೇ ಸನ್ಯಾಸಿಯಾಗಿ ಮತ್ತೊಬ್ಬ ಶಂಕರಾಚಾರ್ಯನಾಗುತ್ತಾನೆ ಎನ್ನುತ್ತಾರೆ!

ಈ ಘಟನೆಯನ್ನು ನೆನಪಿಸಿಕೊಳ್ಳುವ ಸೋಮ್‌ಭಾಯ್, ಸ್ವಾಸ್ಥ್ಯ ಕಾರ್ಮಿಕರ ಒಕ್ಕೂಟದ ಮುಷ್ಕರವೊಂದರ ವೇಳೆ ನನ್ನನ್ನು ಒಂದೆರಡು ದಿನಗಳ ಕಾಲ ಜೈಲಿಗೆ ಹಾಕಿದ್ದರು. ಇನ್ನು ನರೇಂದ್ರ ಏನಾಗಿದ್ದಾನೆ ಎಂಬುದು ನಿಮಗೆಲ್ಲ ತಿಳಿದೇ ಇದೆ ಎನ್ನುತ್ತಾರೆ!





## ಮೋದಿ'ಮುತ್ತು'

1. ನಾನು 'ಸಿ.ಎಂ.' ಆಗಿದ್ದು 2001, ಅಕ್ಟೋಬರ್ 7ರಂದಲ್ಲ, ಯಾವತ್ತೂ ಸಿ.ಎಂ. ಆಗಿದ್ದೆ, ಇಂದೂ ಸಿ.ಎಂ., ಎಂದೆಂದೂ ಸಿ.ಎಂ. ಆಗಿರುತ್ತೇನೆ. ನನ್ನ ಮಟ್ಟಿಗೆ ಸಿ.ಎಂ. ಎಂದರೆ ಚೀಫ್ ಮಿನಿಸ್ಟರ್ ಅಲ್ಲ, ಕಾಮನ್ ಮ್ಯಾನ್!

2. ನನ್ನ ಪಾಲಿಗೆ ಧರ್ಮವೆಂದರೆ ಕಾರ್ಯಶ್ರದ್ಧೆ, ಕಾರ್ಯಶ್ರದ್ಧೆಯಿಂದ ಕೆಲಸ ಮಾಡುವುದೇ ಧರ್ಮನಿಷ್ಠೆ

3. ಭಯೋತ್ಪಾದನೆ ಇರುವುದು ಕಾಶ್ಮೀರದಲ್ಲಿ ಮಾತ್ರವಲ್ಲ, ಅದು ವಿಧವಿಧವಾಗಿದೆ. ಐನೂರು ರೂಪಾಯಿ ನಕಲಿ ನೋಟಿನಲ್ಲೂ ಇದೆ, ಮಾದಕ ದ್ರವ್ಯ ವ್ಯಾಪಾರದಲ್ಲೂ ಇದೆ.

4. ಐಟಿ ಅಂದರೆ ಬರೀ 'ಇನ್‌ಫರ್ಮೇಶನ್ ಟೆಕ್ನಾಲಜಿಯಲ್ಲ', 'ಇಂಡಿಯಾ ಟುಮಾರೋ'! ಬಿಟಿ ಅಂದರೆ ಕೇವಲ 'ಬಯೋಟೆಕ್ನಾಲಜಿ'ಯಲ್ಲ, 'ಭಾರತ್ ಟುಮಾರೋ'!

5. ಐಟಿ + ಐಟಿ = ಐಟಿ
ಇಂಡಿಯನ್ ಟ್ಯಾಲೆಂಟ್+ಇನ್‌ಫರ್ಮೇಶನ್ ಟೆಕ್ನಾಲಜಿ=ಇಂಡಿಯಾ ಟುಮಾರೋ!





# 3
# ಬದುಕಿನ ಹೂರಣ ಅರಸುತ್ತಾ ಪಯಣ

ಆ ಸಾಧು ಬಂದುಹೋದ ನಂತರ ಕುಟುಂಬದ ಸದಸ್ಯರು ನರೇಂದ್ರನ ನಡೆ ನುಡಿಗಳ ಮೇಲೆ ತೀವ್ರ ನಿಗಾ ಇಡಲು ಆರಂಭಿಸಿದರು. ಆತನಲ್ಲಿ ಸನ್ಯಾಸಿಯಾಗುವ ಎಲ್ಲ ಲಕ್ಷಣಗಳೂ ಗೋಚರಿಸುತ್ತಾ ಹೋಗಲಾರಂಭಿಸಿದವು. ಪ್ರತಿನಿತ್ಯವೂ ತಪ್ಪದೇ ಜಪ-ತಪ ಮಾಡುತ್ತಿದ್ದ, ಸಾಧು-ಸಂತರ ಜತೆ ಬೆರೆಯುತ್ತಿದ್ದ, ಆತನ ಶಿಸ್ತುಬದ್ಧ ಹಾಗೂ ಧರ್ಮಬದ್ಧ ಜೀವನ ವಿಧಾನ ಮನೆಯವರನ್ನು ಆತಂಕಕ್ಕೀಡುಮಾಡಿತು. ಎಲ್ಲಿ ಸಾಧು-ಸಂತನಾಗುತ್ತಾನೋ ಎಂಬ ಭಯ ಕಾಡತೊಡಗಿತು. ಹಾಗಾಗಿ ಕೂಡಲೇ ಆತನಿಗೆ ವಿವಾಹ ಮಾಡಿಬಿಡಬೇಕೆಂದು ನಿರ್ಧಾರಕ್ಕೆ ಬಂದರು. ಇತ್ತ ಹತ್ತನೇ ತರಗತಿಯನ್ನು ಪೂರೈಸಿದ ನರೇಂದ್ರ ವೀಸ್‌ನಗರ್‌ನಲ್ಲಿನ ಪದವಿಪೂರ್ವ ಕಾಲೇಜನ್ನು ಸೇರಿಕೊಂಡ. ಆದರೆ ಕೆಲವೇ ದಿನಗಳಲ್ಲಿ ಕಾಲೇಜು ಬೇಡವೆನಿಸ ತೊಡಗಿತು. ಅಪ್ರಾಪ್ತ ವಯಸ್ಸಿನಲ್ಲಿಯೇ ಅಧ್ಯಾತ್ಮಿಕತೆಯನ್ನು ಅರಸುತ್ತ ಹಿಮಾಲಯಕ್ಕೆ ತೆರಳಲು ಮುಂದಾದ. ಆಗ ಆತನಿಗೆ ಕೇವಲ 17 ವರ್ಷ. ಮನೆಯವರ ಆತಂಕ ಇನ್ನೂ ಹೆಚ್ಚಾಯಿತು. ಆತನ ನಿರ್ಧಾರದಿಂದ ಇಡೀ ಕುಟುಂಬವೇ ದಿಗ್ಭ್ರಮೆಗೊಳಗಾಯಿತು. ಆದರೂ ನರೇಂದ್ರ ಮಾತ್ರ ತನ್ನ ನಿರ್ಧಾರದಿಂದ ಹಿಂದೆ ಸರಿಯಲು ಸಿದ್ಧನಿರಲಿಲ್ಲ. ಅಷ್ಟು ಮಾತ್ರವಲ್ಲ ಮನೆಯವರೆಲ್ಲರೂ ಆಶೀರ್ವದಿಸುವವರೆಗೆ ಹೊರಕ್ಕೆ ಕಾಲಿಡುವುದಿಲ್ಲ ಎಂದೂ ಹಠ ಹಿಡಿದ. ಅಂದು ಇಡೀ ಕುಟುಂಬವೇ ಸಂಕಟಕ್ಕೆ ಸಿಲುಕಿತು. ಕೊನೆಗೂ ಮಗನ ಹಠಕ್ಕೆ ಮಣಿದ ತಂದೆ, ತಾಯಿ ಬೀಳ್ಕೊಡಲು ಅಣಿಯಾದರು. ವಿಶೇಷ ದಿನವೊಂದನ್ನು ಗೊತ್ತು ಮಾಡಿ ಸಾಂಪ್ರದಾಯಿಕ ಬೀಳ್ಕೊಡುಗೆಗೂ ಸಿದ್ಧತೆ ಮಾಡಲಾಯಿತು. ಆತನ ತಾಯಿ ಇಷ್ಟವಾದ ತಿಂಡಿ, ತಿನಿಸುಗಳನ್ನು ಸಿದ್ಧಪಡಿಸಿದರು. ಊಟವೂ ಆಯಿತು. ಕೂಡಲೇ ಹೊರಡಲು ಸಿದ್ಧನಾದ ಮಗನ ಹಣೆಗೆ ತಿಲಕವನ್ನಿಟ್ಟು ತಾಯಿ ಮತ್ತು ಕುಟುಂಬಸ್ಥರು ಒಲ್ಲದ

ಮನಸ್ಸಿನಿಂದ ಬೀಳ್ಕೊಟ್ಟರು. ಮನೆಯಿಂದ ಕಾಲ್ತೆಗೆಯುವ ಮುನ್ನ ಎಲ್ಲರ ಪಾದಗಳನ್ನೂ ಸ್ಪರ್ಶಿಸಿದ ನರೇಂದ್ರ ಕಾಲೇಜು ಬಿಟ್ಟು ಹಿಮಾಲಯದತ್ತ ಹೊರಟ.

ಆತ ಹಾಗೆ ಹೊರಟಾಗ ಯಾವ ಸಿದ್ಧತೆಯನ್ನೂ ಮಾಡಿಕೊಂಡಿರಲಿಲ್ಲ. ಕಿಸೆಯಲ್ಲಿ ಪುಡಿಗಾಸೂ ಇರಲಿಲ್ಲ. ಮನದೊಳಗಿದ್ದುದು ಒಂದೇ ಉದ್ದೇಶ ಮತ್ತು ತುಡಿತ-ಆಧ್ಯಾತ್ಮಿಕ ಸಿದ್ಧಿ. ದೇಶ ಅಲೆದು ಅಂತಿಮವಾಗಿ ರಾಮಕೃಷ್ಣ ಮಿಷನ್ ಸೇರುವುದು ಆತನ ಉದ್ದೇಶವಾಗಿತ್ತು. ಹೀಗೆ ಕೋಲ್ಕತಾಕ್ಕೆ ತೆರಳಿದ ನರೇಂದ್ರ ಬೇಲೂರು ಮಠದಲ್ಲಿ ಕೆಲ ಕಾಲ ತಂಗಿದ್ದ. ಆದರೆ ಆತನನ್ನು ಸೇರಿಸಿಕೊಳ್ಳಲು ಮಠ ಒಪ್ಪಲಿಲ್ಲ. ಅಲ್ಲಿಂದ ಹೊರಟ ಆತ, ವಿವೇಕಾನಂದರು ಒಮ್ಮೆ ತಂಗಿದ್ದರು ಎನ್ನಲಾದ ಆಲ್ಮೋಡಾ ಬಳಿ ಇರುವ ನಿರ್ಜನ ಪ್ರದೇಶದತ್ತ ನಡೆದ. ಅಲ್ಲಿಗೆ ಹೋದರೆ ವಯೋವೃದ್ಧ ವ್ಯಕ್ತಿಯೊಬ್ಬರು ಕಂಡರು. ತೊಂಬತ್ತರ ಆಸುಪಾಸಿನಲ್ಲಿದ್ದ ಒಣಕಲು ದೇಹದ ಆ ವ್ಯಕ್ತಿಯನ್ನು ಬಿಟ್ಟರೆ ಮತ್ತಾರ ಸುಳಿವೂ ಅಲ್ಲಿರಲಿಲ್ಲ. ನನ್ನ ಬಳಿಯೇ ಇರು ಎಂದ ಆ ಸಾಧುವಿನ ಮಾತಿಗೆ ಓಗೊಟ್ಟ ನರೇಂದ್ರ ಒಂದು ತಿಂಗಳ ಕಾಲ ತಂಗಿದ್ದ. ಆತ ತಾನು ತಿನ್ನುತ್ತಿದ್ದ ಆಹಾರದಲ್ಲಿಯೇ ನರೇಂದ್ರನಿಗೂ ಒಂದು ಪಾಲು ನೀಡುತ್ತಿದ್ದ. ಕೆಲವೊಮ್ಮೆ ಆ ಸ್ಥಳಕ್ಕೆ ಆಗಮಿಸುತ್ತಿದ್ದ ಜನರು ಒಂದಿಷ್ಟು ಆಹಾರವನ್ನು ಕೊಟ್ಟು ಹೋಗುತ್ತಿದ್ದರು. ಅದನ್ನು ಆ ಸಾಧು ಮತ್ತು ನರೇಂದ್ರ ಹಂಚಿಕೊಂಡು ತಿನ್ನುತ್ತಿದ್ದರು. ಉಳಿದ ಸಮಯದಲ್ಲಿ ಸಾಧುವಿನ ಜತೆ ಕುಳಿತುಕೊಂಡು ಭಜನೆ ಮಾಡುವುದೇ ಕಾಯಕವಾಗಿತ್ತು. ಅಪರೂಪಕ್ಕೊಮ್ಮೆ ಆ ಸಾಧು ಆಧ್ಯಾತ್ಮಿಕ ವಿಚಾರಗಳ ಬಗ್ಗೆ ನರೇಂದ್ರನ ಜತೆ ಚರ್ಚಿಸುತ್ತಿದ್ದ. ಇಲ್ಲಿರುವುದು ವ್ಯರ್ಥ ಎಂಬ ಭಾವನೆ ಮೂಡತೊಡಗಿತು. ಅಲ್ಲಿಂದ ಕಾಲ್ಕಿತ್ತ ನರೇಂದ್ರ ದಕ್ಷಿಣ ಗುಜರಾತಿನಲ್ಲಿರುವ ರಾಜ್‌ಕೋಟ್‌ಗೆ ಬಂದ. ಅಲ್ಲೂ ಒಂದು ರಾಮಕೃಷ್ಣ ಆಶ್ರಮವಿತ್ತು. ನರೇಂದ್ರನಲ್ಲಿದ್ದ ಆಸಕ್ತಿಯನ್ನು ಕಂಡು ಪ್ರಭಾವಿತರಾದ ಆ ಆಶ್ರಮದ ಮುಖ್ಯಸ್ಥರು ತಂಗಲು ಅವಕಾಶ ನೀಡಿದರು. ಆದರೆ ಒಂದು ವಾರಕ್ಕಿಂತ ಹೆಚ್ಚು ಕಾಲ ಅಲ್ಲಿರಲಾಗಲಿಲ್ಲ. ನರೇಂದ್ರನ ಮನಸ್ಸು ಚಡಪಡಿಸುತ್ತಿತ್ತು. "ನನಗೇನೋ ಬೇಕೆನಿಸುತ್ತಿತ್ತು. ಆದರೆ ಏನು ಎಂಬುದು ತಿಳಿಯುತ್ತಿರಲಿಲ್ಲ" ಎಂದು ನರೇಂದ್ರನೇ ತನಗಾದ ಅನುಭವವನ್ನು ಹೇಳಿಕೊಳ್ಳುತ್ತಾನೆ. ಈ ಗ್ಲಾಮರ್, ಹಣ, ಅಧಿಕಾರದ ಬಗ್ಗೆ ಆತನಿಗೆ ಆಸಕ್ತಿ ಇರಲಿಲ್ಲ. ಸೇವೆ ಮಾಡಬೇಕೆಂಬುದೇ ಆತನ ಹಂಬಲವಾಗಿತ್ತು. ಐದನೇ ತರಗತಿಯಲ್ಲಿರುವಾಗಲೇ ಸೈನಿಕ ಶಾಲೆಯನ್ನು ಸೇರಲು ಪ್ರವೇಶಕ್ಕೆ ಅರ್ಜಿ ಹಾಕಿದ್ದ ಆತನಿಗೆ ದೇಶಸೇವೆ ಮಾಡುವ ಮನಸ್ಸಾಗಿತ್ತು. ಆದರೆ ಅಪ್ಪ ತೀವ್ರ ವಿರೋಧ ವ್ಯಕ್ತಪಡಿಸಿದ ಕಾರಣ ಸೈನಿಕ ಶಾಲೆ ಸೇರುವ ಆಸೆಯನ್ನೇ ಕೈಬಿಡಬೇಕಾಯಿತು. ಹಾಗಾಗಿ ಆಧ್ಯಾತ್ಮವನ್ನು ಹುಡುಕಿಕೊಂಡು ಹಿಮಾಲಯವನ್ನು ಅಲೆಯಲು ಹೊರಡುವಂತಾಯಿತು. ಆದರೆ ಕಲಿಯುವ





ತುಡಿತ ಆತನಲ್ಲಿದ್ದರೂ ದಿಕ್ಕು ತೋರುವವರೇ ಇಲ್ಲವಾಗಿದ್ದರು. ಹೀಗೆ ತಾನು ಹುಡುಕಿಕೊಂಡು ಹೊರಟಿರುವ ಮಾರ್ಗ ತನ್ನನ್ನು ಎಲ್ಲಿಗೂ ಕರೆದೊಯ್ಯುವುದಿಲ್ಲ ಎಂಬುದು ನರೇಂದ್ರನಿಗೆ ಅರಿವಾಗತೊಡಗಿತು. ಜತೆಗೆ ಅಪ್ಪ ಅಮ್ಮನನ್ನು ಬಿಟ್ಟು ಬಂದು ತುಂಬ ದಿನಗಳೇ ಆದ ಕಾರಣ ಮನೆಯವರನ್ನು ಕಾಣುವ ಹಂಬಲ ಆತನಲ್ಲಿ ದಿನದಿಂದ ದಿನಕ್ಕೆ ಹೆಚ್ಚಾಗತೊಡಗಿತು. ಎರಡು ವರ್ಷಗಳ ದೇಶ ಸಂಚಾರ, ದಿಕ್ಕಿಲ್ಲದ ಅಲೆದಾಟದ ನಂತರ 1970ರಲ್ಲಿ ನರೇಂದ್ರ ಮನೆಗೆ ವಾಪಸಾದ.

"ಎರಡು ವರ್ಷಗಳ ಕಾಲ ಆತನ ಸುಳಿವೇ ಇರಲಿಲ್ಲ. ಒಂದು ದಿನ ಇದ್ದಕ್ಕಿದ್ದಂತೆ ಆತ ಮನೆಗೆ ಆಗಮಿಸಿದಾಗ, ಕೈಯಲ್ಲೊಂದು ಚೀಲ ಇತ್ತು. ಆಗ ನಾನು ಅಡುಗೆ ಮನೆಯಲ್ಲಿದ್ದೆ. ಅಮ್ಮಾ , ಅಣ್ಣ ಬಂದಿದ್ದಾನೆ ಎಂದು ಮಗಳು ಕೂಗುತ್ತಾ ಬಂದಳು. ಉಮ್ಮಳಿಸಿ ಬಂದ ದುಃಖವನ್ನು ತಡೆದುಕೊಳ್ಳಲಾಗಲಿಲ್ಲ. ಬಿಕ್ಕಳಿಸಿ ಅಳಲಾರಂಭಿಸಿದೆ. ಇಷ್ಟು ದಿನ ಎಲ್ಲಿಗೆ ಹೋಗಿದ್ದೆ ಎಂದು ಕೇಳಿದರೆ, ಹಿಮಾಲಯಕ್ಕೆ ತೆರಳಿದ್ದೆ ಎಂಬ ಉತ್ತರ ಬಂತು" ಎಂದು ನೆನಪಿಸಿಕೊಳ್ಳುತ್ತಾರೆ ನರೇಂದ್ರನ ತಾಯಿ ಹೀರಾಬೇನ್. ಮಗ ಸರಿಯಾಗಿ ಊಟ ಮಾಡಿ ಎಷ್ಟು ದಿನಗಳಾದವೋ ಎಂಬ ಆಲೋಚನೆಯಿಂದ ವಿಶೇಷ ತಿನಿಸುಗಳನ್ನು ಸಿದ್ಧಪಡಿಸಲು ಮುಂದಾದಾಗ ಮಧ್ಯದಲ್ಲೇ ತಡೆದ ನರೇಂದ್ರ, ಇರುವುದನ್ನು ಬಡಿಸು ಎಂದು ಹೇಳಿದ. ಆ ಸಂದರ್ಭದಲ್ಲಿ ನಾನು ಮತ್ತು ಮಗಳನ್ನು ಬಿಟ್ಟರೆ ಬೇರೆ ಯಾರೂ ಮನೆಯಲ್ಲಿರಲಿಲ್ಲ. ನರೇಂದ್ರ ಊಟವಾದ ಬಳಿಕ ಗ್ರಾಮದತ್ತ ತೆರಳಿದ. ನಾನು ಕುತೂಹಲದಿಂದ ಆತನ ಚೀಲವನ್ನು ಬಿಚ್ಚಿದೆ. ಅದರಲ್ಲಿ ಒಂದು ಜತೆ ಬಟ್ಟೆ, ಚಡ್ಡಿ, ಭಗವಾ ಬಣ್ಣದ ಶಾಲು ಹಾಗೂ ನನ್ನ ಭಾವಚಿತ್ರವಿತ್ತು. ಆ ಭಾವಚಿತ್ರವನ್ನು ಯಾವಾಗ ತೆಗೆದಿದ್ದು ಎಂಬುದು ನನಗೇ ಗೊತ್ತಿರಲ್ಲಿಲ್ಲ. ನರೇಂದ್ರನೂ ಹೇಳಲಿಲ್ಲ. ಒಂದು ದಿನ ಮನೆಯಲ್ಲಿ ತಂಗಿದ್ದ ಆತ ಮರುದಿನ ಮತ್ತೆ ಹೊರಟೇಬಿಟ್ಟ ಎನ್ನುವಾಗ ಹೀರಾಬೇನ್ ಕಣ್ಣಲ್ಲಿ ನೀರು ತುಂಬಿಕೊಳ್ಳುತ್ತದೆ.





# 4
## ಏನಾದರೂ ಓದು
## ಇತಿಹಾಸ–ಸಂಸ್ಕೃತ ಓದು

ಮನೆಯಿಂದ ಹೊರಟ ನರೇಂದ್ರ ತನ್ನ ಚಿಕ್ಕಪ್ಪ ಬಾಬುಭಾಯಿ ಅವರ ಬಳಿಗೆ ತೆರಳಿದ. ಬಾಬುಭಾಯಿ ರಾಜ್ಯ ಸಾರಿಗೆ ಸಂಸ್ಥೆಯ ಕಚೇರಿ ಬಳಿ ಕ್ಯಾಂಟೀನ್ ನಡೆಸುತ್ತಿದ್ದರು. ಅಲ್ಲಿ ಕೆಲ ಕಾಲ ಸಹಾಯ ಮಾಡಿದ ನರೇಂದ್ರ ಬಿಡುವಿನ ವೇಳೆಯಲ್ಲಿ ಸಾಮಾಜಿಕ, ರಾಜಕೀಯ ಹಾಗೂ ಅಧ್ಯಾತ್ಮಿಕ ವಿಷಯಗಳ ಬಗ್ಗೆ ನಡೆಯುತ್ತಿದ್ದ ಚರ್ಚೆ, ಮಾತುಕತೆಗಳಲ್ಲಿ ಭಾಗಿಯಾಗುತ್ತಿದ್ದ, ರಾಷ್ಟ್ರೀಯ ಸ್ವಯಂಸೇವಕ ಸಂಘದ (ಆರ್.ಎಸ್.ಎಸ್.) ಬಗ್ಗೆ ಆಕರ್ಷಿತನಾಗಿದ್ದು, ಪ್ರಭಾವಿತನಾಗಿದ್ದು ಅದೇ ಸಂದರ್ಭದಲ್ಲಿ, 1925ರಲ್ಲೇ ರಾಷ್ಟ್ರೀಯ ಸ್ವಯಂ ಸೇವಕ ಸಂಘ ಪ್ರಾರಂಭವಾಗಿದ್ದರೂ ಗುಜರಾತ್‌ವರೆಗೂ ವಿಸ್ತಾರಗೊಂಡಿದ್ದು ಬಹಳ ವರ್ಷಗಳ ನಂತರ. ವಾಡ್‌ನಗರದ ಆರೆಸ್ಸೆಸ್ ಶಾಖೆ ಪ್ರಾರಂಭವಾಗಿದ್ದು 1944ರಲ್ಲಿ, ಪ್ರಾರಂಭ ಮಾಡಿದ ವ್ಯಕ್ತಿ ಬಾಬುಭಾಯಿ ನಾಯಕ್. ಅವರು ಶಾಲಾ ಶಿಕ್ಷಕರಾಗಿದ್ದರು. ಬರೋಡಾದ ರಾಜ ಸಯ್ಯಾಜಿರಾವ್ ಗಾಯಕ್‌ವಾಡ್ ಅವರ ರಾಜ್ಯಾಡಳಿತದ ಅವಧಿಯಲ್ಲಿ ಬಾಬುಭಾಯಿ ನಾಯಕ್ ವಾಡ್‌ನಗರದಲ್ಲಿಯೇ ಏಳನೆ ತರಗತಿವರೆಗೂ ಓದಿದ್ದರು. ಆ ಕಾಲದಲ್ಲಿ ಸಯ್ಯಾಜಿರಾವ್ ಗಾಯಕ್‌ವಾಡ್ ಯೋಜನೆಯೊಂದನ್ನು ರೂಪಿಸಿದರು. ಅದರ ಪ್ರಕಾರ ಹದಿನಾಲ್ಕರಿಂದ ಹದಿನೆಂಟು ವರ್ಷ ವಯೋಮಾನದ ಯುವಕರಿಗೆ ಬರೋಡಾದಲ್ಲಿ ಎರಡು ವರ್ಷಗಳ ಕಾಲ ತರಬೇತಿ ನೀಡಿ ಅವರನ್ನು ಪ್ರಾಥಮಿಕ ಶಾಲೆಯ ಶಿಕ್ಷಕರನ್ನಾಗಿ ನೇಮಕ ಮಾಡಲಾಗುತ್ತಿತ್ತು. 1942ರಿಂದ 1944ರವರೆಗೂ ಜಾರಿಯಲ್ಲಿದ್ದ ಈ ಯೋಜನೆಯಡಿ ಶಿಕ್ಷಕರಾಗಿದ್ದಾಗಲೇ ಬಾಬುಭಾಯಿ ನಾಯಕ್ ಯಕುದ್‌ಪುರದಲ್ಲಿ ಆರೆಸ್ಸೆಸ್‌ನ ಸ್ವಯಂ ಸೇವಕರಾಗಿ ಸೇರಿಕೊಂಡರು. ನಿಜವಾದ ಶಾಖೆ ಪ್ರಾರಂಭವಾಗಿದ್ದೇ ಅಲ್ಲಿ, 1944ರಲ್ಲಿ ವಾಡ್‌ನಗರಕ್ಕೆ ಆಗಮಿಸಿದ ಬಾಬುಭಾಯಿ ತಮ್ಮ ವಾಕ್‌ಚಾತುರ್ಯದಿಂದ ಮಕ್ಕಳನ್ನು

ತಮ್ಮತ್ತ ಸೆಳೆದುಕೊಳ್ಳಲಾರಂಭಿಸಿದರು. ಕೊನೆಗೆ ಶಾಖೆಯನ್ನೂ ಆರಂಭಿಸಿದರು. ಹಾಗೆ ಬಾಬುಭಾಯಿಯವರಿಂದ ಆಕರ್ಷಿತರಾಗಿ ಆರೆಸ್ಸೆಸ್ ಸೇರಿದ ಅಸಂಖ್ಯ ಮಕ್ಕಳಲ್ಲಿ ನರೇಂದ್ರ ಕೂಡ ಒಬ್ಬ. ಇತ್ತ ವಾಡ್‌ನಗರದಲ್ಲಿ ಕಾಂಗ್ರೆಸ್ ಬಹಳ ಕ್ರಿಯಾಶೀಲವಾಗಿತ್ತು. ದ್ವಾರಕಾದಾಸ್ ಜೋಶಿಯವರು ಸರ್ವೋದಯ ಚಟುವಟಿಕೆಗಳನ್ನು ಬಹಳ ಆಸಕ್ತಿಯಿಂದ ನಡೆಸುತ್ತಿದ್ದರು. ಆದರೆ ತನ್ನ ಸೈದ್ಧಾಂತಿಕ ನಿಲುವಿನಿಂದಾಗಿ ಆರೆಸ್ಸೆಸ್‌ಗೆ ಹೆಚ್ಚಿನ ಬೆಂಬಲ ದೊರೆಯತೊಡಗಿತು. ಆಗಿನ ಕಾಲದಲ್ಲಿ ಬರೋಡಾ ಆರೆಸ್ಸೆಸ್‌ನ ಚಟುವಟಿಕೆಗಳ ಕೇಂದ್ರಸ್ಥಾನವಾಗಿತ್ತು. 1930ರ ದಶಕದ ಕೊನೆಯ ಭಾಗದಲ್ಲಿ ಆರೆಸ್ಸೆಸ್ ಭಾರಿ ಕ್ರಿಯಾಶೀಲವಾಗತೊಡಗಿತು. ಮಹಾರಾಷ್ಟ್ರದ ಹಲವಾರು ಆರೆಸ್ಸೆಸ್ ಕಾರ್ಯಕರ್ತರು ಹೊರಗಿನ ರಾಜ್ಯಗಳ ಶೈಕ್ಷಣಿಕ ಸಂಸ್ಥೆಗಳನ್ನು ಸೇರುವ ಮೂಲಕ ತಮ್ಮ ಸಂಘಟನೆಯನ್ನು ವಿಸ್ತರಿಸಲು ಪ್ರಯತ್ನಿಸತೊಡಗಿದರು. ಗೋಪಾಲ್‌ರಾವ್ ಜಿಂದಾರ್ದೆ ಮತ್ತು ನಾನುಭಾಯಿ ಭೋಸ್ಲೆ ಮುಂತಾದ ಅಗ್ರಗಣ್ಯರು ಆರೆಸ್ಸೆಸ್‌ನಲ್ಲಿದ್ದರು. ಹಲವು ಹಿಂದೂ ರಾಜರ ಕೇಂದ್ರವಾಗಿದ್ದ ಸೌರಾಷ್ಟ್ರ ಆರೆಸ್ಸೆಸ್ ಸಿದ್ಧಾಂತವನ್ನು ಹರಡಲು ಹೇಳಿಮಾಡಿಸಿದ ತಾಣವಾಯಿತು.

1940ರಲ್ಲಿ ಸೂರತ್‌ನಲ್ಲಿ ಆರೆಸ್ಸೆಸ್‌ನ ಶಾಖೆಯನ್ನು ಆರಂಭಿಸಿದ್ದ ಬಾಂಬೆಯ ರಾಜಾಬಾವು ನೇನೆ ಸೂರತ್‌ಗೆ ಆಗಮಿಸಿದರು. ಅಹಮದಾಬಾದ್‌ನಲ್ಲೂ ಶಾಖೆ ಆರಂಭವಾಯಿತು. 1943ರಲ್ಲಿ ಬಾಪುರಾವ್ ಲೆಲೆ ಎಂಬುವರನ್ನು ಅಹಮದಾಬಾದ್‌ಗೆ ಪ್ರಚಾರಕರನ್ನಾಗಿ ಕಳುಹಿಸಿದ ಆರೆಸ್ಸೆಸ್ ತನ್ನ ಸಿದ್ಧಾಂತವನ್ನು ಪಸರಿಸಲು ಮುಂದಾಯಿತು. 1945ರಲ್ಲಿ ಲೆಲೆಯವರು ಅಹಮದಾಬಾದ್‌ನಲ್ಲಿ ಆಯೋಜಿಸಿದ ಅಧಿಕಾರಿಗಳ ತರಬೇತಿ ಶಿಬಿರ ಭಾರೀ ಯಶಸ್ಸು ಕಂಡಿತು. ಅದೇ ವೇಳೆಗೆ ಮಧುಕರರಾವ್ ಭಾಗವತ್ ಎಂಬವರನ್ನೂ ಪ್ರಚಾರಕರನ್ನಾಗಿ ಗುಜರಾತ್‌ಗೆ ಕಳುಹಿಸಲಾಯಿತು. ಇತ್ತ ದೇಶ ವಿಭಜನೆಗೊಂಡ ಕಾರಣ ಸಿಂಧ್‌ನಲ್ಲಿ ಆರೆಸ್ಸೆಸ್‌ನ ಖ್ಯಾತ ಮುಂದಾಳು ಎನಿಸಿದ್ದ ರಾಜ್‌ಪಾಲ್ ಪುರಿಯವರಿಗೆ ಗುಜರಾತ್‌ನ ಜವಾಬ್ದಾರಿ ನೀಡಲಾಯಿತು. ಭಾಗವತ್ ಅವರ ಸ್ಥಾನವನ್ನು ಅಲಂಕರಿಸಿದ ಪುರಿ ಹೆಚ್ಚು ದಿನ ಅಲ್ಲಿ ಉಳಿಯಲಿಲ್ಲ. ಅಂತಿಮವಾಗಿ ಲಕ್ಷ್ಮಣರಾವ್ ಇನಾಂದಾರ್ ಆ ಸ್ಥಾನಕ್ಕೆ ಬಂದರು. ಮುಂದಿನ ಮೂರು ದಶಕಗಳ ಕಾಲ ಗುಜರಾತ್‌ನಲ್ಲಿ ಆರೆಸ್ಸೆಸ್‌ನ ದೀವಿಗೆಯಾದ ಇನಾಂದಾರ್ ಅವರು "ವಕೀಲ್ ಸಾಹೇಬ್" ಎಂದೇ ಹೆಸರಾಗಿದ್ದರು. ರಾಜ್ಯದಲ್ಲಿ ಸಂಘಟನೆಯನ್ನು ಬಲಗೊಳಿಸುವ ಕಾರ್ಯ ಕೈಗೆತ್ತಿಕೊಂಡ ಅವರಿಗೆ ಯುವಕ ನರೇಂದ್ರನಿಗೆ ತರಬೇತಿ ನೀಡಿ ಅಣಿಗೊಳಿಸುವ ಜವಾಬ್ದಾರಿಯೂ ಇತ್ತು. ವಕೀಲ್ ಸಾಹೇಬರ ಗರಡಿಯಲ್ಲಿ ಪಳಗಿದ ನರೇಂದ್ರ, ಅವರ 'ಮಾನಸ ಪುತ್ರ' ಎಂದೇ ಖ್ಯಾತನಾದ.





ಆಗ ನರೇಂದ್ರ ದಾಮೋದರದಾಸ್ ಮೋದಿಗೆ 21 ವರ್ಷ.

1971ರ ಹೊತ್ತಿಗಾಗಲೇ ಅವರಲ್ಲಿ ವಯಸ್ಸಿಗೆ ಮೀರಿದ ಪ್ರಬುದ್ಧತೆ, ಸಾಂಘಿಕ ಬದ್ಧತೆ ಕಾಣುತ್ತಿದ್ದವು. ಬಾಂಗ್ಲಾದೇಶದ ವಿಮುಕ್ತಿಗಾಗಿ ಸತ್ಯಾಗ್ರಹಕ್ಕೆ ಕುಳಿತ ನರೇಂದ್ರ ಮೋದಿ, ಮೌಲ್ಯಗಳ ಬಗ್ಗೆ ತಮಗಿರುವ ನಿಷ್ಠೆಯನ್ನು ಪ್ರಚುರಪಡಿಸಿದರು. ಸತ್ಯಾಗ್ರಹದ ವೇಳೆ ಬಂಧಿತರಾಗಿ ತಿಹಾರ್ ಜೈಲನ್ನೂ ಸೇರಿದರು. ಸ್ವಲ್ಪ ಸಮಯದಲ್ಲೇ ಬಿಡುಗಡೆಯಾದ ಮೋದಿ, 1972ರ ವೇಳೆಗೆ ಔಪಚಾರಿಕವಾಗಿ ಆರೆಸ್ಸೆಸ್ ಪ್ರಚಾರಕರಾಗಿ ಸೇವೆ ಆರಂಭಿಸಿದರು. ಹಾಗಾಗಿ ಚಿಕ್ಕಪ್ಪನ ಮನೆಯನ್ನು ತ್ಯಜಿಸಿ ಸಂಘದ ಕಾರ್ಯಾಲಯದಲ್ಲಿಯೇ ತಂಗಬೇಕಾಯಿತು. ಅದರ ಬಗ್ಗೆ ಸ್ವತಃ ನರೇಂದ್ರ ಮೋದಿಯವರೇ ಸಂದರ್ಶನವೊಂದರಲ್ಲಿ ಹೀಗೆ ಹೇಳಿದ್ದಾರೆ-
"ಮೊದಲಿಗೆ ನಾನು ವಕೀಲ್ ಸಾಹೇಬರನ್ನು ಭೇಟಿಯಾದೆ. ಅವರೊಂದಿಗೆ ಮಾತನಾಡಿದೆ. ಆಗ ನಾನು ಸಂಘದ ಕಾರ್ಯಾಲಯದಲ್ಲಿ ಸೇವೆ ಸಲ್ಲಿಸುತ್ತಿದ್ದೆ. ಅದೇ ನಾನಿರಬೇಕಾದ ಸ್ಥಳ ಎಂದು ನನಗೂ ಅನ್ನಿಸಿತ್ತು. ಅಲ್ಲಿ ಸುಮಾರು 15ರಿಂದ 20 ಜನ ಪ್ರಚಾರಕರು ವಾಸವಾಗಿದ್ದರು. ಅವರ ಜತೆ ನೀನೂ ಇರು ಎಂದರು ವಕೀಲ್ ಸಾಹೇಬ್. ಪ್ರತಿ ದಿನ ಬೆಳಗ್ಗೆ 5 ಗಂಟೆಗೆ ಎದ್ದು ಹಾಲು ತರಲು ಹೋಗುತ್ತಿದ್ದೆ. ಆ ಮೇಲೆ ಪ್ರಾತಃಸ್ಮರಣೆ, ಅದಾದ ಮೇಲೆ ಚಹ ಸಿದ್ಧಪಡಿಸಿ ಎಲ್ಲರಿಗೂ ನೀಡುವುದು ನನ್ನ ಕೆಲಸವಾಗಿತ್ತು. ಅಷ್ಟೇ ಅಲ್ಲ, ಕಾರ್ಯಾಲಯ ಸ್ವಚ್ಛಮಾಡುವ ಕೆಲಸವೂ ನನ್ನದೇ ಆಗಿತ್ತು. ಶಾಖೆ ಮುಗಿಸಿ ಹಿಂದಿರುಗಿದ ಕೂಡಲೇ ಎಲ್ಲರಿಗೂ ಉಪಾಹಾರ ಸಿದ್ಧಪಡಿಸಬೇಕಿತ್ತು. ಎಂಟೂವರೆಯಿಂದ ಒಂಬತ್ತು ಗಂಟೆಯವರೆಗೂ ಎಲ್ಲರಿಗೂ ಉಪಾಹಾರ ಬಡಿಸಿದ ನಂತರ ಸ್ವಚ್ಛಗೊಳಿಸುವ ಕೆಲಸ. ಕಾರ್ಯಾಲಯದಲ್ಲಿ ಸುಮಾರು 8 ಕೊಠಡಿಗಳಿದ್ದವು. ಅವುಗಳ ಕಸ ತೆಗೆದು ನೆಲ ಒರೆಸುತ್ತಿದ್ದುದಲ್ಲದೆ ನನ್ನ ಹಾಗೂ ವಕೀಲ್ ಸಾಹೇಬರ ಉಡುಪುಗಳನ್ನೂ ತೊಳೆಯುತ್ತಿದ್ದೆ. ಮಧ್ಯಾಹ್ನದ ಊಟಕ್ಕೆ ಕಾರ್ಯಕರ್ತರ ಮನೆಗೆ ಹೋಗುತ್ತಿದ್ದೆ. ಅಲ್ಲಿಂದ ವಾಪಸ್ಸಾದ ಮೇಲೆ ಪುನಃ ಚಹ ಸಿದ್ಧಪಡಿಸುವುದು ಹಾಗೂ ಎಲ್ಲರಿಗೂ ನೀಡುವುದು. ಸುಮಾರು ಒಂದು ವರ್ಷದವರೆಗೂ ಇವೇ ನನ್ನ ನಿತ್ಯದ ಕೆಲಸಗಳಾಗಿದ್ದವು. ಹಲವಾರು ಜನರನ್ನು ಭೇಟಿಯಾಗುವ ಅವಕಾಶ ನನಗೆ ಲಭ್ಯವಾಗಿದ್ದೂ ಇದೇ ಅವಧಿಯಲ್ಲಿ. ಆಗ ಇಬ್ಬರು ಮಹಾನ್ ವ್ಯಕ್ತಿಗಳ ಸಾನ್ನಿಧ್ಯ ನನಗೆ ದೊರೆಯಿತು-ಕನ್ಯಾಕುಮಾರಿಯ ವಿವೇಕಾನಂದ ಕೇಂದ್ರದ ಸ್ಥಾಪಕರಾದ ಏಕನಾಥ್‌ಜೀ ರಾನಡೆ ಹಾಗೂ ಭಾರತೀಯ ಮಜ್ದೂರ್ ಸಂಘ(ಬಿಎಂಎಸ್)ವನ್ನು ಸ್ಥಾಪಿಸಿದ ದತ್ತೋಪಂತ್ ಠೇಂಗಡಿ! ಅವರ ಜತೆ ನಾನು ಆಧ್ಯಾತ್ಮಿಕ ಒಡನಾಟ ಹಾಗೂ ಬೌದ್ಧಿಕ ಸಂಪರ್ಕ ಹೊಂದಿದ್ದೆ. ಅದನ್ನು ನೀವು ಹೇಗೆ ಬೇಕಾದರೂ ವ್ಯಾಖ್ಯಾನಿಸಿಕೊಳ್ಳಿ. ಇಬ್ಬರೂ ನನ್ನನ್ನು ಇಷ್ಟಪಡುತ್ತಿದ್ದರು. ನಾನು ವಿವೇಕಾನಂದ

ಕೇಂದ್ರದ ಜವಾಬ್ದಾರಿ ವಹಿಸಿಕೊಳ್ಳಬೇಕು ಎಂದು ಏಕನಾಥ್‌ಜೀ ಬಲವಾಗಿ ಒತ್ತಾಯಿಸಿದರೆ, ತನ್ನ ಜತೆಗಿದ್ದುಕೊಂಡು ಸಹಕರಿಸಬೇಕೆಂಬುದು ದತ್ತೋಪಂತ್‌ಜಿ ಅವರ ಹಠವಾಗಿತ್ತು. ಆದರೆ ನಾನು ಪ್ರಚಾರಕನಾಗಿದ್ದುಕೊಂಡೇ ಹೇಗೋ ಸಂಘದ ಕೆಲಸವನ್ನೂ ನಿರ್ವಹಿಸುತ್ತಿದ್ದೆ".

ಅಧ್ಯಾತ್ಮ ಎನ್ನುತ್ತಾ ಕಾಲೇಜು ಬಿಟ್ಟು ಹಿಮಾಲಯಕ್ಕೆ ತೆರಳಿದ್ದ ನರೇಂದ್ರ ಮೋದಿಯವರಲ್ಲಿ ಮತ್ತೆ ಕಲಿಕೆಯ ಹಂಬಲ ಮೊಳಕೆಯೊಡೆದಿದ್ದು ಇದೇ ಸಂದರ್ಭದಲ್ಲಿ!

'ಏನಾದರೂ ಓದು, ಇತಿಹಾಸ, ಸಂಸ್ಕೃತ ಓದು' ಎನ್ನುತ್ತಿದ್ದರು ವಕೀಲ್ ಸಾಹೇಬ್. ಅವರ ಸಲಹೆಯನ್ನು ಗಂಭೀರವಾಗಿ ತೆಗೆದುಕೊಂಡ ನರೇಂದ್ರ ಮೋದಿ, ದಿಲ್ಲಿ ವಿಶ್ವವಿದ್ಯಾಲಯದಲ್ಲಿ ಅಂಚೆ ಶಿಕ್ಷಣಕ್ಕೆ ಸೇರಿಕೊಂಡರು. ಓದಿ ಪದವಿಯನ್ನೂ ಪಡೆದು ಕೊಂಡರು. ಈ ಮಧ್ಯೆ ಸಂಘದಲ್ಲಿ ಅವರಿಗೆ ಹೆಚ್ಚುವರಿ ಜವಾಬ್ದಾರಿ ನೀಡಲಾಯಿತು. ಆರೆಸ್ಸೆಸ್‌ನ ಪ್ರಾಂತೀಯ ಕಚೇರಿಯ ಪತ್ರವ್ಯವಹಾರವನ್ನು ನೋಡಿಕೊಳ್ಳಬೇಕಾದ ಜವಾಬ್ದಾರಿ ಅದಾಗಿತ್ತು. ಅದು ಮುಕ್ಕಾಲು ಪಾಲು ಸಮಯವನ್ನೇ ನುಂಗಲಾರಂಭಿಸಿತು. ಒಂದು ವರ್ಷ ಹೇಗಾಡಿದರೂ ಜವಾಬ್ದಾರಿಗಳು ಮಾತ್ರ ಹೆಚ್ಚಾಗುತ್ತಲೇ ಇದ್ದವು. ಆರೆಸ್ಸೆಸ್‌ಗಾಗಿ ಹಗಲಿರುಳು ದುಡಿಯುತ್ತಿದ್ದ ಸ್ವಯಂ ಸೇವಕರ ಕುಟುಂಬದ ಸದಸ್ಯರ ವೈದ್ಯಕೀಯ ಸೇವೆಯನ್ನು ನೋಡಿಕೊಳ್ಳಬೇಕಾಯಿತು. ಇಂತಹ ಜವಾಬ್ದಾರಿಯನ್ನೇ ನರೇಂದ್ರ ಕೂಡ ಬಯಸುತ್ತಿದ್ದ, ಅಂತಹ ಸೇವಾಮನೋಭಾವ ಅವರಲ್ಲಿತ್ತು. ಯಾರು ಯಾವ ಹೊತ್ತಿನಲ್ಲಿ ಕರೆದರೂ ಸೇವೆಗೆ ಸಿದ್ಧರಾಗುತ್ತಿದ್ದರು. "ಅಮೆರಿಕದಲ್ಲಿದ್ದ ನನ್ನ ಸಹೋದರಿಯ ಪತಿ ಅಕಾಲಿಕ ಮರಣವನ್ನಪ್ಪಿದರು. ಹಾಗಾಗಿ ತಂಗಿಯನ್ನು ವಾಪಸ್ ಭಾರತಕ್ಕೆ ಕರೆದು ಕೊಂಡು ಬರಬೇಕಾಯಿತು. ಅಂದು ವಿಮಾನ ನಿಲ್ದಾಣದಲ್ಲಿ ಬಂದಿಳಿದಾಗ ನಮ್ಮನ್ನು ಬರಮಾಡಿ ಕೊಂಡಿದ್ದು ನರೇಂದ್ರ ಮೋದಿ. ಅದು ಅತ್ಯಂತ ದುಃಖಕರ ಸಂದರ್ಭವಾಗಿತ್ತು. ಯುವ ಪ್ರಚಾರಕರಾಗಿದ್ದ ನರೇಂದ್ರಭಾಯ್ ಮೋದಿ , ಕೇಶವರಾವ್ ದೇಶಮುಖ್ ಹಾಗೂ ವಕೀಲ್ ಸಾಹೇಬರ ಜತೆ ನಿಲ್ದಾಣಕ್ಕೆ ಆಗಮಿಸಿದ್ದರು. ಅಲ್ಲದೆ ಆಗಾಗ್ಗೆ ಮನೆಗೆ ಭೇಟಿ ನೀಡಿ, ಯೋಗಕ್ಷೇಮ ವಿಚಾರಿಸಿಕೊಳ್ಳುವ ಮೂಲಕ ನನ್ನ ಮನದ ಮೇಲೆ ಅಚ್ಚಳಿಯದ ಛಾಪು ಮೂಡಿಸಿದರು" ಎಂದು ಸ್ನೇಹಿತರೊಬ್ಬರು ಮೋದಿಯವರ ಆತ್ಮೀಯತೆಯನ್ನು ನೆನಪು ಮಾಡಿಕೊಳ್ಳುತ್ತಾರೆ.

ಅಂತಹ ಎಷ್ಟೋ ಘಟನೆಗಳನ್ನು ನರೇಂದ್ರ ಮೋದಿಯವರ ಸ್ನೇಹಿತರು ಹೇಳುತ್ತಾರೆ.

ಸಂಘದ ಹಿರಿಯರು, ಸ್ವಯಂಸೇವಕರು ಪ್ರವಾಸ ಹೊರಟಾಗಲೆಲ್ಲ ಅವರಿಗೆ ಬಸ್, ರೈಲು ಟಿಕೆಟ್‌ಗಳನ್ನು ಕಾದಿರಿಸುವ ಜವಾಬ್ದಾರಿಯೂ ಮೋದಿಯವರದಾಗಿತ್ತು.





ಹಾಗಾಗಿ ರೈಲ್ವೆ ಹಾಗೂ ಸಾರಿಗೆ ಅಧಿಕಾರಿಗಳ ಜತೆ ಸಂಪರ್ಕವಿರಿಸಿಕೊಂಡಿದ್ದ ಮೋದಿ, ಅವರ ಸ್ನೇಹವನ್ನೂ ಸಂಪಾದಿಸಿಕೊಂಡಿದ್ದರು. ಹೇಗೆ ಕೆಲಸ ಮಾಡಿಸಿಕೊಳ್ಳಬೇಕೆಂಬ ಕಲೆ ಕರಗತವಾಗಿತ್ತು. ಈ ಮಧ್ಯೆ, ಸಿದ್ಧಾಪುರದಲ್ಲಿ ವಿಶ್ವ ಹಿಂದೂ ಪರಿಷತ್‌ನ ಸಮ್ಮೇಳನವೊಂದು ಆಯೋಜನೆಯಾಯಿತು. ಡಾ. ವಾಣಿಕರ್‌ಜಿ ಅದರ ಮುಂದಾಳತ್ವ ವಹಿಸಿಕೊಂಡಿದ್ದರು. ಸಹಜವಾಗಿಯೇ ಸಮ್ಮೇಳನದ ಸಂಘಟನೆಯ ಜವಾಬ್ದಾರಿ ಮೋದಿಯವರ ಹೆಗಲೇರಿತು. ಇಂತಹ ಒಂದೊಂದು ಅವಕಾಶಗಳೂ ಸಂಘದ ಕೆಲಸ-ಕಾರ್ಯಗಳಲ್ಲಿ ಅನುಭವ ಸಂಪಾದಿಸಿಕೊಳ್ಳಲು ಅನುವಾದವು.






# 5
## ಜನಸಂಘ–ಎಬಿವಿಪಿ ಸ್ಥಾಪನೆ
## ಸಂಘದ ಬಲವರ್ಧನೆ

1948ರಲ್ಲಿ ಮಹಾತ್ಮ ಗಾಂಧಿ ಹತ್ಯೆಯ ಆರೋಪ ಹೊರಿಸಿ ಆರೆಸ್ಸೆಸ್ ಮೇಲೆ ನಿಷೇಧ ಹೇರಲಾಯಿತು. ಆ ಸಂದರ್ಭದಲ್ಲಿ ಪ್ರೊಫೆಸರ್ ಬಲರಾಜ್ ಮಧೋಕ್ ನೇತೃತ್ವದಲ್ಲಿ ಅಖಿಲ ಭಾರತ ವಿದ್ಯಾರ್ಥಿ ಪರಿಷತ್ತನ್ನು (ಎಬಿವಿಪಿ) ಪ್ರಾರಂಭ ಮಾಡಲಾಯಿತು. ಮೂರು ವರ್ಷಗಳ ನಂತರ ಅಂದರೆ 1951 ಅಕ್ಟೋಬರ್ 21ರಂದು ಜನಸಂಘವನ್ನೂ ಆರಂಭಿಸಲಾಯಿತು. ಆದರ ಸಂಸ್ಥಾಪನಾ ಶೃಂಗದಲ್ಲಿ ಗುಜರಾತ್‌ನಿಂದ ಯಾರೂ ಪಾಲ್ಗೊಳ್ಳದಿದ್ದರೂ ಮುಂಬರುವ ವರ್ಷಗಳಲ್ಲಿ ಜನಸಂಘ ಗುಜರಾತ್‌ನಲ್ಲಿ ಪ್ರಭಾವಿ ಪಾತ್ರವನ್ನು ವಹಿಸುವಂತಾಯಿತು. ಆದರಲ್ಲೂ ವಸಂತ್‌ಭಾಯಿ ಗಜೇಂದ್ರಗಢಕರ್ ಜನಸಂಘದ ರಾಜ್ಯ ಸಂಘಟನಾ ಕಾರ್ಯದರ್ಶಿಯಾಗಿ ಜವಾಬ್ದಾರಿ ವಹಿಸಿಕೊಂಡ ನಂತರ ಪಕ್ಷದ ದೆಸೆಯೇ ಬದಲಾಗತೊಡಗಿತು.

ಬ್ರಿಟಿಷರ ಆಡಳಿತಾವಧಿಯಲ್ಲಿ ಎರಡು ಗುಜರಾತ್‌ಗಳಿದ್ದವು.

ಒಂದು ಭಾಗವನ್ನು ಸಣ್ಣಪುಟ್ಟ ರಾಜರು ಆಳುತ್ತಿದ್ದರೆ ಮತ್ತೊಂದು ಭಾಗ ಬಾಂಬೆ ಪ್ರೆಸಿಡೆನ್ಸಿಯ ಆಡಳಿತಕ್ಕೊಳಪಟ್ಟಿತ್ತು. ನಿಮಗಿದು ವಿಚಿತ್ರ ಎನಿಸಬಹುದು, ಸ್ವಾತಂತ್ರ್ಯ ಬಂದ ನಂತರ ದೇಶದ ಎಲ್ಲೆಡೆಯೂ ಭಾಷೆ ಹಾಗೂ ಪ್ರಾದೇಶಿಕತೆಯ ಆಧಾರದ ಮೇಲೆ ಪ್ರತ್ಯೇಕ ರಾಜ್ಯಗಳನ್ನು ರಚಿಸುವಂತೆ ಚಳವಳಿಗಳು ಆರಂಭವಾದರೆ ಗುಜರಾತಿಗಳು ಮಾತ್ರ ಅಂತಹ ಯಾವ ಬೇಡಿಕೆಯನ್ನೂ ಮುಂದಿಡಲಿಲ್ಲ. ಇಂತಹ ನಿಲುವಿಗೂ ಕಾರಣವಿದೆ. ಮೊದಲನೆಯದಾಗಿ ಗುಜರಾತ್ ಆರ್ಥಿಕವಾಗಿ ಹಿಂದುಳಿದ ಪ್ರದೇಶವಾಗಿದ್ದರಿಂದ ಪ್ರತ್ಯೇಕ ರಾಜ್ಯ ರಚನೆ ಬೇಡಿಕೆ ಮುಂದಿಟ್ಟರೆ ಆದರಿಂದ ಅನಾನುಕೂಲವೇ ಹೆಚ್ಚು ಎಂಬ ಭಾವನೆ ಬಲವಾಗಿತ್ತು. ಇನ್ನೊಂದೆಡೆ ಬಾಂಬೆ ನಗರ ಮಹಾರಾಷ್ಟ್ರಕ್ಕೆ ಸೇರಿದ್ದರೂ ಆದರ

ಅಮೋಘ ಅಭಿವೃದ್ಧಿಯಲ್ಲಿ ಗುಜರಾತಿಗಳ ಕೊಡುಗೆಯೇ ಪ್ರಮುಖವಾಗಿತ್ತು. ಒಂದು ವೇಳೆ ಬಾಂಬೆಯಿಂದ ಪ್ರತ್ಯೇಕಗೊಂಡರೆ ಆರ್ಥಿಕ ಚಟುವಟಿಕೆಗಳ ಕೇಂದ್ರವಾಗಿದ್ದ ಆ ನಗರದಲ್ಲಿ ಸೃಷ್ಟಿಯಾಗುತ್ತಿದ್ದ ಭಾರಿ ಸಂಖ್ಯೆಯ ಉದ್ಯೋಗಾವಕಾಶಗಳು ಕೈತಪ್ಪಿ ಹೋಗುತ್ತವೆ ಎಂಬ ಅಭಿಪ್ರಾಯ ಮೇಲ್ವರ್ಗದ ಗುಜರಾತಿಗಳಲ್ಲಿತ್ತು. ಹಾಗಾಗಿ ಪ್ರತ್ಯೇಕ ರಾಜ್ಯ ರಚನೆಗೆ ಯಾರೂ ಅಷ್ಟಾಗಿ ಬೇಡಿಕೆ ಸಲ್ಲಿಸಲಿಲ್ಲ.

ಮಹಾ ಗುಜರಾತ್ ಜನತಾ ಪರಿಷತ್(ಎಂಜೆಜೆಪಿ) ಎಂಬ ಪಕ್ಷವನ್ನು ಕಟ್ಟಿ ಕೆಲವರು ಹೋರಾಟಕ್ಕೆ ಮುಂದಾದರೂ ಅವರಿಗೆ ಅಷ್ಟಾಗಿ ಜನಬೆಂಬಲ ಇರಲಿಲ್ಲ. ಎಂಜೆಜೆಪಿಯಲ್ಲಿ ಕಮ್ಯುನಿಸ್ಟರು, ಸಮಾಜವಾದಿಗಳು ಹಾಗೂ ಕೆಲ ಕಟ್ಟಾವಾದಿಗಳೇ ತುಂಬಿದ್ದರು. ಹಾಗಾಗಿ ಎಂಜೆಜೆಪಿ ಜತೆ ಕೈಜೋಡಿಸಲು ಜನಸಂಘ ಒಪ್ಪಲಿಲ್ಲ. ಅವರ ಹೋರಾಟಕ್ಕೆ ಹೊರಗಿನಿಂದ ಬೆಂಬಲ ವ್ಯಕ್ತಪಡಿಸಿತು. ಗುಜರಾತ್ ಇಬ್ಭಾಗವಾಗುವವರೆಗೂ ಅಲ್ಲಿ ಕಾಂಗ್ರೆಸ್‌ನದ್ದೇ ದರ್ಬಾರಿತ್ತು. ಅಷ್ಟಕ್ಕೂ ಈ ದೇಶ ಕಂಡ ಮಹಾನ್ ಹೀರೋಗಳಾದ ಮಹಾತ್ಮ ಗಾಂಧೀಜಿ ಮತ್ತು ಸರ್ದಾರ್ ಪಟೇಲ್ ಗುಜರಾತಿಗಳಾಗಿದ್ದರು. ಇವರಿಬ್ಬರ ಅವಸಾನದ ನಂತರ ಗುಜರಾತ್ ಕಾಂಗ್ರೆಸ್ ದಿಕ್ಕುತಪ್ಪಿತು. ಪಕ್ಷದೊಳಗೆ ಒಡಕು ಮೂಡಿ ಬಂಡಾಯ ಕಂಡುಬಂತು. ಹೀಗೆ ದುರ್ಬಲಗೊಂಡ ಕಾಂಗ್ರೆಸ್‌ನ ಕೋಟೆಯೊಳಗೆ ಮೊದಲು ಪ್ರವೇಶಿಸಿದ್ದು ಸ್ವತಂತ್ರ ಪಕ್ಷ. 1960ರ ದಶಕದಲ್ಲಿ ಅದು ಒಂದು ಬಲಿಷ್ಠ ರಾಜಕೀಯ ಶಕ್ತಿಯಾಗಿ ಹೊರಹೊಮ್ಮಿತು. ಆದರೆ 1970, 80ರ ದಶಕದ ವೇಳೆಗೆ ನೇಪಥ್ಯಕ್ಕೆ ಸರಿದ ಸ್ವತಂತ್ರ ಪಕ್ಷ ಜನಸಂಘದ ಉಗಮಕ್ಕೆ ದಾರಿ ಮಾಡಿಕೊಟ್ಟಿತು. ಪ್ರಜಾ ಸೋಶಿಯಲಿಸ್ಟ್ ಪಾರ್ಟಿ ಎಂಬ ಮತ್ತೊಂದು ಪಕ್ಷವಿದ್ದರೂ ಜನಬೆಂಬಲದ ಕೊರತೆಯ ಕಾರಣ ಅದೂ ಸ್ವತಂತ್ರ ಪಕ್ಷದಂತೆಯೇ ಕಗ್ಗತ್ತಲೆಗೆ ಸರಿಯಿತು. ಸಂಯುಕ್ತ ಸಮಾಜವಾದಿ ಪಕ್ಷದ್ದೂ ಅದೇ ಕಥೆ. 1968ರಲ್ಲಿ ಅಂತಾರಾಷ್ಟ್ರೀಯ ನ್ಯಾಯಮಂಡಳಿ ಸೌರಾಷ್ಟ್ರ-ಕಛ್ ಗಡಿವಿವಾದದ ವಿಷಯದಲ್ಲಿ ಪಾಕಿಸ್ತಾನದ ಪರ ತೀರ್ಪು ನೀಡಿದಾಗ ಸಂಯುಕ್ತ ಸಮಾಜವಾದಿ ಪಕ್ಷ ತನ್ನ ಹೋರಾಟದಿಂದಾಗಿ ಸ್ವಲ್ಪ ಹೆಸರು ಗಳಿಸಿಕೊಂಡಿತ್ತು. ಆದರೆ ಹೆಚ್ಚು ಕಾಲ ಉಳಿಯಲಿಲ್ಲ. ಇತ್ತ ತನ್ನ ವಿಶಿಷ್ಟ ಸೈದ್ಧಾಂತಿಕ ನಿಲುವಿನಿಂದಾಗಿ ಆರೆಸ್ಸೆಸ್ ಸ್ವಾತಂತ್ರ್ಯಾನಂತರವೂ ಜನಮಾನಸದಲ್ಲಿ ಸ್ಥಾನ ಪಡೆದುಕೊಂಡಿತು. ಕೆಲವು ಪಕ್ಷಗಳು ಪ್ರಾದೇಶಿಕ ಹೋರಾಟಗಳನ್ನೇ ಜೀವಾಳವಾಗಿಸಿಕೊಂಡರೆ ಎಬಿವಿಪಿ, ಜನಸಂಘದಂತಹ ಸಂಘಟನೆಗಳನ್ನು ಪ್ರಾರಂಭಿಸುವ ಮೂಲಕ ಆರೆಸ್ಸೆಸ್ ಹಿಂದೂ ಸಮಾಜದ ಸ್ವೀಕೃತಿಯನ್ನು ಪಡೆದುಕೊಳ್ಳತೊಡಗಿತು.

ಹೀಗೆ 1970ರ ದಶಕದ ಮೊದಲರ್ಧದ ವೇಳೆಗೆ ವಸಂತ್‌ಭಾಯಿ ಗಜೇಂದ್ರಗಡಕರ್





ನಾಯಕತ್ವದಲ್ಲಿ ಜನಸಂಘ ಗುಜರಾತ್‌ನಲ್ಲಿ ನೆಲೆ ಕಂಡುಕೊಳ್ಳಲಾರಂಭಿಸಿತು. ಅವರು ನಾಥಲಾಲ್ ಜಗ್ಡಾ, ಶಂಕರ್‌ಸಿನ್ಹ್ ವಾಘೇಲಾ, ಕಾಶೀರಾಮ್ ರಾಣಾ, ನಾರಾಯಣ್ ಸಿನ್ಹಾ ಪಡಿಯಾರ್, ಕಸಮ್‌ಭಾಯಿ ಅಜುವಾ, ದತ್ತಾಜಿ ಚಿರಣ್‌ದಾಸ್ ಮುಂತಾದವರನ್ನೊಳಗೊಂಡ ಯುವ ಪಡೆಯನ್ನೇ ಕಟ್ಟಿದರು. ಅಲ್ಲದೆ ಚಿಮಣ್‌ಭಾಯಿ ಶುಕ್ಲಾ, ಕೇಶುಭಾಯಿ ಪಟೇಲ್, ಅರವಿಂದ್ ಮಣಿಯಾರ್, ನರಸಿಂಹ ಗೋಹಿಲ್, ಸೂರ್ಯಕಾಂತ್ ಆಚಾರ್ಯ, ಸುರೇಶ್ ಮೆಹ್ತಾ ಮತ್ತು ಮಕರಂದ್ ದೇಸಾಯಿ ಮುಂತಾದ ಯುವ ನೇತಾರರೂ ಕೂಡ ಜನಸಂಘವನ್ನು ಜನಪ್ರಿಯಗೊಳಿಸಲು ಪ್ರಯತ್ನಿಸುತ್ತಿದ್ದರು. ಇತ್ತ ನರೇಂದ್ರ ಮೋದಿಯವರು ಒಬ್ಬ ಪ್ರಚಾರಕನಾಗಿ ಇನ್ನೂ ತಮ್ಮ ಛಾಪು ಮೂಡಿಸಿರಲಿಲ್ಲ.





# 6

## ಜೆಪಿಯವರ ನವನಿರ್ಮಾಣ ಚಳವಳಿ

## ಇಂದಿರಾ ಕೊಟ್ಟರು ತುರ್ತುಪರಿಸ್ಥಿತಿಯ ಬಳುವಳಿ

1971ರಲ್ಲಿ ಪಾಕಿಸ್ತಾನವನ್ನು ಸೋಲಿಸಿ ಬಾಂಗ್ಲಾದೇಶ ರಚನೆ ಮಾಡಿದ್ದು ಕಾಂಗ್ರೆಸ್ಸಿಗೆ ಭಾರಿ ಬಲ ತಂದುಕೊಟ್ಟಿತು. ಇಂದಿರಾ ಗಾಂಧಿಯವರನ್ನು ವಿರೋಧ ಪಕ್ಷದ ನಾಯಕ ಅಟಲ್ ಅವರೇ 'ದುರ್ಗಾ' ಎಂದು ಪ್ರಶಂಸಿಸಿದರು. ಆದರೆ ಕಾಂಗ್ರೆಸ್ಸಿನ ಗ್ರಹಚಾರ ಸರಿಯಿರಲಿಲ್ಲ, ಗುಜರಾತ್‌ಗೆ ಬರದ ಗರ ಬಡಿಯಿತು. ಜನರಿಗೆ ಆಹಾರಧಾನ್ಯ, ಖಾದ್ಯ ತೈಲ ಮತ್ತು ಸಕ್ಕರೆಯ ಕೊರತೆ ಕಾಡತೊಡಗಿತು. ಸುಮಾರು 8 ಲಕ್ಷ ಜನರು ಪರಿಹಾರ ಕೇಂದ್ರಗಳಲ್ಲಿದ್ದರು. 1972ರ ಅಕ್ಟೋಬರ್ ವೇಳೆಗೆ ಪರಿಸ್ಥಿತಿ ಕೈಮೀರಿ ಹೋಗತೊಡಗಿತು. ಸಾರ್ವಜನಿಕರು ಕಾಂಗ್ರೆಸ್‌ನ ವಿರುದ್ಧ ತಿರುಗಿಬಿದ್ದರು. ಕಾಂಗ್ರೆಸ್‌ನೊಳಗೇ ಕಂಡುಬಂದ ಬಂಡಾಯ ಪಕ್ಷ ತತ್ತರಿಸಿ ಹೋಗುವಂತೆ ಮಾಡಿತು. ಇಂತಹ ಸಂದರ್ಭದಲ್ಲಿ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡ ಪಕ್ಷವೆಂದರೆ ಜನಸಂಘ. ಜನರ ಭಾವನೆಗಳನ್ನು ಅರ್ಥಮಾಡಿಕೊಳ್ಳುವ ಸಲುವಾಗಿ ನವೆಂಬರ್ 3, 4ರಂದು ರಾಜ್‌ಕೋಟ್‌ನಲ್ಲಿ ಜನಸಂಘದ ರಾಷ್ಟ್ರೀಯ ಕಾರ್ಯಕಾರಿಣಿ ಸಮಿತಿ ಸಭೆ ನಡೆಯಿತು. ಸಮಾರೋಪ ಭಾಷಣ ಮಾಡಿದ ಲಾಲ್‌ಕೃಷ್ಣ ಅಡ್ವಾಣಿಯವರು, ಪಕ್ಷದ ಸ್ಥಳೀಯ ಕಾರ್ಯಕರ್ತರು ಪರಿಸ್ಥಿತಿಯ ಮೇಲೆ ನಿಗಾ ಇಟ್ಟಿರಬೇಕು ಹಾಗೂ ಚಿಮಣ್‌ಭಾಯಿ ಪಟೇಲ್ ನೇತೃತ್ವದ ಕಾಂಗ್ರೆಸ್ ಸರಕಾರದ ವಿರುದ್ಧ ಭುಗಿಲೆದ್ದಿದ್ದ ಪ್ರತಿಭಟನೆಯನ್ನು ಇನ್ನೂ ವಿಸ್ತಾರಗೊಳಿಸಬೇಕು ಎಂದು ಕರೆ ನೀಡಿದರು. ಹಾಗೆಯೇ ಆಯಿತು. 1973ರ ಅಂತ್ಯದ ವೇಳೆಗೆ ಹಲವಾರು ಸಂಘಟನೆಗಳು ಒಟ್ಟು ಸೇರಿ ಭಾರಿ ಚಳವಳಿಯನ್ನು ಹಮ್ಮಿಕೊಂಡವು. ಅದೇ "ನವನಿರ್ಮಾಣ". "ಸಂಪೂರ್ಣ ಕ್ರಾಂತಿ"ಗೆ ಕರೆ ನೀಡಿದ 'ನವನಿರ್ಮಾಣ' ಚಳವಳಿಗೆ ಜಯಪ್ರಕಾಶ್ ನಾರಾಯಣ್ ಅವರ ನೇತೃತ್ವ ಇತ್ತು. ಹಾಗಾಗಿ ಪ್ರತಿಭಟನೆ ದಿನದಿಂದ ದಿನಕ್ಕೆ ಬಲಿಷ್ಠವಾಗುತ್ತಾ ಹೋಯಿತು.

ಮುಖ್ಯಮಂತ್ರಿ ಚಿಮಣ್‌ಭಾಯಿಯವರ ಬೆಂಬಲಕ್ಕೆ ನಿಲ್ಲುವ ಬದಲು ಬೆಲೆ ಹೆಚ್ಚಳದ ವಿರುದ್ಧ ನಡೆಯುತ್ತಿದ್ದ ಪ್ರತಿಭಟನೆಗೆ ಕಾಂಗ್ರೆಸ್ಸಿಗರೇ ಬೆಂಬಲ ನೀಡಿದರು. 'ನವನಿರ್ಮಾಣ' ವೇದಿಕೆಯ ಚಳವಳಿ ಗುಜರಾತನ್ನೇ ಅರಾಜಕತೆಯತ್ತ ಕೊಂಡೊಯ್ದಿತು. ರಾಜ್ಯಾದ್ಯಂತ ನಡೆಯುತ್ತಿದ್ದ ಪ್ರತಿಭಟನೆಗಳು ಹಿಂಸಾರೂಪಕ್ಕೆ ತಿರುಗತೊಡಗಿದವು. ಪೊಲೀಸ್ ಗುಂಡೇಟು ತಿಂದು 42 ಜನರು ಪ್ರಾಣ ಕಳೆದುಕೊಂಡರು. ಬರೋಡಾ ಮತ್ತು ಅಹಮದಾಬಾದ್‌ಗಳಿಗೆ ಸೇನೆಯನ್ನು ಕರೆಸಬೇಕಾಯಿತು.

ಈ ಮಧ್ಯೆ ಸ್ವತಃ ಜಯಪ್ರಕಾಶ್ ನಾರಾಯಣರು ಅಹಮದಾಬಾದ್‌ಗೆ ಆಗಮಿಸಿದರು.

ಹಾಗಾಗಿ ಒಬ್ಬ ವರ್ಚಸ್ವೀ ನಾಯಕನನ್ನು ಭೇಟಿಯಾಗುವ, ಅವರನ್ನು ಅರ್ಥಮಾಡಿಕೊಳ್ಳುವ ಅವಕಾಶ ನರೇಂದ್ರ ಮೋದಿಯವರಿಗೆ ಲಭ್ಯವಾಯಿತು. ಗುಜರಾತ್‌ಗೆ ಆಗಮಿಸಿದ ಜೆ.ಪಿ., ಕೂಡಲೇ ತಮ್ಮ ಸ್ವಂತ ರಾಜ್ಯವಾದ ಬಿಹಾರಕ್ಕೆ ತೆರಳಿ ಅಲ್ಲೂ ನವನಿರ್ಮಾಣ ಚಳವಳಿಯನ್ನು ಆರಂಭಿಸುವ ನಿರ್ಧಾರಕ್ಕೆ ಬಂದರು. ಇತ್ತ ಅಖಿಲ ಭಾರತ ವಿದ್ಯಾರ್ಥಿ ಪರಿಷತ್ ಚಿಮಣ್‌ಭಾಯಿ ಅವರ ಭ್ರಷ್ಟ ಕಾಂಗ್ರೆಸ್ ಸರಕಾರದ ವಿರುದ್ಧ ನಡೆಯುತ್ತಿದ್ದ ಹೋರಾಟಕ್ಕೆ ಧುಮುಕುವ ನಿರ್ಧಾರಕ್ಕೆ ಬಂತು. ಹೀಗೆ ಎಬಿವಿಪಿ ಕೂಡ ಜೆ.ಪಿ. ಚಳವಳಿಯಲ್ಲಿ ಭಾಗಿಯಾಯಿತು. ಈ ನಡುವೆ 1974ರ ಉತ್ತರಾರ್ಧದ ವೇಳೆಗೆ ಸಂಪೂರ್ಣ ಕ್ರಾಂತಿಯ ಗುರಿಯನ್ನು ರಾಷ್ಟ್ರಮಟ್ಟಕ್ಕೆ ವಿಸ್ತರಿಸುವ ಮೂಲಕ ಪ್ರಧಾನಿ ಇಂದಿರಾ ಗಾಂಧಿಯವರನ್ನು ಅಧಿಕಾರದಿಂದ ಕಿತ್ತೊಗೆಯುವ ನಿರ್ಧಾರಕ್ಕೆ ಬರಲಾಯಿತು. ಇಂತಹ ಕಲ್ಪನೆ, ಕ್ರಾಂತಿಗೆ ಆರೆಸ್ಸೆಸ್ ಕೂಡ ಬೆಂಬಲ ನೀಡಿತು. ದಿಲ್ಲಿಯಲ್ಲಿ ನಡೆದ ರ್‍ಯಾಲಿಯೊಂದರಲ್ಲಿ ಜೆ.ಪಿ.ಯವರನ್ನು ''ಸಮಾಜವನ್ನು ರಕ್ಷಿಸಲು ಬಂದ ಸಂತ'' ಎಂದು ಆರೆಸ್ಸೆಸ್‌ನ ಸರಸಂಘಚಾಲಕ ಬಾಳಸಾಹೇಬ್ ದೇವರಸ್ ವರ್ಣಿಸಿದರು. ಅದಕ್ಕೆ ಜೆ.ಪಿ. ಕೂಡ ಸ್ಪಂದಿಸಿದರು. ಜನಸಂಘದ 20ನೇ ಅಖಿಲ ಭಾರತ ಶೃಂಗದಲ್ಲಿ ಪಾಲ್ಗೊಂಡ ಜೆ.ಪಿ.ಯವರು, ''ಒಂದು ವೇಳೆ ಆರೆಸ್ಸೆಸ್ ಫ್ಯಾಸಿಸ್ಟ್ ಆದರೆ, ನಾನು ಕೂಡ ಫ್ಯಾಸಿಸ್ಟ್'' ಎಂದು ಘೋಷಿಸಿದರು. ನವನಿರ್ಮಾಣ ಚಳವಳಿ ಎಷ್ಟು ತೀವ್ರವಾಗಿತ್ತೆಂದರೆ ಬೇರೆ ದಾರಿಯೇ ಇಲ್ಲದೆ ಚಿಮಣ್‌ಭಾಯಿಯವರು ರಾಜೀನಾಮೆ ನೀಡಬೇಕಾಗಿ ಬಂತು. ಕೇವಲ ಆರು ತಿಂಗಳ ಕಾಲ ಅಧಿಕಾರದಲ್ಲಿದ್ದ ಚಿಮಣ್‌ಭಾಯಿ 1974, ಫೆಬ್ರವರಿ 9ರಂದು ರಾಜೀನಾಮೆ ನೀಡಿದರು. ಗುಜರಾತ್ ಮೇಲೆ ರಾಷ್ಟ್ರಪತಿ ಆಡಳಿತ ಹೇರಲಾಯಿತು. ವಿಧಾನಸಭೆಯನ್ನು ಅಮಾನತ್ತಿನಲ್ಲಿಡಲಾಯಿತು. ಚಿಮಣ್‌ಭಾಯಿ ಪ್ರಧಾನಿ ಇಂದಿರಾ ಗಾಂಧಿಯವರ ವಿಶ್ವಾಸ ಕಳೆದುಕೊಂಡಿದ್ದಾರೆ ಎಂಬ ವದಂತಿಗಳು ಹರಡಿದವು. ಆದರೆ ವಾಸ್ತವದಲ್ಲಿ ಪಕ್ಷದೊಳಗಿನ ಬಂಡಾಯವೇ ಚಿಮಣ್‌ಭಾಯಿಯವರ ಪತನಕ್ಕೆ





ಕಾರಣವಾಗಿತ್ತು. ಅವರು ಎಷ್ಟು ಹತಾಶರಾಗಿದ್ದರೆಂದರೆ ಮುಖ್ಯಮಂತ್ರಿ ಸ್ಥಾನ, ಕಾಂಗ್ರೆಸ್ ಶಾಸಕಾಂಗ ಪಕ್ಷದ ಅಧ್ಯಕ್ಷ ಸ್ಥಾನ, ವಿಧಾನಸಭೆ ಶಾಸಕ ಸ್ಥಾನ ಹಾಗೂ ಕಾಂಗ್ರೆಸ್‌ನ ಪ್ರಾಥಮಿಕ ಸದಸ್ಯತ್ವಕ್ಕೂ ಒಟ್ಟಿಗೇ ರಾಜೀನಾಮೆ ನೀಡಿದರು!

ಈ ಹಂತದಲ್ಲಿ ಇಂದಿರಾ ಗಾಂಧಿಯವರ ಕೇಂದ್ರ ಸರಕಾರ ರಾಷ್ಟ್ರಪತಿ ಆಡಳಿತವನ್ನು ತೆಗೆದುಹಾಕಬಹುದಿತ್ತು. ಆದರೆ ಇನ್ನೂ ಆರು ತಿಂಗಳ ಕಾಲ ಮುಂದುವರಿಸಿದರು. ಇದರಿಂದ ಬೆಂಕಿಯ ಜ್ವಾಲೆಯಾಗಿದ್ದ ಪ್ರತಿಭಟನೆ ಇನ್ನಷ್ಟು ತೀವ್ರಗೊಂಡಿತು. ಪರಿಸ್ಥಿತಿ ಯಾವ ಮಟ್ಟಕ್ಕೆ ಹೋಯಿತೆಂದರೆ ಮೊರಾರ್ಜಿ ದೇಸಾಯಿಯವರು ಕೂಡಲೇ ವಿಧಾನಸಭೆಗೆ ಚುನಾವಣೆ ನಡೆಸಬೇಕೆಂದು ಒತ್ತಾಯಿಸಿ 1975, ಏಪ್ರಿಲ್ 7ರಂದು ಅನಿರ್ದಿಷ್ಟಾವಧಿಯ ಉಪವಾಸ ಸತ್ಯಾಗ್ರಹಕ್ಕೆ ಕುಳಿತರು. ಕೊನೆಗೂ ಮಣಿದ ಪ್ರಧಾನಿ ಇಂದಿರಾ ಗಾಂಧಿ, ರಾಷ್ಟ್ರಪತಿ ಆಡಳಿತವನ್ನು ಹಿಂದಕ್ಕೆ ಪಡೆದು ಹೊಸದಾಗಿ ಚುನಾವಣೆಗೆ ಆದೇಶಿಸಿದರು. ಚುನಾವಣೆಯಲ್ಲಿ ಕಾಂಗ್ರೆಸ್(ಒ) ಮತ್ತು ಜನಸಂಘ ಹೊಂದಾಣಿಕೆ ಮಾಡಿಕೊಂಡವು. ಸಮಾನ ಚುನಾವಣಾ ಪ್ರಣಾಳಿಕೆಯನ್ನೂ ಹೊರತಂದವು. ಫಲಿತಾಂಶ ಹೊರಬಿದ್ದಾಗ 182 ಸ್ಥಾನಗಳ ಗುಜರಾತ್ ವಿಧಾನಸಭೆಯಲ್ಲಿ ಕಾಂಗ್ರೆಸ್(ಐ)ನ ಬಲ 140ರಿಂದ 79ಕ್ಕೆ ಇಳಿಯಿತು. ಕಾಂಗ್ರೆಸ್(ಒ) 56 ಹಾಗೂ ಜನಸಂಘ 18 ಸ್ಥಾನಗಳನ್ನು ಪಡೆದುಕೊಂಡರೆ, ಚಿಮಣ್‌ಭಾಯಿಯವರ ಕಿಸಾನ್ ಮಜ್ದೂರ್ ಲೋಕ ಪಕ್ಷ 15 ಸ್ಥಾನಗಳನ್ನು ಗಳಿಸಿತು. ನ್ಯಾಷನಲ್ ಲೇಬರ್ ಪಾರ್ಟಿ, ಪಿಎಸ್‌ಪಿ, ಭಾರತೀಯ ಲೋಕದಳ್ ಮುಂತಾದ ಸಣ್ಣಪುಟ್ಟ ಪಕ್ಷಗಳ ಬೆಂಬಲದೊಂದಿಗೆ 1975, ಜೂನ್ 18ರಂದು 'ಜನತಾ ಫ್ರಂಟ್' ಎಂಬ ಮೊಟ್ಟ ಮೊದಲ ಕಾಂಗ್ರೆಸ್ಸೇತರ ಸರಕಾರ ರಚನೆಯಾಯಿತು. ಬಾಬುಭಾಯಿ ಜಸ್ಭಾಯಿ ಪಟೇಲ್ ಮುಖ್ಯಮಂತ್ರಿಯಾದರೆ ಜನಸಂಘದ ಕೇಶುಭಾಯಿ ಪಟೇಲ್, ಮಕರಂದ್ ದೇಸಾಯಿ ಹಾಗೂ ಹೇಮಾಬೇನ್ ಆಚಾರ್ಯ ಮಂತ್ರಿಗಳಾಗಿ ಪ್ರಮಾಣ ವಚನ ಸ್ವೀಕರಿಸಿದರು.

ಇಂತಹ ಬದಲಾವಣೆಯ ಬೆನ್ನಲ್ಲೇ 1975, ಜೂನ್ 26ರಂದು ಇಂದಿರಾ ಗಾಂಧಿ ದೇಶದ ಮೇಲೆ ತುರ್ತುಪರಿಸ್ಥಿತಿಯನ್ನು ಹೇರಿದರು. ಇಡಿ ದೇಶವೇ ರೊಚ್ಚಿಗೆದ್ದು ಅರಾಜಕ ಪರಿಸ್ಥಿತಿ ಸೃಷ್ಟಿಯಾಯಿತು. ಪ್ರತಿಪಕ್ಷಗಳ ಪ್ರಭಾವಿ ರಾಜಕಾರಣಿಗಳನ್ನು ರಾತ್ರೋರಾತ್ರಿ ಬಂಧಿಸಿ ಜೈಲಿಗೆ ತಳ್ಳಲಾಯಿತು. ಜಯಪ್ರಕಾಶ್ ನಾರಾಯಣ್, ಮೊರಾರ್ಜಿ ದೇಸಾಯಿ, ಚರಣ್ ಸಿಂಗ್, ಎಲ್.ಕೆ. ಅಡ್ವಾಣಿ ಮತ್ತು ಅಟಲ್ ಬಿಹಾರಿ ವಾಜಪೇಯಿ ಬಂಧಿತರಾದರು. ಅದು ಬೆಂಕಿಗೆ ತುಪ್ಪ ಸುರಿದಂತಾಯಿತು.





# 7

# ಅದೊಂದು ಮೈನವಿರೇಳಿಸುವ ಸಾಹಸ

ಆರೆಸ್ಸೆಸ್‌ಗೆ ಬೇರೆ ದಾರಿಯೇ ಇರಲಿಲ್ಲ. ಇಂದಿರಾ ಗಾಂಧಿಯವರು ದೇಶದ ಮೇಲೆ ಹೇರಿದ ತುರ್ತುಪರಿಸ್ಥಿತಿಯ ವಿರುದ್ಧ ಹೋರಾಡಲೇಬೇಕಾಯಿತು. ಗುಜರಾತ್ ಲೋಕಸಂಘರ್ಷ ಸಮಿತಿ ರಚನೆಯಾಯಿತು. ಸಂಘದ ಕ್ಷೇತ್ರ ಪ್ರಚಾರಕ ಲಕ್ಷ್ಮಣ್‌ರಾವ್ ಇನಾಂದಾರ್ (ವಕೀಲ್ ಸಾಹೇಬ್) ನೇತೃತ್ವದಲ್ಲಿ ಸಭೆಯೊಂದು ನಡೆಯಿತು. ಭೂಗತ ಚಟುವಟಿಕೆಗಳ ಮೂಲಕ ತುರ್ತುಪರಿಸ್ಥಿತಿಯ ವಿರುದ್ಧ ಹೋರಾಟ ಆರಂಭಿಸಬೇಕೆಂಬ ನಿರ್ಧಾರಕ್ಕೆ ಬರಲಾಯಿತು. ಆರೆಸ್ಸೆಸ್‌ನ ಯಾವ ಕಾರ್ಯಕರ್ತರೂ ಪೊಲೀಸರ ಬಲೆಗೆ ಬೀಳಬಾರದು ಎಂಬ ಉದ್ದೇಶದಿಂದ ಸುರಕ್ಷಿತ ಮಾರ್ಗೋಪಾಯಗಳನ್ನೂ ಯೋಚಿಸಲಾಯಿತು. ಆರೆಸ್ಸೆಸ್ ಕಾರ್ಯಕರ್ತರು ಸುರಕ್ಷಿತವಾಗಿ ಉಳಿದುಕೊಳ್ಳಬಹುದಾದ ಮನೆಗಳನ್ನೂ ಗುರುತಿಸಲಾಯಿತು. ಹೀಗೆ ಕಾರ್ಯಕ್ರಮ ಪಟ್ಟಿಯನ್ನು ಸಿದ್ಧಪಡಿಸಿದ ಕೂಡಲೇ ಆರೆಸ್ಸೆಸ್ ಕಾರ್ಯಕರ್ತರು ರಾಜ್ಯದ ಮೂಲೆ ಮೂಲೆಗಳಿಗೆ ಸಾಗಿ ಅಹಿಂಸಾ ಚಳವಳಿಯ ಸಂದೇಶವನ್ನು ಪಸರಿಸಲಾರಂಭಿಸಿದರು.

ಆ ಸಂದರ್ಭದಲ್ಲಿ ಕೂಡ ಚಳವಳಿಯ ಸಂಘಟನಾ ಕಾರ್ಯದ ಜವಾಬ್ದಾರಿಯನ್ನು ನೀಡಿದ್ದು ನರೇಂದ್ರ ಮೋದಿಯವರಿಗೇ!

ಇತರ ಆರೆಸ್ಸೆಸ್ ಕಾರ್ಯಕರ್ತರಂತೆ ಮೋದಿಯವರು ಕೂಡ ತಲೆಮರೆಸಿಕೊಂಡರು. ಅವರ ಇರುವಿಕೆ ಹಾಗೂ ಚಲನವಲನಗಳು ಕೆಲವೇ ಕೆಲವರಿಗೆ ಮಾತ್ರ ತಿಳಿದಿತ್ತು. 1975, ಜುಲೈ ಕೊನೆಯ ವೇಳೆಗೆ ಮೋದಿಯವರಿಗೆ ಸಂದೇಶವೊಂದು ಬಂತು. ರಾತ್ರಿ 10.30 ಗಂಟೆಗೆ ಪ್ರಭುದಾಸ್ ಪಟೌರಿ ಅವರ ನಿವಾಸಕ್ಕೆ ಬರುವಂತೆ ತಿಳಿಸಲಾಯಿತು. ಸಮಯಕ್ಕೆ ಸರಿಯಾಗಿ ಆಗಮಿಸಿದ ಮೋದಿಯವರಿಗೆ ಸದ್ಯದಲ್ಲೇ ಜಾರ್ಜ್ ಫರ್ನಾಂಡಿಸ್ ಬರಲಿದ್ದಾರೆ ಎಂದು

ತಿಳಿಸಲಾಯಿತು. ಜಾರ್ಜ್ ಆಗಮಿಸಿದಾಗ ಯಾರೂ ಅವರನ್ನು ಗುರುತಿಸುವಂತಿರಲಿಲ್ಲ. ಇಸ್ತ್ರಿ ಮಾಡದೆ ಶತಶತಮಾನಗಳೇ ಕಳೆದುಹೋಗಿರುವಂತೆ ಕಾಣುತ್ತಿದ್ದ ಕುರ್ತಾ ಧರಿಸಿದ್ದ ಜಾರ್ಜ್ ತಲೆ ಸುತ್ತ ಹಸಿರು ಬಟ್ಟೆ ಮತ್ತು ಸೊಂಟಕ್ಕೆ ಹರಿದ ಲುಂಗಿ ಸುತ್ತಿಕೊಂಡಿದ್ದರು. ಅಷ್ಟೇ ಅಲ್ಲ ಗಡ್ಡ ಬೆಳೆಸಿಕೊಂಡಿದ್ದ ಜಾರ್ಜ್ ಮುಸ್ಲಿಂ ಫಕೀರನಂತೆ ಕಾಣುತ್ತಿದ್ದರು. ನರೇಂದ್ರ ಮೋದಿ ಮತ್ತು ಜಾರ್ಜ್ ಪರಸ್ಪರ ಆಲಂಗಿಸಿಕೊಂಡು ಸಂದೇಶವನ್ನು ವಿನಿಮಯ ಮಾಡಿಕೊಂಡರು.

ಸ್ವಯಂಸೇವಕರು ಹಾಗೂ ಸಂಘ ಪರಿವಾರದ ಇತರರ ಯೋಗಕ್ಷೇಮವನ್ನು ನೋಡಿಕೊಳ್ಳುವ ಕೆಲಸವಲ್ಲದೆ ಹೊರ ರಾಜ್ಯಗಳಿಂದ ಆಗಮಿಸುತ್ತಿದ್ದ ನಾಯಕರ ಸುರಕ್ಷತೆಯ ಜವಾಬ್ದಾರಿಯನ್ನೂ ಮೋದಿಯವರಿಗೆ ನೀಡಲಾಗಿತ್ತು. ಜತೆಗೆ ಶೀಘ್ರವಾಗಿ ಸಭೆಗಳನ್ನು ಆಯೋಜಿಸುವ ಜವಾಬ್ದಾರಿಯೂ ಇತ್ತು. ಅಂತಹ ಒಂದು ಸಭೆಯನ್ನುದ್ದೇಶಿಸಿ ಮಾತನಾಡಿದ್ದು ಮತ್ತಾರೂ ಅಲ್ಲ ಬಾಂಬೆ ಹೈಕೋರ್ಟ್‌ನ ನ್ಯಾಯಮೂರ್ತಿಯಾಗಿದ್ದ ಎಂ.ಸಿ. ಛಾಗ್ಲಾ! ಸಭೆಯ ನಂತರ ಚರ್ಚಿಸಿದ ವಿಷಯಗಳನ್ನು ಆದ್ಯತೆಯ ಆಧಾರದ ಮೇಲೆ ಪಟ್ಟಿ ಮಾಡಿ ಅವುಗಳನ್ನು ಕರಪತ್ರದಲ್ಲಿ ಮುದ್ರಿಸಿ ವಿತರಿಸುವ ಕೆಲಸವನ್ನೂ ಮೋದಿ ಮಾಡುತ್ತಿದ್ದರು. ಹಾಗಾಗಿ ಪೊಲೀಸರಿಂದ ತಪ್ಪಿಸಿಕೊಳ್ಳುವುದು ಕಷ್ಟವಾಗುತ್ತಿತ್ತು. ಪದೇ ಪದೆ ನೆಲೆ ಬದಲಾಯಿಸಿಕೊಳ್ಳಬೇಕಾಗುತ್ತಿತ್ತು. ಈ ಎಲ್ಲ ಕಾರ್ಯಗಳಲ್ಲೂ ನರೇಂದ್ರ ಮೋದಿ ಸೈ ಎನಿಸಿಕೊಂಡರು. ಅದರಲ್ಲೂ ಇಂದಿರಾ ಗಾಂಧಿಯವರು ಕಾಮನ್‌ವೆಲ್ತ್ ರಾಷ್ಟ್ರಗಳ ಸಂಸತ್ ಪ್ರತಿನಿಧಿಗಳ ಅಂತಾರಾಷ್ಟ್ರೀಯ ಶೃಂಗವನ್ನು ಏರ್ಪಡಿಸಿದಾಗ ಐದು ಕೈಪಿಡಿಗಳನ್ನು ಸಿದ್ಧಪಡಿಸಿ ದಿಲ್ಲಿಗೆ ಕಳುಹಿಸಿದ ನರೇಂದ್ರ ಮೋದಿ ಎಲ್ಲರ ಹುಬ್ಬೇರಿಸಿದರು.

1. ಭಾರತೀಯ ಮಾಧ್ಯಮಗಳ ಮೇಲೆ ನಿರ್ಬಂಧ.
2. ವಾಸ್ತವಾಂಶಗಳು V/S ಇಂದಿರಾ ಗಾಂಧಿಯವರ ಹುಸಿ ಮಾತುಗಳು.
3. ಇಂದಿರಾ ಹೇಳಿದ 20 ಸುಳ್ಳುಗಳು.
4. ಕಾನೂನನ್ನು ಧಿಕ್ಕರಿಸುವುದೇ ಕರ್ತವ್ಯವಾದಾಗ.
5. ಆರ್ಥಿಕ ಗೊಂದಲಗಳ ಗೂಡು.

ಇಂತಹ ಐದು ಕೈಪಿಡಿಗಳ ನೂರಾರು ಪ್ರತಿಗಳನ್ನು ಮುದ್ರಿಸಿ, ರೈಲಿನ ಮೂಲಕ ಗೌಪ್ಯವಾಗಿ ದಿಲ್ಲಿಗೆ ಕಳುಹಿಸಿ ಕಾಮನ್‌ವೆಲ್ತ್ ಪ್ರತಿನಿಧಿಗಳಿಗೆ ವಿತರಿಸುವ ಸಾಹಸದ ಯೋಚನೆಯೇ ಮೈನವಿರೇಳಿಸುತ್ತದೆ. ಅಂತಹ ಸಾಹಸಕ್ಕೆ ಮೋದಿ ಕೈಹಾಕಿದ್ದರು. ಈ ನಡುವೆ ತಲೆಮರೆಸಿಕೊಂಡಿದ್ದ ಲೋಕ ಸಂಘರ್ಷ ಸಮಿತಿಯ ಕಾರ್ಯದರ್ಶಿ ನಾನಾಜಿ ದೇಶ್‌ಮುಖ್ ಪೊಲೀಸರಿಗೆ ಸಿಕ್ಕಿಬಿದ್ದರು. ನರೇಂದ್ರ ಮೋದಿಯವರು ಕೈಪಿಡಿಗಳನ್ನು ಕಳುಹಿಸಿದ್ದ





ವಿಳಾಸ ನಾನಾಜಿಯವರ ಬಳಿ ಇತ್ತು. ಹಾಗಾಗಿ ಪೊಲೀಸರಿಗೆ ವಿಷಯ ಗೊತ್ತಾಗುವ ಅಪಾಯ ಇತ್ತು. ಅಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಪೂರ್ವನಿಯೋಜಿತ ವಿಳಾಸಗಳನ್ನು ಬದಲಾಯಿಸುವುದು ಸುಲಭದ ಮಾತಾಗಿರಲಿಲ್ಲ. ನರೇಂದ್ರ ಮೋದಿ ಆ ಕಾರ್ಯದಲ್ಲೂ ಸೈ ಎನಿಸಿಕೊಂಡರು.

1975, ಅಕ್ಟೋಬರ್ ಅಂತ್ಯದ ವೇಳೆಗೆ ಲೋಕ ಸಂಘರ್ಷ ಸಮಿತಿಯ ಭೂಗತ ಸಭೆ ನಡೆಯಿತು. ನೆಹರು ಅವರ ಜನ್ಮದಿನವಾದ ನವೆಂಬರ್ 14ರಂದು ಸತ್ಯಾಗ್ರಹವನ್ನು ಹಮ್ಮಿಕೊಳ್ಳುವ ನಿರ್ಧಾರಕ್ಕೆ ಬರಲಾಯಿತು. ಇದರ ಬಗ್ಗೆ ಪೊಲೀಸರಿಗೆ ಯಾವ ಸುಳಿವೂ ಸಿಗದಂತೆ ಎಲ್ಲ ಮುಂಜಾಗ್ರತೆಗಳನ್ನೂ ತೆಗೆದುಕೊಳ್ಳಲಾಯಿತು. "ಮದುವೆ ದಿನಾಂಕ ನಿಗದಿಯಾಗಿದೆ" ಎಂಬ ಗೌಪ್ಯ ಸಂಕೇತವನ್ನು ಇಟ್ಟುಕೊಳ್ಳಲಾಯಿತು. ನವೆಂಬರ್ 14ರಂದು ಮದುವೆಯೆಂದು ಪಕ್ಷದ ಕಾರ್ಯಕರ್ತರಿಗೆ ದೂರವಾಣಿ ಮೂಲಕ ತಿಳಿಸಲಾಯಿತು. ರಾಜಸ್ಥಾನದಲ್ಲಿದ್ದ ಭೂಗತ ಚಳವಳಿಗೆ ಎರಡು ಲಕ್ಷ ಹಿಂದಿ ಕರಪತ್ರಗಳ ಅಗತ್ಯವಿತ್ತು. ಇಡಿ ರಾಜ್ಯಕ್ಕೇ ವಿತರಿಸುವ ಉದ್ದೇಶ ಇಟ್ಟುಕೊಳ್ಳಲಾಗಿತ್ತು. ಈ ಹಿನ್ನೆಲೆಯಲ್ಲಿ ಯಾರಾದರೂ ಮುದ್ರಕರನ್ನು ಹುಡುಕಬೇಕಾದುದು ಮೋದಿಯವರ ಮೊದಲ ಕಾರ್ಯವಾಗಿತ್ತು. ಮುದ್ರಣವಾದ ನಂತರ ರಾಜಸ್ಥಾನಕ್ಕೆ ಕಳುಹಿಸುವುದೂ ಕೂಡ ಅಷ್ಟೇ ಕಠಿಣ ಕೆಲಸವಾಗಿತ್ತು. ರಾಜಸ್ಥಾನದ ಪ್ರತಿ ಜಿಲ್ಲೆಯಿಂದ ಇಬ್ಬರು ಸ್ವಯಂಸೇವಕರನ್ನು ಅಹಮದಾಬಾದ್‌ಗೆ ಕಳುಹಿಸುವಂತೆ ತಿಳಿಸಲಾಯಿತು. ಬರುವಾಗ ಕೈಚೀಲವನ್ನು ತರುವಂತೆ ಸೂಚಿಸಲಾಯಿತು. ಅವುಗಳಲ್ಲಿ ಯಾರ ಅನುಮಾನಕ್ಕೂ ಎಡೆಯಾಗದಂತೆ ಕರಪತ್ರಗಳನ್ನು ಸಾಗಿಸಬೇಕಿತ್ತು. ಮಹಾರಾಷ್ಟ್ರಕ್ಕೆ ಕಳುಹಿಸಬೇಕಾದ ಕರಪತ್ರಗಳನ್ನು ಸೂರತ್‌ನಲ್ಲಿ, ಮಧ್ಯಪ್ರದೇಶಕ್ಕೆ ಸಾಗಿಸಬೇಕಾದ ಕರಪತ್ರಗಳನ್ನು ಗೋಧ್ರಾದಲ್ಲಿ ಮುದ್ರಿಸಲಾಯಿತು. ಕೆಲವೊಮ್ಮೆ ಮುಗ್ಧರಂತೆ ಕಾಣುವ ಮಹಿಳೆಯರನ್ನು ಕರಪತ್ರ ಸಾಗಿಸಲು ಬಳಸಿಕೊಳ್ಳಲಾಯಿತು. ಹೀಗೆ ನವೆಂಬರ್ 14ರಂದು ಹಮ್ಮಿಕೊಳ್ಳಬೇಕಿದ್ದ ಸತ್ಯಾಗ್ರಹ ಯೋಜನೆಯಂತೆ ಸುಸೂತ್ರವಾಗಿ ನಡೆದು ಸರಕಾರವನ್ನು ಪೇಚಿಗೀಡುಮಾಡಲಾಯಿತು.

ಅದರ ಹಿರಿಮೆ ಮೋದಿಯವರಿಗೆ ಸಲ್ಲಬೇಕು.






# 8
# ಮೋದಿ 'ಹ್ಯಾಪಿ ನ್ಯೂ ಇಯರ್' ಎಂದರು ವರ್ಮಾ ಹೌಹಾರಿದರು!

ಒಬ್ಬ ಭೂಗತ ಕಾರ್ಯಕರ್ತನಾಗಿ ನರೇಂದ್ರ ಮೋದಿಯವರು ಆಗಾಗ್ಗೆ ವೇಷ ಬದಲಿಸಿಕೊಳ್ಳುತ್ತಿದ್ದರು. ಒಮ್ಮೆ ಸನ್ಯಾಸಿಯ ವೇಷ ಧರಿಸಿದರೆ, ಮತ್ತೊಮ್ಮೆ ಗಡ್ಡ ಮತ್ತು ಕೂದಲನ್ನು ಉದ್ದುದ್ದ ಬಿಟ್ಟುಕೊಂಡು ಅರೆಬರೆ ಸರ್ದಾರ್ಜಿಯಂತೆ ಕಾಣಿಸಿಕೊಳ್ಳುತ್ತಿದ್ದರು. ಬರಿ ವೇಷ ಬದಲಾಯಿಸಿಕೊಳ್ಳುತ್ತಿದ್ದುದು ಮಾತ್ರವಲ್ಲ ಹಾಕುತ್ತಿದ್ದ ವೇಷಕ್ಕೆ ತಕ್ಕಂತೆ ವರ್ತಿಸುತ್ತಲೂ ಇದ್ದರು. ಸತತ ಅಭ್ಯಾಸ ಮಾಡಿ ಸರ್ದಾರ್ಜಿಗಳಂತೆಯೇ ಜೋಕು ಹೇಳುತ್ತಿದ್ದರು. ಒಂದು ಸಾರಿ ಭಾವನಗರ ಜೈಲಿನಲ್ಲಿದ್ದ ಶಂಕರ್‌ಸಿನ್ಹ್ ವಘೇಲಾ ಹಾಗೂ ವಿಷ್ಣು ಪಂಡ್ಯಾ ಅವರನ್ನು ಭೇಟಿಯಾಗಲೇಬೇಕಾದ ಸಂದರ್ಭ ಎದುರಾಯಿತು. ಆದರೆ ಭೂಗತನಾಗಿದ್ದ ಆರೆಸ್ಸೆಸ್ ಕಾರ್ಯಕರ್ತನೊಬ್ಬ ಜೈಲಿಗೆ ಭೇಟಿ ನೀಡುವುದೆಂದರೆ ಅಪಾಯಕ್ಕೆ ಆಹ್ವಾನ ನೀಡಿದಂತೆಯೇ. ಇಷ್ಟಾಗಿಯೂ ಜೈಲಿಗೆ ನಿರಂತರವಾಗಿ ಭೇಟಿ ನೀಡುತ್ತಿದ್ದ ಮಹಿಳೆಯೊಬ್ಬರ ಜತೆಗಾರನಾಗಿ ಒಳಪ್ರವೇಶಿಸಿದ ಮೋದಿಯವರು ವಘೇಲಾ ಹಾಗೂ ಪಾಂಡ್ಯಾ ಅವರನ್ನು ಯಶಸ್ವಿಯಾಗಿ ಭೇಟಿ ಮಾಡಿ ಬಂದರು.

ಅದು ನಿಜಕ್ಕೂ ಎದೆಗಾರಿಕೆ ಇದ್ದವರು ಮಾಡುವ ಕೆಲಸವಾಗಿತ್ತು.

ಜೈಲಿನಲ್ಲಿದ್ದ ಆರೆಸ್ಸೆಸ್ ಕಾರ್ಯಕರ್ತರ ಕುಟುಂಬ ನಿರ್ವಹಣೆಗಾಗಿ ನಿಧಿ ಸಂಗ್ರಹಣೆ ಮಾಡುವುದು ಇವೆಲ್ಲಕ್ಕಿಂತಲೂ ಮಿಗಿಲಾದ ಸವಾಲಾಗಿತ್ತು. ಶ್ರೀಮಂತರು ಹಣ ನೀಡುತ್ತಿರಲಿಲ್ಲ, ಹೆಚ್ಚಿನ ಸಹಾಯ ಹರಿದುಬರುತ್ತಿದ್ದುದು ಸಾಮಾನ್ಯ ಜನರಿಂದ. ಸಂಘ ಪರಿವಾರಕ್ಕೆ ಸೇರದವರೂ ಕೆಲವೊಮ್ಮೆ ನೀಡುತ್ತಿದ್ದ ಸಹಾಯ ಖುಷಿ ಕೊಡುತ್ತಿತ್ತು. ರಾಜಕೀಯದಿಂದ ದೂರವಿದ್ದ, ಆದರೆ ತುರ್ತುಪರಿಸ್ಥಿತಿಯನ್ನು ವಿರೋಧಿಸುತ್ತಿದ್ದ ಜನರು ಅಲ್ಪಸ್ವಲ್ಪ ದೇಣಿಗೆ ನೀಡುತ್ತಿದ್ದರು. ತುರ್ತುಪರಿಸ್ಥಿತಿ ಸಂದರ್ಭದಲ್ಲಿ "ಮುಕ್ತವಾಣಿ" ಎಂಬ ಭೂಗತ ಪತ್ರಿಕೆ

ಯನ್ನು ಹೊರತರಲಾಗುತ್ತಿತ್ತು. ಅದರಲ್ಲಿ ಇಂದಿರಾ ಗಾಂಧಿಯವರ ಸುಳ್ಳಿನ ಕಂತೆಗಳು ಮತ್ತು ತುರ್ತುಪರಿಸ್ಥಿತಿಯ ಕರಾಳ ರೂಪವನ್ನು ಬಯಲು ಮಾಡಲಾಗುತ್ತಿತ್ತು. ಭೂಗತರಾಗಿದ್ದ ಕಾರ್ಯಕರ್ತರ ಸಮಗ್ರ ಅಭಿಪ್ರಾಯ, ಸಲಹೆಗಳನ್ನು ತಿಳಿದುಕೊಳ್ಳುವ ಸಲುವಾಗಿ ವಾರ್ಡ್‌ನಿಂದ ಜಿಲ್ಲಾ ಮಟ್ಟದವರೆಗೂ ರಹಸ್ಯ ಸಭೆಗಳನ್ನು ನಡೆಸಲಾಗುತ್ತಿತ್ತು. ಇಂತಹ ಪ್ರತಿ ಸಭೆಗಳಿಗೆ 15ರಿಂದ 20 ಜನರನ್ನು ಮೀರಿ ಯಾರನ್ನೂ ಆಹ್ವಾನಿಸುತ್ತಿರಲಿಲ್ಲ. ಒಬ್ಬ ಪೂರ್ಣಕಾಲಿಕ ಕಾರ್ಯಕರ್ತನಿಗೆ ಕನಿಷ್ಠ ಹತ್ತು ಕುಟುಂಬಗಳ ಸಹಾಯದ ಅಗತ್ಯವಿದೆಯೆಂಬುದನ್ನು ಮೋದಿಯವರು ಕಂಡುಕೊಂಡರು. ಗುಜರಾತ್‌ನಾದ್ಯಂತ ಪ್ರವಾಸ ಕೈಗೊಂಡು ಮನೆಮನೆಗೂ ಅಲೆದ ಮೋದಿ, ಸಂಭವನೀಯ ಸಹಾಯದಾರರ ಮನೆಗಳನ್ನು ಸ್ವತಃ ಗುರುತಿಸಿದರು. ಅದೊಂದು ಅದ್ಭುತ ಅನುಭವ. ಸಹಾಯ ಮಾಡಲು ಮುಂದೆ ಬಂದವರು ತುರ್ತುಪರಿಸ್ಥಿತಿಯ ವಿರುದ್ಧ ಹೋರಾಡುತ್ತಿದ್ದವರ ಮನಸ್ಸುಗಳನ್ನು ಅರ್ಥಮಾಡಿಕೊಂಡವರಾಗಿದ್ದರು. ಅದು ಜಯಪ್ರಕಾಶ್ ನಾರಾಯಣ್, ಸರ್ವೋದಯ ಕಾರ್ಯಕರ್ತರು ಅಥವಾ ಆರೆಸ್ಸೆಸ್ ಹಾಗೂ ಅದರ ನಾಯಕರಾಗಿರಬಹುದು, ತಾವು ಯಾವ ವ್ಯಕ್ತಿಗಳಿಗೆ ಸಹಾಯ ನೀಡುತ್ತಿದ್ದೇವೋ ಆ ವ್ಯಕ್ತಿಗಳು ರಾಜಕೀಯ ಮಹತ್ವಾಕಾಂಕ್ಷೆಗಳನ್ನು ಮೀರಿ ನಿಂತವರು ಎಂಬುದು ಜನರಿಗೂ ಮನವರಿಕೆಯಾಗಿತ್ತು. ಇಲ್ಲಿ ಗಮನಿಸಬೇಕಾದ ಬಹುಮುಖ್ಯವಾದ ಅಂಶವೆಂದರೆ, 21 ತಿಂಗಳುಗಳ ಕಾಲ ಜಾರಿಯಲ್ಲಿದ್ದ ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ ಸರ್ವೋದಯ ಹಾಗೂ ಸಂಘದ ಕಾರ್ಯಕರ್ತರ ನಡುವೆ ಸ್ಪರ್ಧೆ ಹೋಗಿ ಆಪ್ತತೆ ಬೆಳೆಯಿತು. ಸಂಘದ ಬಗ್ಗೆ ಇದ್ದ ಪೂರ್ವಗ್ರಹಗಳು, ಹುಸಿ ಪ್ರಚಾರಾಂದೋಲನಗಳು, ಹುಸಿ ಸುಳ್ಳುಗಳು ದೂರವಾದವು. ಸಂದರ್ಭವೇ ಇಬ್ಬರನ್ನು ಒಟ್ಟು ಮಾಡಿತು. ನವನಿರ್ಮಾಣ ಚಳವಳಿಯ ಕಾಲದಲ್ಲಿ ಪ್ರಾರಂಭವಾದ ಇಂತಹ ಆಪ್ತ ಮೈತ್ರಿಯ ಪ್ರಕ್ರಿಯೆಗೆ ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ ಸ್ಥಿರತೆ ದೊರೆಯಿತು. ನಿಜ ಹೇಳಬೇಕೆಂದರೆ ಪೊಲೀಸರಿಂದ ತಪ್ಪಿಸಿಕೊಳ್ಳುವ ಸಲುವಾಗಿ ಆರೆಸ್ಸೇತರ ಹೋರಾಟಗಾರರು ಗುಜರಾತಿಗೆ ಬಂದಿದ್ದೇ ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ, ಅವರಿಗೆ ಊಟ, ಆಶ್ರಯ ನೀಡಿದ್ದು ಆರೆಸ್ಸೆಸ್ ಬೆಂಬಲಿಗರ ಕುಟುಂಬಗಳು. ಹಾಗೆ ಒಂದೆಡೆ ಇದ್ದ ಫಲವಾಗಿ ಆರೆಸ್ಸೆಸ್‌ನ ಪರಿಶುದ್ಧ ಮನಸ್ಸು, ಉದ್ದೇಶ ಹಾಗೂ ರಾಷ್ಟ್ರಪ್ರೇಮ ಇತರರ ಅನುಭವಕ್ಕೆ ಬಂತು. ಈ ಬಗ್ಗೆ ಸ್ವತಃ ಮೋದಿಯವರು ತಮಗಾದ ಅನುಭವವೊಂದನ್ನು ಹೇಳಿಕೊಂಡಿದ್ದಾರೆ. 1976, ಜನವರಿ 1ರಂದು ನರೇಂದ್ರ ಮೋದಿಯವರನ್ನು ರಾಮ್‌ಲಾಲ್ ಪಾರೀಖ್ ಎಂಬವರ ಮನೆಗೆ ಆಹ್ವಾನಿಸಲಾಗಿತ್ತು. ಅಲ್ಲಿ ಲೋಕಸಂಘರ್ಷ ಸಮಿತಿಯ





ಪ್ರಮುಖ ನಾಯಕ ರವೀಂದ್ರ ವರ್ಮಾ ಎಂಬುವರನ್ನು ಭೇಟಿಯಾಗಬೇಕಿತ್ತು. ಸಮಯಕ್ಕೆ ಸರಿಯಾಗಿ ಆಗಮಿಸಿದ ಮೋದಿಯವರು ಎದುರುಗೊಂಡ ವರ್ಮಾ ಅವರಿಗೆ "ಹ್ಯಾಪಿ ನ್ಯೂ ಇಯರ್" ಎಂದರು! ಆಶ್ಚರ್ಯಚಕಿತರಾದ ವರ್ಮಾ, "ನರೇಂದ್ರಜೀ, ನಾನು ಕೂಡ ನಿಮಗೆ ಹ್ಯಾಪಿ ನ್ಯೂ ಇಯರ್ ಹೇಳಬೇಕೆಂದಿದ್ದೆ, ಆದರೆ ಹಿಂದುತ್ವವಾದಿಯಾದ ನೀವು ಬೇಸರಿಸಿಕೊಳ್ಳುತ್ತೀರೆಂದು ಹೇಳಲಿಲ್ಲ" ಎಂದರು. ಆಗ "ಹಿಂದುತ್ವದ ದೊಡ್ಡ ಗುಣವೇ ಅದು. ಹಿಂದುತ್ವದಲ್ಲಿ ಸಂಕುಚಿತ ಮನಸ್ಸಿಗೆ ಅವಕಾಶವೇ ಇಲ್ಲ" ಎಂದಿದ್ದರು ಮೋದಿ. ಹೀಗೆ ಮೋದಿ ಮತ್ತು ವರ್ಮಾ ಅವರ ನಡುವೆ ಕ್ಷಣಕಾಲದಲ್ಲಿ ಸ್ನೇಹ ಏರ್ಪಟ್ಟಿತು. ಆರೆಸ್ಸೆಸ್ ಮತ್ತು ಅದರ ನಾಯಕರು, ಕಾರ್ಯಕರ್ತರನ್ನು ವರ್ಮಾ ಹೊಸ ದೃಷ್ಟಿಯಲ್ಲಿ ನೋಡುವಂತಾಯಿತು. ಸೂರ್ಯೋದಯದೊಂದಿಗೆ ಕತ್ತಲು ಮರೆಯಾಗುವಂತೆ ಆರೆಸ್ಸೆಸ್ ಬಗ್ಗೆ ಇದ್ದ ಪೂರ್ವಗ್ರಹಗಳು ದೂರವಾದವು.

# 9
# ಆ ವಿಶಿಷ್ಟ ಪ್ರಯೋಗಕ್ಕೆ ವಿಶ್ವಾಸದ್ದೇ ಕೊರತೆ

ಮುಖ್ಯಮಂತ್ರಿ ಬಾಬುಭಾಯಿ ಪಟೇಲ್ ಅವರ ನೇತೃತ್ವದಲ್ಲಿ ರಚನೆಯಾಗಿದ್ದ ರಾಜ್ಯದ ಮೊದಲ ಕಾಂಗ್ರೆಸ್ಸೇತರ ಸರಕಾರಕ್ಕೆ ಚಿಮಣ್‌ಭಾಯಿ ಪಟೇಲ್ ಅವರ ಕಿಸಾನ್ ಮಜ್ದೂರ್ ಲೋಕ ಪಕ್ಷದ 15 ಶಾಸಕರು ಹಾಗೂ ಐವರು ಸ್ವತಂತ್ರ ಶಾಸಕರು ಬಾಹ್ಯ ಬೆಂಬಲ ನೀಡಿದ್ದರು. ಸರಕಾರದ ಉಳಿವಿಗೆ ಅವರ ಬೆಂಬಲ ಅತ್ಯಂತ ಮಹತ್ವದ್ದಾಗಿದ್ದರೂ ಮುಖ್ಯಮಂತ್ರಿ ಬಾಬುಭಾಯ್ ಯಾರನ್ನೂ ಸಂಪುಟಕ್ಕೆ ಸೇರಿಸಿಕೊಳ್ಳಲಿಲ್ಲ. ಆ ಮೂಲಕ ತಮ್ಮ ಪಕ್ಷದ ಪ್ರತಿಯೊಬ್ಬ ಸಚಿವನೂ ಸಂಪುಟದರ್ಜೆಯ ಸವಲತ್ತುಗಳನ್ನು ಸವಿಯುವಂತೆ ಅವಕಾಶ ಮಾಡಿಕೊಂಡಿದ್ದರು. ಅಣಕವೆಂದರೆ ಮುಖ್ಯಮಂತ್ರಿಯೊಬ್ಬರನ್ನು ಬಿಟ್ಟರೆ ಬಾಬು ಭಾಯಿ ಸಂಪುಟದ ಯಾವ ಸಚಿವರಿಗೂ ಆಡಳಿತದ ಅನುಭವವಿರಲಿಲ್ಲ. ಇಷ್ಟಾಗಿಯೂ ಸಂಪುಟದಿಂದ ತಮ್ಮನ್ನು ಹೊರಗಿಟ್ಟ ಕಾರಣ ಚಿಮಣ್‌ಭಾಯ್ ಪಟೇಲ್ ಗುಂಪಿಗೆ ತೀವ್ರ ನಿರಾಸೆಯಾಯಿತು. ಅದು ಬೆಂಬಲ ವಾಪಸ್ ತೆಗೆದುಕೊಳ್ಳುವುದಕ್ಕೂ ಕಾರಣವಾಯಿತು.

ಜನತಾ ಸರಕಾರದ ರಚನೆ ನಿಜಕ್ಕೂ ಒಂದು ವಿಶಿಷ್ಟ ಪ್ರಯೋಗವಾಗಿತ್ತು. ಆ ಪ್ರಯೋಗವನ್ನು 1977ರಲ್ಲಿ ರಾಷ್ಟ್ರಮಟ್ಟದಲ್ಲಿ ಮಾಡಲು ಕಾರಣವಾಯಿತು. ಜನತಾ ಫ್ರಂಟ್ ಎಂಬುದು ಒಂದು ಪಕ್ಷವಾಗಿರಲಿಲ್ಲ. ಚುನಾವಣೆಯಲ್ಲಿ ಪ್ರತ್ಯೇಕ ಚಿಹ್ನೆ, ಪಕ್ಷಗಳಡಿ ಪರಸ್ಪರರ ವಿರುದ್ಧ ಹೋರಾಡಿ ಗೆದ್ದವರೇ ಚುನಾವಣೆಯ ನಂತರ ಒಗ್ಗೂಡಿ ಸರಕಾರ ರಚಿಸಲು ಮಾಡಿಕೊಂಡ ವ್ಯವಸ್ಥೆ ಅದಾಗಿತ್ತು. ಎಲ್ಲರೂ ಸೇರಿ ಬಾಬುಭಾಯಿ ಅವರನ್ನು ಜನತಾ ಫ್ರಂಟ್‌ನ ನಾಯಕನನ್ನಾಗಿ ನೇಮಕ ಮಾಡಿದ್ದರು. ಈ ಎಲ್ಲ ಪಕ್ಷಗಳನ್ನೂ ವಿಲೀನ ಮಾಡಲು ಅವುಗಳೇನು ಒಂದೇ ಕಂಪನಿಯ ವಿವಿಧ ಅಂಗಸಂಸ್ಥೆಗಳಾಗಿರಲಿಲ್ಲ. ಇಷ್ಟಾಗಿಯೂ ಒಂಬತ್ತು ತಿಂಗಳಕಾಲ ಒಟ್ಟಾಗಿ ಅಧಿಕಾರ ನಡೆಸಿದ್ದೇ ಒಂದು ಪವಾಡವಾಗಿತ್ತು. ಬಾಬುಭಾಯಿಯವರಿಗೆ

ಅದು ಹಗ್ಗದ ಮೇಲೆ ನಡೆಯುವ ಅಪಾಯಕಾರಿ ಕಸರತ್ತಾಗಿತ್ತು. ಯಾವ ಸಂದರ್ಭದಲ್ಲೂ ಅವರು ಆಂತರಿಕ ಸಂಘರ್ಷಕ್ಕಿಳಿಯಲಿಲ್ಲ. ತುರ್ತುಪರಿಸ್ಥಿತಿ ಘೋಷಣೆ ಮಾಡಿದಾಗ ಕೇಂದ್ರ ಸರಕಾರದ ನಿರ್ದೇಶನಕ್ಕನುಗುಣವಾಗಿ ನಡೆದುಕೊಳ್ಳುವುದಾಗಿ, ಆದೇಶ ಪಾಲಿಸುವುದಾಗಿ ವಾಗ್ದಾನ ಮಾಡಿದರು. ಕೇಂದ್ರ ಸರಕಾರದ 20 ಅಂಶಗಳ ಕಾರ್ಯಕ್ರಮವನ್ನು ಜಾರಿಗೆ ತರುವುದಕ್ಕೂ ಸಹಕಾರ ನೀಡಿದರು. ಆದರೆ ಕೆಲವು ಜನವಿರೋಧಿ ಯೋಜನೆಗಳನ್ನು ಜಾರಿಗೆ ತರುವಾಗ ಉದ್ದೇಶಪೂರ್ವಕವಾಗಿ ವಿಳಂಬ ಮಾಡುತ್ತಿದ್ದರು. ಆ ಮೂಲಕ ಕೇಂದ್ರ ಸರಕಾರಕ್ಕೆ ಅಸಹಕಾರ ನೀಡುತ್ತಿದ್ದರು. ಪ್ರಮಾಣವಚನ ಸ್ವೀಕರಿಸಿದ ಕೂಡಲೇ ಮಾಡಬೇಕಾದ ಎರಡು ಜವಾಬ್ದಾರಿಗಳು ಬಾಬುಭಾಯಿ ಸರಕಾರದ ಮುಂದಿದ್ದವು. ಮೊದಲನೆಯದಾಗಿ ನವನಿರ್ಮಾಣ ವೇದಿಕೆಯ ಪ್ರತಿಭಟನಾಕಾರರ ವಿರುದ್ಧ ದಾಖಲಾಗಿದ್ದ ಪ್ರಕರಣಗಳನ್ನು ಹಿಂದಕ್ಕೆ ತೆಗೆದುಕೊಳ್ಳಬೇಕಿತ್ತು. ಎರಡನೆಯದಾಗಿ ಪೊಲೀಸ್ ಗುಂಡೇಟಿನಿಂದ ಮೃತರಾದವರ ಕುಟುಂಬಕ್ಕೆ ಪರಿಹಾರ ನೀಡಬೇಕಾದ ಜವಾಬ್ದಾರಿ ಇತ್ತು. ಇನ್ನೊಂದೆಡೆ ಇಂದಿರಾ ಗಾಂಧಿಯವರ 20 ಅಂಶಗಳ ಯೋಜನೆಗನುಗುಣವಾಗಿ ಚಿಮಣ್ ಭಾಯ್ ಪಟೇಲ್ ವಿರುದ್ಧ ತನಿಖೆಗೆ ಆದೇಶಿಸಬೇಕಾಗಿಯೂ ಬಂತು. ಆದರೆ ಚಿಮಣ್ ಭಾಯಿಯವರ 15 ಶಾಸಕರ ಬೆಂಬಲವಿಲ್ಲದಿದ್ದರೆ ಸರಕಾರವೇ ಬಿದ್ದುಹೋಗುತ್ತಿತ್ತು. ಇಂತಹ ಅಪಾಯದ ಹೊರತಾಗಿಯೂ 'ಜಾಗೃತ ಆಯೋಗ'ಕ್ಕೆ ತನಿಖೆಯ ಜವಾಬ್ದಾರಿ ಒಪ್ಪಿಸಲಾಯಿತು. ಇಷ್ಟಾಗಿಯೂ ತುರ್ತುಪರಿಸ್ಥಿತಿಯನ್ನು ಹೇರಿದ ಒಂದು ತಿಂಗಳಲ್ಲಿಯೇ ಕೇಂದ್ರ ಹಾಗೂ ಗುಜರಾತ್ ರಾಜ್ಯ ಸರಕಾರದ ನಡುವಿನ ಸಂಬಂಧ ಹಳಸತೊಡಗಿತು. ಸಾರ್ವಜನಿಕ ಸಭೆ, ಸಮಾರಂಭಗಳನ್ನು ಸಂಪೂರ್ಣವಾಗಿ ನಿಷೇಧಿಸಲು ಹಾಗೂ ಮಾಧ್ಯಮಗಳ ಮೇಲೆ ನಿರ್ಬಂಧ ಹೇರಲು ಜನತಾ ಸರಕಾರ ನಿರಾಕರಿಸಿತು. ಮುಕ್ತ ಮನಸ್ಸಿನಿಂದ ಸಹಕಾರ ನೀಡುತ್ತಿಲ್ಲ ಎಂದು ಕೇಂದ್ರ ಸರಕಾರ ಗುಜರಾತ್ ಸಂಪುಟದ ವಿರುದ್ಧ ಆರೋಪ ಮಾಡಿತು. ಜತೆಗೆ ದೇಶದ ಇತರ ರಾಜ್ಯಗಳಲ್ಲಿ ತಲೆತಪ್ಪಿಸಿಕೊಂಡಿದ್ದ ತುರ್ತುಪರಿಸ್ಥಿತಿ ವಿರೋಧಿಗಳು ಗುಜರಾತ್‌ನಲ್ಲಿ ಬಹಿರಂಗವಾಗಿಯೇ ಕಾಣಿಸಿಕೊಳ್ಳಲಾರಂಭಿಸಿದರು. ಅದು ತುರ್ತುಪರಿಸ್ಥಿತಿ ವಿರೋಧಿಗಳ ಆಶ್ರಯತಾಣವಾಯಿತು. ಹೀಗೆ ಕೇಂದ್ರ ಮತ್ತು ರಾಜ್ಯಗಳ ನಡುವಿನ ಸಂಬಂಧ ಹುಳಿಯಾಗಿ ಕೇಂದ್ರ ಸಾರ್ವಜನಿಕವಾಗಿ ಟೀಕಿಸಲಾರಂಭಿಸಿತು. ಕೇಂದ್ರದ ಕೆಲವು ಸಚಿವರು ಮಾಡುತ್ತಿದ್ದ ಬಹಿರಂಗ ಟೀಕೆ, ಆರೋಪಗಳಿಗೆ ಬಾಬುಭಾಯಿ ಮಾರುತ್ತರ ನೀಡಲಾರಂಭಿಸಿದರು. ಅಷ್ಟೇ ಅಲ್ಲ, ಕೇಂದ್ರದ ಕೆಲವು ಅಮಾನುಷ ಹಾಗೂ ಕ್ರೂರ ಕ್ರಮಗಳನ್ನು ಗುಜರಾತ್‌ನಲ್ಲಿ ಜಾರಿಗೊಳಿಸಲು ಒಪ್ಪಲಿಲ್ಲ. ಗುಜರಾತ್‌ನಲ್ಲಿ ಯಾವುದೇ





ರಾಜಕೀಯ ಹೋರಾಟ ಕಾಣುತ್ತಿಲ್ಲ. ಹಾಗಾಗಿ ಕಠಿಣ ನಿಯಮಗಳನ್ನು ಜಾರಿಗೆ ತರಬೇಕಾದ ಅಗತ್ಯವಿಲ್ಲ ಎಂದು ಬಾಬುಭಾಯಿ ಹೇಳಿಕೆ ನೀಡಿದರು.

ಒಂದು ವೇಳೆ ಚಿಮಣ್‌ಭಾಯ್ ಪಟೇಲ್ ಅವರ ಕಿಸಾನ್ ಮಜ್ದೂರ್ ಲೋಕ ಪಕ್ಷವನ್ನು ವಿಶ್ವಾಸಕ್ಕೆ ತೆಗೆದುಕೊಂಡಿದ್ದರೆ ಬಾಬುಭಾಯಿ ಪಟೇಲ್ ಇನ್ನಷ್ಟು ದಿನಗಳ ಕಾಲ ಅಧಿಕಾರದಲ್ಲಿ ಮುಂದುವರಿಯಬಹುದಿತ್ತು. ಆದರೆ ಸಂಪುಟದಿಂದ ಹೊರಗಿಟ್ಟಿದ್ದಲ್ಲದೆ ಚಿಮಣ್ ಭಾಯಿಯವರ ವಿರುದ್ಧವೇ ತನಿಖೆಗೆ ಆದೇಶ ನೀಡಿದ್ದು ಸಂಬಂಧವನ್ನು ಹಾಳುಗೆಡವಿತು. ಕೇಂದ್ರ ಸರಕಾರದ ಒತ್ತಡಕ್ಕೊಳಗಾದ ಕಿಸಾನ್ ಮಜ್ದೂರ್ ಲೋಕ ಪಕ್ಷದ ಹೆಚ್ಚಿನ ಸದಸ್ಯರು ಕಾಂಗ್ರೆಸ್(ಐ) ಸೇರಿಕೊಂಡರು. ಹಾಗಾಗಿ ಕಾಂಗ್ರೆಸ್‌ನ ಬೆಂಬಲಿಗರ ಸಂಖ್ಯೆ ಏರಿ ಜನತಾ ಫ್ರಂಟ್‌ನೊಂದಿಗೆ ಸಮಬಲ ಸಾಧಿಸಲಾಯಿತು. ತಲಾ 87 ಸದಸ್ಯರನ್ನು ಹೊಂದಿದ್ದ ಉಭಯ ಬಣಗಳ ನಡುವೆ ಸಂಘರ್ಷವೂ ಆರಂಭವಾಯಿತು. ಒಂದಿಬ್ಬರು ಸ್ವತಂತ್ರ ಶಾಸಕರನ್ನು ತನ್ನ ತೆಕ್ಕೆಗೆ ಸೆಳೆದುಕೊಂಡ ಕಾಂಗ್ರೆಸ್(ಐ) ಬಜೆಟ್ ಮೇಲಿನ ಮತದಾನದಲ್ಲಿ ಜನತಾ ಫ್ರಂಟನ್ನು ಸೋಲಿಸಿತು. ಹೀಗೆ ಬಹುಮತ ಕಳೆದುಕೊಂಡ ಬಾಬುಭಾಯಿ ಮಾರ್ಚ್ 13ರಂದು ರಾಜೀನಾಮೆ ನೀಡಿದರೆ, ಆಂತರಿಕ ಭದ್ರತಾ ಕಾಯಿದೆ(ಮೀಸಾ)ಯಡಿ ಪ್ರಭಾವಿ ಜನತಾ ನಾಯಕರನ್ನು ಬಂಧಿಸಿದ ಕೇಂದ್ರ ಸರಕಾರ ಜೈಲಿಗೆ ತಳ್ಳಿತು. ಇದಾಗಿ ಎಂಟು ತಿಂಗಳು ಕಳೆದವು. ಕಾಂಗ್ರೆಸ್(ಐ)ನೊಳಗಿನ ಆಂತರಿಕ ಕಚ್ಚಾಟದಿಂದಾಗಿ ಹೊಸ ಸರಕಾರದ ರಚನೆ ವಿಳಂಬವಾಯಿತು. ಕೊನೆಗೂ 1976, ಡಿಸೆಂಬರ್‌ನಲ್ಲಿ ಮಾಧವಸಿನ್ಹ ಸೋಳಂಕಿ ನೇತೃತ್ವದಲ್ಲಿ ಕಾಂಗ್ರೆಸ್ ಸರಕಾರ ಅಡಳಿತಕ್ಕೆ ಬಂತು. ಅದೂ ಕೂಡ ಹೆಚ್ಚು ಕಾಲ ಉಳಿಯಲಿಲ್ಲ. ಕೇವಲ 100 ದಿನಗಳಲ್ಲಿ ಅಧಿಕಾರ ಕಳೆದುಕೊಂಡು ಬಾಬುಭಾಯಿ ಪಟೇಲ್ ನೇತೃತ್ವದ ಜನತಾ ಫ್ರಂಟ್ ಸರಕಾರ ಮತ್ತೆ ಅಡಳಿತಕ್ಕೆ ಬರುವಂತಾಯಿತು.

ಇಷ್ಟೆಲ್ಲಾ ಬೆಳವಣಿಗೆಗಳು ಅತ್ಯಂತ ತ್ವರಿತವಾಗಿ ಸಂಭವಿಸುತ್ತಿದ್ದರೂ ನರೇಂದ್ರ ಮೋದಿಯವರು ಮಾತ್ರ ಶಾಂತಚಿತ್ತರಾಗಿ ಕಾಯುತ್ತಿದ್ದರು. ಹೇಳಿದ ಕೆಲಸವನ್ನು ಶಿಸ್ತುಬದ್ಧ ಸೈನಿಕನಂತೆ ನಿರ್ವಹಿಸುತ್ತಿದ್ದರು.

1975, ಜುಲೈ 2ರಂದು ಆರೆಸ್ಸೆಸ್‌ನ ಮೊದಲ ತುರ್ತು ಸಭೆ ನಡೆಯಿತು. ಭೂಗತ ಪತ್ರಿಕೆಯಾಗಿದ್ದ 'ಜನತಾ ಛಾಪು' ಅತಿ ಹೆಚ್ಚು ಪ್ರಸಾರವುಳ್ಳ ಪತ್ರಿಕೆಯೆನಿಸಿತು. ಕೆಲವೇ ದಿನಗಳಲ್ಲಿ ಆರೆಸ್ಸೆಸ್‌ನ ಹಲವಾರು ಕಾರ್ಯಕರ್ತರನ್ನು ಸರಕಾರ ಬಂಧಿಸಿತು. ಅಲ್ಲದೆ ಆರೆಸ್ಸೆಸ್ ಕಚೇರಿಯನ್ನು ಸರಕಾರ ವಶಕ್ಕೆ ತೆಗೆದುಕೊಂಡಿತು. ಹೀಗೆ ಒಂದರ ಹಿಂದೆ ಮತ್ತೊಂದು ಘಟನೆ ಸಂಭವಿಸಲಾರಂಭಿಸಿದವು. ಅಕ್ಟೋಬರ್ 12ರಂದು ಅಹಮದಾಬಾದ್

ನಲ್ಲಿ ನಡೆದ ನಾಗರಿಕರ ಸಭೆಗೆ ಭಾರಿ ಸಂಖ್ಯೆಯಲ್ಲಿ ಜನ ಆಗಮಿಸಿದರು. ಒಂದು ವಾರದ ನಂತರ ನಡೆದ ಗುಜರಾತ್ ಹೈಕೋರ್ಟ್‌ನ ವಕೀಲರ ಸಂಘಟನೆಯ ಸಭೆ ತುರ್ತು ಪರಿಸ್ಥಿತಿಯ ವಿರುದ್ಧ ಗೊತ್ತುವಳಿಯೊಂದನ್ನು ಮಂಡಿಸಿತು. ನವೆಂಬರ್ 5ರಂದು ಕಾಮನ್‌ವೆಲ್ತ್ ಶೃಂಗದಲ್ಲಿ ಪಾಲ್ಗೊಳ್ಳಲು ಆಗಮಿಸಿದ್ದ ಸದಸ್ಯರ ಮುಂದೆ ವಕೀಲರು ಪ್ರತಿಭಟನೆ ನಡೆಸಿದರು. ತಿಂಗಳ ಕೊನೆಯ ವೇಳೆಗೆ ಉಪರಾಷ್ಟ್ರಪತಿ ಬಿ.ಡಿ. ಜತ್ತಿಯವರಿಗೆ ಮನವಿಯೊಂದನ್ನು ಮಾಡಿ ತುರ್ತುಪರಿಸ್ಥಿತಿಯನ್ನು ತೆಗೆದುಹಾಕಲು ಸಹಕಾರ ನೀಡಬೇಕೆಂದು ಒತ್ತಾಯಿಸಲಾಯಿತು. ಡಿಸೆಂಬರ್ 3ರಂದು ಅಹಮದಾಬಾದ್‌ಗೆ ಬಂದ ದತ್ತೋಪಂತ್ ಠೇಂಗಡಿ ಕಾರ್ಮಿಕ ನಾಯಕರನ್ನು ಭೇಟಿ ಮಾಡಿ ಮಾತುಕತೆ ನಡೆಸಿದರು. ಡಿಸೆಂಬರ್ 7ರಂದು ಅಹಮದಾಬಾದ್‌ನಲ್ಲಿ ಆರೆಸ್ಸೆಸ್‌ನ ಸರಸಂಘಚಾಲಕ ಬಾಳಾಸಾಹೇಬ್ ದೇವರಸ್ ಅವರ ಜನ್ಮದಿನ ಆಚರಣೆಯೂ ನಡೆಯಿತು. ಅದೇ ಸಂದರ್ಭದಲ್ಲಿ ಗುಜರಾತ್ ನಾದ್ಯಂತ ಹಲವಾರು ಪ್ರಾರ್ಥನಾ ಸಭೆಗಳು ನಡೆದು ಜಯಪ್ರಕಾಶ್ ನಾರಾಯಣ್ ಅವರಿಗೆ ದೀರ್ಘಾಯುಷ್ಯ ನೀಡುವಂತೆ ಬೇಡಿಕೊಳ್ಳಲಾಯಿತು.

1975 ಕಳೆದು 1976 ಆಗಮಿಸುತ್ತಿದ್ದಂತೆಯೇ ತುರ್ತುಪರಿಸ್ಥಿತಿ ವಿರೋಧಿ ಚಟುವಟಿಕೆಗಳು ಇನ್ನೂ ಜಾಸ್ತಿಯಾದವು. "ಸಂವಿಧಾನವನ್ನು ಕಾಪಾಡಿ" ಎಂಬ ಘೋಷವಾಕ್ಯದೊಂದಿಗೆ ನಡೆದ ಸಭೆಯಲ್ಲಿ ಹಲವಾರು ಪ್ರಸಿದ್ಧ ವಕೀಲರು ಪಾಲ್ಗೊಂಡರು. ದೇಶಾದ್ಯಂತ ಭೂಗತರಾಗಿದ್ದ ಆರೆಸ್ಸೆಸ್‌ನ ಸಂಘಟನಾ ಕಾರ್ಯದರ್ಶಿಗಳು ಜನವರಿ 2ರಂದು ಗುಜರಾತ್‌ನಲ್ಲಿ ಒಂದೆಡೆ ಸೇರಿದರು. ದುರದೃಷ್ಟವಶಾತ್ ಫೆಬ್ರವರಿ 16ರಂದು ವಸಂತ್‌ಭಾಯಿ ಗಜೇಂದ್ರಗಢಕರ್ ತೀರಿಕೊಂಡರು. ಆದರೂ ಆರೆಸ್ಸೆಸ್ ನಾಯಕರ ಬಂಧನಗಳು ಮಾತ್ರ ಮುಂದುವರಿದವು. ಸಿ.ಟಿ. ದಾರು ಮತ್ತು ಭೋಗಿಲಾಲ್ ಗಾಂಧಿಯವರನ್ನು ಮೀಸಾದಡಿ ಬಂಧಿಸಲಾಯಿತು. ರಾಜ್ಯಪಾಲರಿಗೆ ಅಹವಾಲು ಸಲ್ಲಿಸಲು ಜೂನ್ 26ರಂದು ನಡೆದ ರಾಜಭವನ ಚಲೋ ಕಾರ್ಯಕ್ರಮದಂದು ಬಾಬುಭಾಯಿ ಪಟೇಲ್ ಸೇರಿದಂತೆ 12 ಜನರನ್ನು ಬಂಧಿಸಲಾಯಿತು. ತುರ್ತುಪರಿಸ್ಥಿತಿಯ ವಿರುದ್ಧ ಮುಂಚೂಣಿಯಲ್ಲಿ ನಿಂತು ಹೋರಾಡುತ್ತಿದ್ದ 'ಸಾಧನಾ' ಪತ್ರಿಕೆಯ ಕಚೇರಿಗೆ ಬೀಗ ಹಾಕಿ, ಅದರ ಉದ್ಯೋಗಿಗಳನ್ನು ಮೀಸಾದಡಿ ಬಂಧಿಸಿದರು. ಆಗಸ್ಟ್ 9ರಂದು ಅಹಮದಾಬಾದ್‌ನಲ್ಲಿ ನಡೆದ 'ಕ್ರಾಂತಿಕಾರಿ' ದಿನಾಚರಣೆಯ ವೇಳೆ 51 ಜನರನ್ನು ಬಂಧಿಸಿ ಜೈಲಿಗೆ ತಳ್ಳಲಾಯಿತು.

ಇಂತಹ ಎಗ್ಗಿಲ್ಲದ ದೌರ್ಜನ್ಯದ ಅಧ್ಯಾಯಕ್ಕೆ ಕೊನೆಯೇ ಇರಲಿಲ್ಲ.

ಆದರೆ ನರೇಂದ್ರ ಮೋದಿಯವರು ಮಾತ್ರ ಯಾವ ಸಂದರ್ಭದಲ್ಲೂ ಸಹನೆ ಕಳೆದುಕೊಳ್ಳ





ಲಿಲ್ಲ, ಜವಾಬ್ದಾರಿಯನ್ನೂ ಮರೆಯಲಿಲ್ಲ. ಅಹಮದಾಬಾದ್‌ನಲ್ಲಿ ಸರಕಾರಗಳು ರಚನೆಯಾಗಿ ಉರುಳಿಬೀಳುತ್ತಿದ್ದರೂ ಮೋದಿ ಮಾತ್ರ ಸಮಚಿತ್ತದಿಂದ ನೋಡುತ್ತಿದ್ದರು. ಅವರಿಗೆ ಲೋಕ ಸಂಘರ್ಷ ಸಮಿತಿಯನ್ನು ಕ್ರಿಯಾಶೀಲವಾಗಿಡಬೇಕಾದ ಜವಾಬ್ದಾರಿಯನ್ನು ನೀಡಿದ್ದರು. ಆ ಕಾರ್ಯವನ್ನು ಅತ್ಯಂತ ಶ್ರದ್ಧೆ ಹಾಗೂ ಪರಿಣಾಮಕಾರಿಯಾಗಿ ನಿರ್ವಹಿಸುತ್ತಿದ್ದರು. ವಸಂತ್ ಭಾಯಿ ಅವರ ಮರಣ ಮೋದಿಯವರಿಗೆ ದೊಡ್ಡ ಹೊಡೆತ ನೀಡಿತು. ಗುಜರಾತ್‌ನಲ್ಲಿನ ಜನಸಂಘದ ಇನ್ನಷ್ಟು ಜವಾಬ್ದಾರಿಗಳು ಮೋದಿಯವರ ಹೆಗಲೇರಿದವು. ಆದರೆ ಮೋದಿ ವಿಚಲಿತರಾಗಲಿಲ್ಲ, ಜನರೊಂದಿಗೆ ಆಪ್ತ ಸಂಪರ್ಕ ಇಟ್ಟುಕೊಂಡೇ ಇದ್ದರು.

ಇತ್ತ 1977, ಜನವರಿ 18ರಂದು ಲೋಕಸಭೆಗೆ ಚುನಾವಣೆ ಘೋಷಣೆಯಾಯಿತು.

ಅದು ಜನತಾ ನಾಯಕರ ಉತ್ಸಾಹವನ್ನು ಹೆಚ್ಚಿಸಿತು. ಚುನಾವಣೆ ನಡೆದು 1977, ಮಾರ್ಚ್ 21ರಂದು ಫಲಿತಾಂಶವನ್ನೂ ಪ್ರಕಟಿಸಲಾಯಿತು. ಸಹಜವಾಗಿಯೇ ಕಾಂಗ್ರೆಸ್ಸಿಗೆ ಜನ ಪಾಠ ಕಲಿಸಿದ್ದರು.1975, ಜೂನ್ 26 ಹೇರಲಾಗಿದ್ದ ತುರ್ತುಪರಿಸ್ಥಿತಿಯನ್ನು 1977, ಮಾರ್ಚ್ 22ರಂದು 21 ತಿಂಗಳ ನಂತರ ಔಪಚಾರಿಕವಾಗಿ ತೆಗೆದುಹಾಕಲಾಯಿತು. ಆರೆಸ್ಸೆಸ್‌ನ ಸಾವಿರಾರು ಕಾರ್ಯಕರ್ತರು ಜೈಲಿನಿಂದ ಬಿಡುಗಡೆಯಾಗಿ ಹೊರಬಂದರು. ಗುಜರಾತ್ ಒಂದರಲ್ಲೇ ಬಂಧಿತರಾಗಿದ್ದ ಒಟ್ಟು 540 ಪ್ರತಿಭಟನಾಕಾರರಲ್ಲಿ 435 ಜನರು ಆರೆಸ್ಸೆಸ್ ಹಾಗೂ ಜನಸಂಘದವರಾಗಿದ್ದರು. ರಾಜಕೀಯ ಕೈದಿಗಳ ಬಿಡುಗಡೆ ಹಾಗೂ ಮಾಧ್ಯಮಗಳ ಮೇಲಿನ ನಿರ್ಬಂಧವನ್ನು ತೆಗೆದುಹಾಕಿದ ನಂತರ ಎಲ್ಲೆಡೆಯೂ ನವೋಲ್ಲಾಸ ಕಂಡುಬಂತು.

# 10
## ಇಪ್ಪತ್ತೊಂದು ತಿಂಗಳ ವನವಾಸದ ಬಳಿಕ....

'ಇಪ್ಪತ್ತೊಂದು ತಿಂಗಳ ಕಾಲ ಜಾರಿಯಲ್ಲಿದ್ದ ತುರ್ತುಪರಿಸ್ಥಿತಿಯಲ್ಲಿ ಮೋದಿ ವಹಿಸಿದ ಪಾತ್ರವಾದರೂ ಏನು?

ಸಂಘರ್ಷ, ಸಂಘಟನೆ ಮತ್ತು ಸಂಚಲನೆ. ಸಂಘರ್ಷವೆಂದರೆ ಹೋರಾಟ ಮತ್ತು ಪ್ರತಿಭಟನೆಗಳನ್ನು ಆಯೋಜಿಸುವುದು. ಸಂಘಟನೆಯೆಂದರೆ ಪಕ್ಷ ಮತ್ತು ಸಂಘದ ಬಲವರ್ಧನೆ. ಸಂಚಲನೆಯೆಂದರೆ ಸಂಘಟನೆಯ ವಿಸ್ತಾರ, ನಿರ್ಮಾಣ. ತುರ್ತುಪರಿಸ್ಥಿತಿಯ ವೇಳೆ ನರೇಂದ್ರ ಮೋದಿಯವರು ನಿರ್ವಹಿಸಿದ ಪಾತ್ರ ರಾಷ್ಟ್ರಮಟ್ಟದಲ್ಲಿ ಅವರು ನೀಡಿದ ಮೊದಲ ಪ್ರಮುಖ ಕೊಡುಗೆ ಹಾಗೂ ಸೇವೆ ಎನ್ನುತ್ತಾರೆ ಅಶೋಕ್ ಭಟ್. ಅದುವರೆಗೂ ಗುಜರಾತ್‌ನಲ್ಲಿ ಕೇವಲ ಒಬ್ಬ ಪ್ರಚಾರಕನಾಗಿದ್ದ ಮೋದಿಯವರಿಗೆ ದೇಶಾದ್ಯಂತ ನಡೆಯುತ್ತಿದ್ದ ತುರ್ತುಪರಿಸ್ಥಿತಿ ವಿರೋಧಿ ಹೋರಾಟದಲ್ಲಿ ಭಾಗಿಯಾಗಿದ್ದವರಿಗೆ ಸಹಾಯ, ಸಹಕಾರ ನೀಡುವುದರ ಜತೆಗೆ ಸೇವೆ ಮಾಡುವ ಅವಕಾಶ ಲಭ್ಯವಾಯಿತು. ತುರ್ತುಪರಿಸ್ಥಿತಿ ವಿರೋಧಿಗಳಿಗೆ ಗುಜರಾತ್‌ನಲ್ಲಿ ಆಶ್ರಯ ಕಲ್ಪಿಸಿದ್ದೇ ನರೇಂದ್ರ ಮೋದಿ. ಆದರೆ 21 ತಿಂಗಳ ಕಾಲ ಜಾರಿಯಲ್ಲಿದ್ದ ತುರ್ತುಪರಿಸ್ಥಿತಿಯ ಅವಧಿಯಲ್ಲಿ ಮೋದಿಯವರೆಂದೂ ಪೋಲೀಸರಿಗೆ ಸಿಕ್ಕಿಬೀಳಲಿಲ್ಲ, ಕಾರವಾಸವನ್ನೂ ಸೇರಲಿಲ್ಲ!

1970ರಿಂದ 1980ರ ನಡುವಿನ ದಶಕದಲ್ಲಿ ಮೋದಿಯವರಿಗೆ ಸಂಘರ್ಷದ ಅನುಭವ ದೊರೆಯಿತು. ಈ ಅವಧಿಯಲ್ಲಿ ಜನಸಂಘ ಮೊಟ್ಟ ಮೊದಲ ಬಾರಿಗೆ ಗುಜರಾತ್‌ನಲ್ಲಿನ ಸರಕಾರ ರಚನೆಯೊಂದರಲ್ಲಿ ಭಾಗಿಯಾಯಿತು. ಕೇಶುಭಾಯಿ ಪಟೇಲ್, ಮಕರಂದ್ ಭಾಯ್ ಮತ್ತು ಶ್ರೀಮತಿ ಹೇಮಾಬೇನ್ ಮುಂಚೂಣಿ ನಾಯಕರಾಗಿದ್ದರೆ, ನಾಥಭಾಯಿ ಜಗ್ಡಾ ಮತ್ತು ನರೇಂದ್ರ ಮೋದಿ ತೆರೆಯ ಹಿಂದಿನ ಶಕ್ತಿಗಳಾಗಿದ್ದರು. ಅದು ನರೇಂದ್ರ

ಮೋದಿಯವರು ಸಾರ್ವಜನಿಕ ಜೀವನದ ಮೊದಲ ದಶಕವೂ ಹೌದು ಹಾಗೂ ಒಂದು ರಾಜ್ಯವಾಗಿ ಗುಜರಾತ್ ಕಂಡ ಮೂರನೇ ದಶಕ. ''ಸಂಘರ್ಷ್ ಮಾ ಗುಜರಾತ್'' ಎಂಬ ಹೆಸರಿನ ಪುಸ್ತಕದಲ್ಲಿ ನರೇಂದ್ರ ಮೋದಿ ತುರ್ತುಪರಿಸ್ಥಿತಿಯ ಸಂದರ್ಭದಲ್ಲಿನ ಗುಜರಾತ್ ಇತಿಹಾಸವನ್ನು ದಾಖಲಿಸಿದ್ದಾರೆ. ಇಲ್ಲಿರುವ ವಿಶೇಷತೆಯೆಂದರೆ ಮೋದಿಯವರು ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ ನಡೆದ ಘಟನೆಯನ್ನು ಸ್ವಂತ ಕಣ್ಣಿನಲ್ಲಿ ನೋಡಿದಂತೆ, ಅಂದರೆ ''ನಾನು'' ಎಂದು ಉಲ್ಲೇಖಿಸುತ್ತ ಬರೆಯುವುದಿಲ್ಲ, ಒಬ್ಬ ಬಾಹ್ಯ ವೀಕ್ಷಕನಂತೆ, ಘಟನೆಯಿಂದ ವಿಮುಖನಾದವನಂತೆ ಬರೆಯುತ್ತಾ ಹೋಗುತ್ತಾರೆ. ಅದನ್ನು ಓದುತ್ತಾ ಹೋದಂತೆ ತುರ್ತುಪರಿಸ್ಥಿತಿಯ ವಿರುದ್ಧ ನಡೆದ ಹೋರಾಟದಲ್ಲಿ ಮುಂಚೂಣಿಯಲ್ಲಿದ್ದ ವ್ಯಕ್ತಿಗಳಲ್ಲಿ ನರೇಂದ್ರ ಮೋದಿ ಕೂಡ ಒಬ್ಬರು ಎಂಬುದು ಯಾರಿಗೂ ತಿಳಿಯುವುದಿಲ್ಲ. ಈ ಒಂದು ದಶಕದಲ್ಲಿ ನರೇಂದ್ರ ಮೋದಿ, ಸಂಘಟಕನ ಸ್ಥಾನವನ್ನು ಮೀರಿ ಸಂಘರ್ಷದ ಹಾದಿ ಹಿಡಿಯುತ್ತಾರೆ. 1967ರಲ್ಲಿ ಗೋರಕ್ಷಾ ಚಳವಳಿಯಲ್ಲಿ ಭಾಗಿಯಾಗಿದ್ದ ಅವರು ಮುಂದೆ ಬೆಲೆ ಹೆಚ್ಚಳ, ಹಣದುಬ್ಬರ ಮುಂತಾದ ವಿಷಯಗಳ ಸಲುವಾಗಿಯೂ ಹೋರಾಟಕ್ಕಿಳಿದಿದ್ದರು. ಇತ್ತ ಜನಸಂಘ ಮುಖ್ಯ ವಿರೋಧ ಪಕ್ಷವಾಗಿ ಹೊರಹೊಮ್ಮುವ ಲಕ್ಷಣ ತೋರುತ್ತಿತ್ತು.

ಅನಿವಾಸಿ ಭಾರತೀಯರ ಜತೆ ಸಂಪರ್ಕವಿಟ್ಟುಕೊಳ್ಳುವ ಜವಾಬ್ದಾರಿಯನ್ನೂ ನರೇಂದ್ರ ಮೋದಿಯವರಿಗೆ ನೀಡಲಾಗಿತ್ತು. ಅಮೆರಿಕ ಮತ್ತು ಬ್ರಿಟನ್‌ಗಳೆರಡರಲ್ಲೂ ಪ್ರಕಟವಾಗುತ್ತಿದ್ದ ''ಸತ್ಯವಾಣಿ'' ಎಂಬ ಪತ್ರಿಕೆಯ ಬಗ್ಗೆ ಮಕರಂದ್ ದೇಸಾಯಿಯವರು ತಮ್ಮ ''ಸ್ಟ್ರಗ್ಲಿಂಗ್ ಆಫ್ ಟ್ರೂಥ್'' ಎಂಬ ಪುಸ್ತಕದಲ್ಲಿ ಉಲ್ಲೇಖಿಸುತ್ತಾರೆ. ಅಹಮದಾಬಾದ್, ಬರೋಡ ಮುಂತಾದ ಸ್ಥಳಗಳಲ್ಲಿ ಬಂಧಿತರಾಗಿದ್ದ ಕಾರ್ಯಕರ್ತರಿಗೆ ಪತ್ರಿಕೆಯ ಪ್ರತಿಗಳನ್ನು ತಲುಪಿಸುವ ಜವಾಬ್ದಾರಿ ಮೋದಿಯವರ ಮೇಲಿತ್ತು. ಮೋದಿಯವರ ಪಾತ್ರದ ಬಗ್ಗೆ ಮುಕ್ತಕಂಠದಿಂದ ಶ್ಲಾಘಿಸಿರುವ ಅಶೋಕ್ ಭಟ್, ''ಗುಜರಾತ್‌ನಲ್ಲಿ ತುರ್ತುಪರಿಸ್ಥಿತಿ ಹಾಗೂ ಆ ನಂತರ ನಡೆದ ಯಾವುದೇ ಚಳವಳಿಗಳಿರಬಹುದು ಅವುಗಳ ನಿರ್ಮಾಪಕ, ನಿರ್ದೇಶಕ ಹಾಗೂ ಪ್ರೇರಕ ಎಲ್ಲವೂ ಮೋದಿಯವರೇ'' ಎನ್ನುತ್ತಾರೆ.

ಅದು ಒಪ್ಪುವಂಥ ಮಾತೇ.

ನರೇಂದ್ರ ಮೋದಿಯವರಿಗೆ ಒಬ್ಬ ಸಂಘಟಕನಾಗಿ ತನ್ನ ಸಾಮರ್ಥ್ಯವನ್ನು ಪರಿಚಯ ಮಾಡಿಕೊಡುವ ಅವಕಾಶ, ಅದೃಷ್ಟ ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ ದೊರೆಯಿತು. ಆ ಅವಕಾಶಗಳನ್ನು ಖಂಡಿತ ಸದುಪಯೋಗಪಡಿಸಿಕೊಂಡರು. ಪ್ರತಿ ಬಾರಿಯೂ ಅವರಿಗೆ ಹೊಸ ಹೊಸ, ವಿಶಿಷ್ಟ ವಿಭಿನ್ನ ಜವಾಬ್ದಾರಿಗಳನ್ನು ನೀಡಲಾಗುತ್ತಿತ್ತು. ತುರ್ತುಪರಿಸ್ಥಿತಿ





ಅಂತ್ಯಗೊಂಡ ನಂತರದ ತಿಂಗಳುಗಳು ಮೋದಿಯವರ ಜೀವನದಲ್ಲಿ ಅತ್ಯಂತ ಮಹತ್ವದ್ದಾಗಿದೆ. ಅವರಿಗೆ 1978ರಲ್ಲಿ ವಿಭಾಗ ಪ್ರಚಾರಕನ ಸ್ಥಾನ ನೀಡಲಾಯಿತು. ಅತ್ಯಂತ ಕಿರಿಯ ವಯಸ್ಸಿನಲ್ಲಿ ಲಭ್ಯವಾದ ಹಿರಿಯ ಜವಾಬ್ದಾರಿಯದು. ಗ್ರಾಮೀಣ ವಡೋದರಾ, ಪಂಚಮಹಲ್, ದೋಹದ್, ಆನಂದ್, ಖೇಡಾ ಮತ್ತು ವಡೋದರಾ ನಗರ ಹೀಗೆ ಆರು ಜಿಲ್ಲೆಗಳು ಅವರ ವಿಭಾಗದಲ್ಲಿದ್ದವು. ಅಷ್ಟೇ ಅಲ್ಲ, ಮೋದಿಯವರನ್ನು ಪ್ರಾಂತ ಪ್ರಚಾರಾಧಿಕಾರಿಯನ್ನಾಗಿಯೂ ನೇಮಕ ಮಾಡುವ ಮೂಲಕ ಪ್ರಾಂತ ಸಹವ್ಯವಸ್ಥಾಪಕ ಪ್ರಮುಖನ ಜವಾಬ್ದಾರಿ ನೀಡಲಾಯಿತು. ಸೂರತ್ ಮತ್ತು ವಡೋದರಾದ ವಿಭಾಗಗಳೂ ಸೇರಿದಂತೆ ಮಧ್ಯ ಹಾಗೂ ದಕ್ಷಿಣ ಗುಜರಾತ್‌ನ ಖೇಡಾದಿಂದ ಉಮರ್‌ಗಾಂವ್ ಜಿಲ್ಲೆಗಳವರೆಗೂ ಮೋದಿಯವರ ಕಾರ್ಯವ್ಯಾಪ್ತಿ ವಿಸ್ತಾರಗೊಂಡಿತು. ಹೀಗೆ ಒಬ್ಬ ಸಂಘಟಕನಾಗಿ ಅವರ ಸಾಮರ್ಥ್ಯವನ್ನು ಎಲ್ಲೆಡೆಯೂ ಗುರುತಿಸಲಾರಂಭಿಸಿದರು.

ಕೇಶವರಾವ್ ದೇಶ್‌ಮುಖ್‌ರ ಅಗಲಿಕೆಯ ನಂತರ ಮೋದಿಯವರಿಗೆ ಪ್ರಾಂತ ಪ್ರಚಾರಕನ ಸ್ಥಾನ ನೀಡಲಾಯಿತು. 1981, ಮಾರ್ಚ್ 2ರಂದು ಪ್ರಾಂತ ಪ್ರಚಾರಕರಾದ ಅವರಿಗೆ ಅಹಮದಾಬಾದ್‌ನಲ್ಲಿದ್ದ ಸಂಘದ ಮುಖ್ಯ ಕಚೇರಿಯಲ್ಲಿ ತಂಗುವಂತೆ ಸೂಚಿಸಲಾಯಿತು. ಸಂಘ ಪರಿವಾರದ ಅಂಗಸಂಸ್ಥೆಗಳಾಗಿದ್ದ ಅಖಿಲ ಭಾರತೀಯ ವಿದ್ಯಾರ್ಥಿ ಪರಿಷತ್, ಭಾರತೀಯ ಕಿಸಾನ್ ಸಂಘ, ವಿಶ್ವಹಿಂದೂ ಪರಿಷತ್, ಸಮುತ್ಕರ್ಷ್ ಹಾಗೂ ಸಾಧನ ವಾರಪತ್ರಿಕೆ ಮತ್ತು ಪುಸ್ತಕ ಪ್ರಕಟಣೆ ಮುಂತಾದವುಗಳ ನಡುವೆ ನಿರಂತರ ಸಂಪರ್ಕವನ್ನು ಇಟ್ಟುಕೊಳ್ಳಬೇಕಾದ ಜವಾಬ್ದಾರಿ ಅವರದಾಗಿತ್ತು. ವಿಶ್ರಾಂತಿಯಿಲ್ಲದೆ ದುಡಿಯಬೇಕಾದ ಕೆಲಸವದು. 1979ರಲ್ಲಿ ಮಚ್ಛೂ ಅಣೆಕಟ್ಟು ಮುರಿದು ಅಪಾರ ಹಾನಿ ಸಂಭವಿಸಿದಾಗ ಅದರ ಪರಿಹಾರ ಕಾರ್ಯದ ಮೇಲ್ವಿಚಾರಣೆಯನ್ನೂ ಮೋದಿಯವರಿಗೆ ವಹಿಸಲಾಗಿತ್ತು. ಅಂತಹ ಗುರುತರ ಜವಾಬ್ದಾರಿಯನ್ನು ಸಮರ್ಪಕವಾಗಿ ನಿರ್ವಹಿಸಲು ಒಂದು ವರ್ಷವೇ ಬೇಕಾಯಿತು. ಖುದ್ದಾಗಿ ನಿಂತು ಪರಿಹಾರ ಕಾರ್ಯಗಳನ್ನು ನೋಡಿಕೊಂಡ ಮೋದಿಯವರು ಎಲ್ಲರ ಮೆಚ್ಚುಗೆ ಗಳಿಸಿದರು. ಕೆಲಸವನ್ನು ಅರ್ಧಂಬರ್ಧ ಮಾಡುವುದು ಮೋದಿ ಯವರ ಜಾಯಮಾನವಾಗಿರಲಿಲ್ಲ, ಯಾವುದೇ ಜವಾಬ್ದಾರಿಯನ್ನು ನೀಡಿದರೂ ಬೆರಳು ಮಾಡಲು ಅವಕಾಶವಿಲ್ಲದಂತೆ ನಿರ್ವಹಿಸುತ್ತಿದ್ದರು.

# 11
# ಜನತಾ ಪಕ್ಷದ ಪತನ
# ಬಿಜೆಪಿಯ ಜನನ

1977ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ಜಯಗಳಿಸಿದ ಜನತಾ ಪಕ್ಷ ಅಧಿಕಾರಕ್ಕೇರಿದರೆ ತುರ್ತುಪರಿಸ್ಥಿತಿಯ ರೂವಾರಿ ಇಂದಿರಾ ಗಾಂಧಿಯವರು ಸೋಲನುಭವಿಸಿದರು. ಇಂತಹ ಸಾಧನೆಯನ್ನು ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ ತೀವ್ರ ಸಂಕಷ್ಟಕ್ಕೀಡಾಗಿದ್ದ ಹಲವರು ''ಮತಪೆಟ್ಟಿಗೆ ಕ್ರಾಂತಿ'' ಎಂದೇ ವರ್ಣಿಸಿದರು. ''ಒಂದು ವೇಳೆ ಹೀಗೆ ಹೇಳುವುದು ಸೂಕ್ತ ಹಾಗೂ ಸರಿಯಾದ ವಿಧಾನ ಎನ್ನುವುದಾದರೆ ಭಾರತೀಯರು ಮಾಡಿದ ಏಕೈಕ ಕ್ರಾಂತಿಯಿದು'' ಎಂದು ಬರೆದರು ಖ್ಯಾತ ಪತ್ರಕರ್ತ ಇಂದರ್ ಮಲ್ಹೋತ್ರಾ. ಆದರೆ ಇಂತಹ ಅಭೂತಪೂರ್ವ ಅವಕಾಶವನ್ನು ಜನತಾ ಸರಕಾರ ಸ್ವತಃ ಹಾಳುಗೆಡವಿದ್ದಲ್ಲದೆ, ಇಂದಿರಾ ಗಾಂಧಿಯವರು ಅತಿ ಶೀಘ್ರವಾಗಿ ಅಧಿಕಾರಕ್ಕೇರುವಂತೆ ಮಾಡಿತು.

ಜನತಾ ಪಕ್ಷ ಅಧಿಕಾರಕ್ಕೇರಿದ ಕೆಲವೇ ದಿನಗಳಲ್ಲಿ ಸಮಸ್ಯೆ ತಲೆದೋರಲಾರಂಭಿಸಿತು.

ಮೊರಾರ್ಜಿ ದೇಸಾಯಿಯವರ ಪ್ರಧಾನಿಗಿರಿಗೆ ಬೆಂಬಲ ನೀಡಿದ್ದ ಚರಣ್‌ಸಿಂಗ್ ಮತ್ತೊಬ್ಬ ಗಟ್ಟಿ ನಾಯಕ ಜಗಜೀವನ್ ರಾಂ ಅವರನ್ನು ಮೂಲೆಗೆ ತಳ್ಳುವಲ್ಲಿ ಯಶಸ್ವಿಯಾದರು. ಉತ್ತರ ಪ್ರದೇಶದಲ್ಲಿ ಭಾರಿ ಜನಬೆಂಬಲ ಹೊಂದಿದ್ದ ರೈತ ನಾಯಕ ಚರಣ್‌ಸಿಂಗ್ ಸ್ವತಃ ಪ್ರಧಾನಿ ಗಾದಿಯ ಆಕಾಂಕ್ಷಿಯಾಗಿದ್ದರು. ಎಪ್ಪತ್ತೊಂದು ಸಂಸದರನ್ನು ಹೊಂದಿದ್ದ ಅವರ ಭಾರತೀಯ ಲೋಕದಳ, ಜನತಾ ಪಕ್ಷದೊಳಗೆ ಅತಿ ಹೆಚ್ಚು ಸಂಸದರಿರುವ ಎರಡನೇ ದೊಡ್ಡ ಪಕ್ಷವಾಗಿತ್ತು. ಆದರೆ ಮೊರಾರ್ಜಿ ದೇಸಾಯಿಯವರನ್ನು ಪ್ರಧಾನಿ ಸ್ಥಾನದಲ್ಲಿ ಉಳಿಸಿಕೊಳ್ಳುವ ವಿಷಯದಲ್ಲಿ ದೃಢ ನಿಲುವು ತೆಗೆದುಕೊಂಡಿದ್ದ ಜನಸಂಘ, ಚರಣ್‌ಸಿಂಗ್ ಅವರ ಆಸೆಗೆ ಅಡ್ಡಿಯಾಗಿತ್ತು. ಹಾಗಾಗಿ ಚರಣ್‌ಸಿಂಗ್ ಸರಕಾರವನ್ನೇ ಪೇಚಿಗೀಡುಮಾಡಲು ಆರಂಭಿಸಿದರು. 1977, ಅಕ್ಟೋಬರ್ 3ರಂದು ಇಂದಿರಾ ಗಾಂಧಿಯವರನ್ನು ಬಂಧಿಸುವಂತೆ

ಮಾಡುವಲ್ಲಿ ಚರಣ್‌ಸಿಂಗ್ ಪ್ರಮುಖಪಾತ್ರ ವಹಿಸಿದರು. ಕೈಗಾರಿಕೋದ್ಯಮಿಯೊಬ್ಬರಿಂದ ಜೀಪು ಪಡೆದುಕೊಂಡಿದ್ದಾರೆ ಎಂಬ ಆರೋಪದ ಮೇಲೆ ಇಂದಿರಾ ಗಾಂಧಿಯವರನ್ನು ಬಂಧಿಸಿದರೂ ಸಾಕ್ಷ್ಯವನ್ನು ಒದಗಿಸಲಾಗದೆ ಮರುದಿನವೇ ಬಿಡುಗಡೆ ಮಾಡಬೇಕಾಗಿ ಬಂತು. ಇದರಿಂದ ಜನತಾ ಸರಕಾರಕ್ಕೆ ಕೆಟ್ಟ ಹೆಸರು ಬಂತು. ಇಂದಿರಾ ಗಾಂಧಿಯವರಿಗೆ ಜನರ ಅನುಕಂಪ ದೊರೆಯಿತು. ಮೊರಾರ್ಜಿ ದೇಸಾಯಿಯವರ ಪುತ್ರ ಕಾಂತಿ ದೇಸಾಯಿಯವರ ವಿರುದ್ಧ ಭ್ರಷ್ಟಾಚಾರದ ಆರೋಪ ಮಾಡಿದ ಚರಣ್‌ಸಿಂಗ್, ಸರಕಾರವನ್ನು ಮತ್ತೆ ಮತ್ತೆ ಸಂಕಷ್ಟಕ್ಕೆ ಸಿಲುಕಿಸಲಾರಂಭಿಸಿದರು. ಇವರೆಲ್ಲರ ನಡುವೆ ರಾಜ್‌ನಾರಾಯಣ್ ಎಂಬ ಮತ್ತೊಂದು ವಿಚಿತ್ರ ವ್ಯಕ್ತಿತ್ವವಿತ್ತು. ಅಶಿಸ್ತಿನ ಕಾರಣ ಅವರನ್ನು ಒಂದು ವರ್ಷ ಕಾಲ ಪಕ್ಷದಿಂದ ಹೊರಹಾಕಬೇಕಾಯಿತು. ಈ ಮಧ್ಯೆ ಪ್ರಧಾನಿಯಾಗಬೇಕೆಂಬ ತಮ್ಮ ಮಹತ್ವಾಕಾಂಕ್ಷೆಯನ್ನು ರಾಜ್‌ನಾರಾಯಣ್ ಕೂಡ ಬಹಿರಂಗಪಡಿಸಿದರು. 1977, ಜೂನ್‌ನಲ್ಲಿ ಪ್ರಧಾನಿ ಮೊರಾರ್ಜಿ ದೇಸಾಯಿಯವರಿಗೆ ಕೋಪೋದ್ರಿಕ್ತ ಪತ್ರ ಬರೆದ ರಾಜ್‌ನಾರಾಯಣ್ ಕೇಂದ್ರ ಸಂಪುಟದ ಸಚಿವರನ್ನು ''ಷಂಡರ ಸಂಘ'' ಎಂದು ಕರೆದರು. ಇಂದಿರಾ ಗಾಂಧಿಯವರನ್ನು ಕಾನೂನಿನ ಕಟಕಟೆಗೆ ತರುವಲ್ಲಿ ಸರಕಾರ ಅಸಮರ್ಥವಾಗಿದೆಯೆಂದು ಆರೋಪಿಸಿದರು. ಈ ಎಲ್ಲ ಅತಿರೇಕಗಳ ನಂತರ ಪ್ರಧಾನಿ ಮೊರಾರ್ಜಿ ದೇಸಾಯಿ, ಚರಣ್‌ಸಿಂಗ್ ಅವರನ್ನು ವಿತ್ತ ಸಚಿವ ಹಾಗೂ ಉಪ ಪ್ರಧಾನಿಯನ್ನಾಗಿ ನೇಮಕ ಮಾಡಿದರು. ಆದರೆ ಇಂತಹ ಮನವೊಲಿಕೆಗಳು ಹೆಚ್ಚು ಕಾಲ ಉಪಯೋಗಕ್ಕೆ ಬರಲಿಲ್ಲ, ಚರಣ್‌ಸಿಂಗ್ ಅವರ ಭಾರತೀಯ ಲೋಕದಳ ಮೊರಾರ್ಜಿ ಸರಕಾರವನ್ನು ಕೆಳಗುರುಳಿಸಿತು. ಹೊಸ ಸರಕಾರ ರಚಿಸುವಂತೆ ರಾಷ್ಟ್ರಪತಿ ಸಂಜೀವರೆಡ್ಡಿಯವರು ಚರಣ್‌ಸಿಂಗ್ ಅವರನ್ನು ಆಹ್ವಾನಿಸಿದರು. ಆ ವೇಳೆಗಾಗಲೇ ಚಿಕ್ಕಮಗಳೂರಿನಿಂದ ಗೆದ್ದು ಮತ್ತೆ ಲೋಕಸಭೆ ಪ್ರವೇಶಿಸಿದ್ದ ಇಂದಿರಾ ಗಾಂಧಿಯವರು ಚರಣ್‌ಸಿಂಗ್‌ಗೆ ಬೆಂಬಲ ನೀಡುವ ಆಸೆ ತೋರಿಸಿದ್ದರು. ಆದರೆ ಚರಣ್ ಸಿಂಗ್ ಪ್ರಧಾನಿಯಾಗಿ ಅಧಿಕಾರ ವಹಿಸಿಕೊಂಡ ಮರುಕ್ಷಣವೇ ಇಂದಿರಾ ಗಾಂಧಿ ಕೈಕೊಟ್ಟರು. ಅತ್ಯಂತ ಶೀಘ್ರವಾಗಿ ಕಾಂಗ್ರೆಸ್ ಬೆಂಬಲ ವಾಪಸ್ ತೆಗೆದುಕೊಂಡ ಕಾರಣ ಚರಣ್‌ಸಿಂಗ್‌ಗೆ ಲೋಕಸಭೆಯನ್ನು ಎದುರಿಸುವ ಅವಕಾಶವೂ ಲಭ್ಯವಾಗಲಿಲ್ಲ, ಅದುವರೆಗೂ ದೇಶ ಕಂಡ ಅತ್ಯಂತ ಅಲ್ಪಕಾಲದ ಸರಕಾರವೆಂಬ ಕುಖ್ಯಾತಿ ಅಂಟಿಕೊಂಡಿತು.

ಹೀಗೆ ಪಕ್ಷದೊಳಗಿನ ಬಂಡಾಯದ ಕಾರಣ ಕೇಂದ್ರದಲ್ಲಿ ಜನತಾ ಸರಕಾರ ಉರುಳಿದರೆ, ಗುಜರಾತ್‌ನಲ್ಲಿ ಮಾತ್ರ ಆಂತರಿಕ ಕಚ್ಚಾಟವನ್ನು ಹದ್ದುಬಸ್ತಿನಲ್ಲಿಡಲಾಗಿತ್ತು. ಗುಜರಾತ್ ರಾಜ್ಯದ ಯಾವುದೇ ಜನತಾ ನಾಯಕರ ವಿರುದ್ಧ ಭ್ರಷ್ಟಾಚಾರದ ಸಣ್ಣ ಆರೋಪವೂ ಇರಲಿಲ್ಲ.





ಆದರೇನಂತೆ ದಿಲ್ಲಿಯಲ್ಲಿ ಮತ್ತೆ ಗದ್ದುಗೆಯೇರಿದ ಇಂದಿರಾ ಗಾಂಧಿಯವರು ಜನತಾ ಪಕ್ಷದ ವಿರುದ್ಧ ಸೇಡು ತೀರಿಸಿಕೊಳ್ಳಲು ಮುಂದಾದರು. ಗುಜರಾತ್ ಸೇರಿದಂತೆ ಎಂಟು ರಾಜ್ಯ ಸರಕಾರಗಳನ್ನು ವಜಾ ಮಾಡಿ ವಿಧಾನಸಭೆಗಳನ್ನು ವಿಸರ್ಜಿಸಿದರು. 1980, ಮೇನಲ್ಲಿ ನಡೆದ ಗುಜರಾತ್ ವಿಧಾನಸಭೆ ಚುನಾವಣೆಯಲ್ಲಿ ಕಾಂಗ್ರೆಸ್ ಜಯಗಳಿಸಿತು. 182ರಲ್ಲಿ 142 ಸ್ಥಾನಗಳನ್ನು ತನ್ನದಾಗಿಸಿಕೊಂಡಿತು. ಇತ್ತ ಹರಿದು ಹಂಚಿಹೋಗಿದ್ದ ಜನತಾ ಪಕ್ಷ ಕೇವಲ 22 ಸ್ಥಾನಗಳಿಗೆ ತೃಪ್ತಿಪಟ್ಟುಕೊಳ್ಳಬೇಕಾಯಿತು. ಆದರೇನಂತೆ ಹೊಸ ಬೆಳವಣಿಗೆಯೊಂದು ಕಾಣತೊಡಗಿತು. ಜನತಾ ಪಕ್ಷದ ಆಂತರಿಕ ಕಚ್ಚಾಟದಿಂದ ಬೇಸತ್ತುಹೋದ ಜನಸಂಘ ಹೊಸ ಹೆಸರಿನೊಂದಿಗೆ ತನ್ನ ಗುರುತನ್ನು ಉಳಿಸಿಕೊಳ್ಳಲು ಮುಂದಾಯಿತು.

1980, ಏಪ್ರಿಲ್ 5ರಂದು ಭಾರತೀಯ ಜನತಾಪಕ್ಷ (ಬಿಜೆಪಿ) ಜನ್ಮತಳೆಯಿತು. ಕೇಶುಭಾಯ್ ಪಟೇಲ್ ಗುಜರಾತ್ ರಾಜ್ಯ ಬಿಜೆಪಿಯ ಅಧ್ಯಕ್ಷರಾದರು.






# 12
## ಮೀಸಲಾತಿ ಎಂಬ ಕಾಂಗ್ರೆಸ್‌ನ ಒಡೆದು ಆಳುವ ನೀತಿ

1980ರ ದಶಕದ ಮೊದಲಾರ್ಧದಲ್ಲಿ ಭಾರಿ ಸಂಖ್ಯೆಯ ಹಿಂಸಾಚಾರಗಳು ಸಂಭವಿಸಿದವು. ಪಂಜಾಬ್‌ನಲ್ಲಿ ಭಯೋತ್ಪಾದನೆ ತನ್ನ ಕ್ರೂರ ಮುಖವನ್ನು ತೋರತೊಡಗಿತು. 1981ರಲ್ಲಿ ಮೀನಾಕ್ಷಿಪುರಂನಲ್ಲಿ ನಡೆದ ದಲಿತರ ಸಾಮೂಹಿಕ ಮತಾಂತರ ಇಡೀ ದೇಶವನ್ನೇ ನಿಬ್ಬೆರಗಾಗಿಸಿತು. ಗುಜರಾತ್‌ನಲ್ಲೂ ದಳ್ಳುರಿಗಳು ಸಂಭವಿಸಲಾರಂಭಿಸಿದವು. ಆದರೆ ಅವು ಗುಜರಾತ್‌ಗೆ ಹೊಸ ವಿಚಾರವೇನಾಗಿರಲಿಲ್ಲ. 1960ರಿಂದ 1969ರ ನಡುವಿನ ಅವಧಿಯಲ್ಲಿ 2,938 ಕೋಮು ಹಿಂಸಾಚಾರಗಳು ಸಂಭವಿಸಿದ್ದವು. ಸೌರಾಷ್ಟ್ರ ಮತ್ತು ಕಛ್‌ನಲ್ಲಿ ದೊಡ್ಡ ದಳ್ಳುರಿಗಳೇ ನಡೆದಿದ್ದವು, ಅದೂ ಆಳುವ ಕಾಂಗ್ರೆಸ್ ಸರಕಾರದ ಇಚ್ಛೆಯಂತೆ. ಗುಜರಾತ್‌ನ ಮನಸ್ಥಿತಿಯನ್ನು ಅರ್ಥಮಾಡಿಕೊಳ್ಳದೆ ಗೋಧ್ರಾ ನಂತರದ ಹಿಂಸಾಚಾರದ ಬಗ್ಗೆ ನಿರ್ಧಾರ ತೆಗೆದುಕೊಳ್ಳುವುದು ಸರಿಯಲ್ಲ. ಇತಿಹಾಸದುದ್ದಕ್ಕೂ ಗುಜರಾತ್ ಮುಸ್ಲಿಮರ ಆಡಳಿತಕ್ಕೊಳಪಟ್ಟಿತ್ತು. ಇಂದಿಗೂ ಅಹಮದಾಬಾದ್‌ಗೆ ಭೇಟಿ ನೀಡಿದರೆ ವೈಷ್ಣವ, ಜೈನ ಮತ್ತು ಶೈವ ನಿವಾಸಿಗಳೆಂಬ ಮೊಹಲ್ಲಾಗಳು ಕಾಣುತ್ತವೆ. ಮುಸ್ಲಿಂ ಫಕೀರರನ್ನು ಪೂಜಿಸುವ ಹಿಂದೂ ಮನೆಗಳೂ ಇವೆ. ಬರೋಡದಲ್ಲಂತೂ ಫಕೀರನ ಸಮಾಧಿಯಿರುವ ಜಾಗದಲ್ಲಿ ತ್ರಿಶೂಲವನ್ನೂ ಕಾಣಬಹುದು. ಅಹಮದಾಬಾದ್‌ನ ಮುಸ್ಲಿಂ ದರ್ಗಾದಲ್ಲಿ ಹಿಂದೂ ಪೂಜಾರಿ ಇರುವ ಉದಾಹರಣೆಗಳಿವೆ. ಒಂದು ವೇಳೆ ಸೂಫಿ ದಾರ್ಶನಿಕನೊಬ್ಬ ಸೂಫಿಯಿಸಂ ಬಗ್ಗೆ ಮಾತನಾಡಿದರೆ, ಗುಜರಾತಿಗಳು ಆತನನ್ನು ಒಪ್ಪಿಕೊಳ್ಳುತ್ತಾರೆ. ಆದರೆ ಮೊಹಮದ್ ಘಜನಿ ದೇವಾಲಯದ ಮೇಲೆ ಆಕ್ರಮಣ ಮಾಡಿದರೆ ಹಿಂದೂಗಳ ಪ್ರತಿಕ್ರಿಯೆ ರಕ್ತಸಿಕ್ತವಾಗಿರುತ್ತದೆ. ಗುಜರಾತಿಗಳು ಅನಿಷ್ಟದ ವಿರುದ್ಧ ಹೋರಾಡುತ್ತಾರೆಯೇ ಹೊರತು ಒಳ್ಳೆಯದರ ವಿರೋಧಿಗಳಲ್ಲ. ಒಮ್ಮೆ ಔರಂಗ್‌ಜೇಬನ ಅಧಿಕಾರಿಯೊಬ್ಬ ಜೈನ

ದೇವಾಲಯದ ಮೇಲೆ ಮಾಂಸದ ತುಂಡೊಂದನ್ನು ಎಸೆದಿದ್ದ. ಆಗ ಸ್ಥಳೀಯ ನಾಯಕ ಶಾಂತಿಚಂದ್ರ ಎಂಬುವವರು ಔರಂಗ್‌ಜೇಬನಿಗೆ ತೆರಿಗೆ ನೀಡಬಾರದೆಂದು ಎಲ್ಲರಿಗೂ ನಿರ್ದೇಶನ ನೀಡಿದ್ದರು. ಕೊನೆಗೆ ಔರಂಗ್‌ಜೇಬು ಮಾಂಸ ಎಸೆದಿದ್ದ ಅಧಿಕಾರಿಯನ್ನೇ ಬದಲಾಯಿಸಬೇಕಾಯಿತು.

ಇದು ಗುಜರಾತಿಗಳ ಮನಸ್ಥಿತಿ ಮತ್ತು ತಾಕತ್ತನ್ನು ತೋರಿಸುತ್ತದೆ.

ಚುನಾವಣೆಯ ವೇಳೆ ಗುಜರಾತ್‌ನಲ್ಲಿ ಜಾತಿ ಎಂಬುದು ಅಷ್ಟೊಂದು ಮಹತ್ವದ ವಿಷಯವಾಗುವುದಿಲ್ಲ. ನರೇಂದ್ರ ಮೋದಿಯವರಂತೂ ಜಾತಿ ಲೆಕ್ಕಾಚಾರದ ಮೇಲೆ ಯಾವ ಚುನಾವಣೆಯಲ್ಲೂ ಹೋರಾಟ ಮಾಡಿಲ್ಲ. ಒಂದು ವೇಳೆ ಇದನ್ನು ಅರ್ಥ ಮಾಡಿಕೊಂಡರೆ ಕಾಲಾಂತರದಲ್ಲಿ ಗುಜರಾತ್‌ನಲ್ಲಿ ನಡೆದ ಹಿಂಸಾಚಾರಗಳನ್ನು ಅರ್ಥ ಮಾಡಿಕೊಳ್ಳಬಹುದು. 1965ರಲ್ಲಿ ನಡೆದ ಭಾರತ-ಪಾಕಿಸ್ತಾನ ಯುದ್ಧ ಪರಿಸ್ಥಿತಿಯನ್ನು ಉದ್ವಿಗ್ನಗೊಳಿಸಿತು. ಆಗಿನ ಗುಜರಾತ್ ಮುಖ್ಯಮಂತ್ರಿ ಬಲವಂತ್‌ರಾಯ್ ಮೆಹ್ತಾ ಅವರು ಪ್ರಯಾಣಿಸುತ್ತಿದ್ದ ವಿಮಾನವನ್ನು ಪಾಕಿಸ್ತಾನ ಹೊಡೆದುರುಳಿಸಿ ಕೊಂದಾಗ ಪಾಕ್ ವಿರೋಧಿ ಭಾವನೆಯ ಅಲೆಯೆದ್ದಿತ್ತು. ಅದು ಮುಸ್ಲಿಂ ವಿರೋಧಿ ಭಾವನೆಯಾಗಿ ಪರಿವರ್ತನೆಯಾದ ಕಾರಣ ಕಛ್ ಮತ್ತು ಸೌರಾಷ್ಟ್ರದಲ್ಲಿ ಹಿಂಸಾಚಾರಗಳು ಭುಗಿಲೆದ್ದಿದ್ದವು. ಇವೆಲ್ಲವುಗಳಿಗಿಂತ ಬೇಸರದ ಸಂಗತಿಯೆಂದರೆ, ಗುಜರಾತ್‌ನ ಕಾಂಗ್ರೆಸ್ ನಾಯಕರು ಜಾತಿ ಲೆಕ್ಕಾಚಾರದ ಮೇಲೆ ರಾಜಕೀಯ ಮಾಡತೊಡಗಿದರು. ನವನಿರ್ಮಾಣ ಚಳವಳಿಯ ತರುವಾಯ ಕಾಂಗ್ರೆಸ್ಸಿಗರು ದಿಕ್ಕುದಿಸೆಯಿಲ್ಲದಂತಾಗಿದ್ದರು. ತುರ್ತುಪರಿಸ್ಥಿತಿ ಕಾಂಗ್ರೆಸ್ಸಿಗರ ಜನಪ್ರಿಯತೆಯನ್ನು ನೆಲಕಚ್ಚಿಸಿತ್ತು. ಈ ಹಿನ್ನೆಲೆಯಲ್ಲಿ 1975ರಲ್ಲಿ ನಡೆದ ಕಾಂಗ್ರೆಸ್ ನಾಯಕರ ಚಂದೋದ್ ಕರ್ನಾಲಿ ಕಾನ್ಫರೆನ್ಸ್‌ನಲ್ಲಿ ಪಕ್ಷವನ್ನು ಸಮಾಜದಲ್ಲಿ ತುಳಿತಕ್ಕೊಳಗಾದವರ ವಕ್ತಾರನೆಂಬಂತೆ ಪ್ರತಿಬಿಂಬಿಸಬೇಕು ಎಂಬ ನಿರ್ಧಾರಕ್ಕೆ ಬರಲಾಯಿತು. ಸನತ್ ಮೆಹ್ತಾ, ಜಿನಾಬಾಯಿ ದರ್ಜಿ ಅವರ ಆಣತಿಯ ಮೇರೆಗೆ ಸಾಮಾಜಿಕವಾಗಿ ಹಿಂದುಳಿದ ವರ್ಗಗಳನ್ನು ಗುರುತಿಸಲಾಯಿತು. ಕ್ಷತ್ರಿಯ, ಹರಿಜನ, ಆದಿವಾಸಿ ಮತ್ತು ಮುಸ್ಲಿಂ(ಕೆಎಚ್‌ಎಎಂ) ಇವು ಆ ನಾಲ್ಕು ವರ್ಗಗಳಾಗಿದ್ದವು. ಅಂದರೆ ಚುನಾವಣೆಯಲ್ಲಿ ಜಾತಿಯನ್ನೇ ಒಂದು ಅಸ್ತ್ರವಾಗಿ ಬಳಸಲು ಕಾಂಗ್ರೆಸ್ ಮುಂದಾಯಿತು. ಇದು ಹಿಂದೂ ಸಮಾಜವನ್ನು ಒಡೆಯುವ ಹಾಗೂ ಆರೆಸ್ಸೆಸ್ ಬಲಿಷ್ಠವಾಗಿರುವ ರಾಜ್ಯದಲ್ಲಿ ಜಾತಿ ಆಧಾರಿತ ರಾಜಕಾರಣವನ್ನು ಹುಟ್ಟುಹಾಕುವ ಹುನ್ನಾರವಾಗಿತ್ತು. ಮಾಧವಸಿನ್ಹ ಸೋಳಂಕಿಯವರ ಸರಕಾರವಂತೂ ಹಿಂದುಳಿದ ವರ್ಗಗಳಿಗೆ ಪ್ರತ್ಯೇಕ ಮೀಸಲು ನೀತಿಯನ್ನು ಜಾರಿಗೆ ತರುವ ಮೂಲಕ ಹಿಂದೂ ಸಮಾಜವನ್ನು ತುಂಡರಿಸಲು





ಮುಂದಾಯಿತು. ಈ ಮಧ್ಯೆ ಘನಶಾಮ್ ಓಝಾ ಮಂತ್ರಿಮಂಡಲ 1972ರಲ್ಲಿ ನೇಮಕ ಮಾಡಿದ್ದ 'ಭಕ್ಷಿ ಆಯೋಗ' ತನ್ನ ವರದಿಯನ್ನು ಸಲ್ಲಿಸಿತು. ಆ ವರದಿಯಲ್ಲಿ ಆರ್ಥಿಕ ಹಾಗೂ ಸಾಮಾಜಿಕ ವಾಗಿ ಹಿಂದುಳಿದ 82 ಜಾತಿಗಳನ್ನು ಗುರುತಿಸಿ ಅವುಗಳಿಗೆ ಉದ್ಯೋಗ ಮತ್ತು ಶಿಕ್ಷಣ ಸಂಸ್ಥೆಗಳಲ್ಲಿ ಹೆಚ್ಚುವರಿಯಾಗಿ ಶೇ. 10ರಷ್ಟು ಮೀಸಲನ್ನು ನೀಡುವಂತೆ ಶಿಫಾರಸು ಮಾಡಲಾ ಯಿತು. ಆ ಶಿಫಾರಸುಗಳನ್ನು ಸೋಳಂಕಿ ಸರಕಾರ ಜಾರಿಗೊಳಿಸಲು ಮುಂದಾದ ಕಾರಣ ಗುಜರಾತ್‌ನಲ್ಲಿ ಹಿಂಸಾಚಾರಗಳು ಆರಂಭವಾದವು. ಉದ್ಯೋಗ ನೇಮಕ ಹಾಗೂ ಪ್ರವೇಶಾತಿಯಲ್ಲಿ ಮಾತ್ರ ಮೀಸಲು ನೀಡಿದ್ದರೆ ಯಾರೂ ಬೇಡವೆನ್ನುತ್ತಿರಲಿಲ್ಲ. ಆದರೆ ರೋಸ್ಟರ್ ಸಿಸ್ಟಮ್, ಮೆಡಿಕಲ್ ಮತ್ತು ಎಂಜಿನಿಯರಿಂಗ್ ಕಾಲೇಜುಗಳಲ್ಲಿ ಬ್ಯಾಕ್ ಲಾಗಿಂಗ್ ವ್ಯವಸ್ಥೆಗಳನ್ನು ಸೃಷ್ಟಿಸಿದ್ದು ಹಾಗೂ ಬಡ್ತಿಯಲ್ಲೂ ಮೀಸಲು ತರಲು ಹೊರಟಿದ್ದು ಮೇಲ್ಜಾತಿಯವರನ್ನು ರೊಚ್ಚಿಗೇಳಿಸಿತು. ಅದೇ ವೇಳೆಯಲ್ಲಿ ನಡೆಯುತ್ತಿದ್ದ ಹಣದುಬ್ಬರ ವಿರೋಧಿ ಪ್ರತಿಭಟನೆಗಳು ಮೀಸಲು ವಿರೋಧಿ ಚಳವಳಿಯ ಜತೆ ಸೇರಿಕೊಂಡಿದ್ದರಿಂದ ಹಿಂಸಾಚಾರ ಇನ್ನೂ ತೀವ್ರವಾಯಿತು. ಬಡ್ತಿ ವಿಷಯದಲ್ಲಿ ಜಾರಿಗೆ ತಂದ ರೋಸ್ಟರ್ ಪದ್ಧತಿಯಂತೂ ಆಡಳಿತಶಾಹಿಯನ್ನೂ ಇಬ್ಭಾಗವಾಗಿಸಿತು. ಅಲ್ಲದೆ ಜಸ್ಟೀಸ್ ರಾಣೆ ನೇತೃತ್ವದ ಎರಡನೇ ಹಿಂದುಳಿದ ವರ್ಗದ ಆಯೋಗ 63 ವೃತ್ತಿಪರ ಸಮುದಾಯಗಳನ್ನು ಹಿಂದುಳಿದ ಜಾತಿಗಳ ಪಟ್ಟಿಗೆ ಸೇರಿಸುವ ಮೂಲಕ ಅವುಗಳನ್ನು ಮೀಸಲಾತಿಯ ವ್ಯಾಪ್ತಿಗೆ ಒಳಪಡಿಸಿತು. ಜತೆಗೆ ಮೀಸಲಾತಿಯ ಪ್ರಮಾಣವನ್ನು 10ರಿಂದ ಶೇ. 27ಕ್ಕೆ ಏರಿಸಬೇಕೆಂದು ಶಿಫಾರಸು ಮಾಡಿತು. ಹೀಗೆ ಒಟ್ಟು ಮೀಸಲಾತಿಯ ಪ್ರಮಾಣ ಶೇ. 48.5ಕ್ಕೆ ಏರಿತು. ಇಂತಹ ಪ್ರತೀಕಾರಾತ್ಮಕ ರಾಜಕೀಯದಿಂದಾಗಿ ಅಹಮದಾಬಾದ್, ರಾಜ್‌ಕೋಟ್, ವಡೋದರಾ, ಸೂರತ್, ಜುನಾಗಢ, ಬರೂಚ್, ಪಾಲನ್‌ಪುರ್, ಮೆಹ್ಸಾನ, ಭುಜ್ ಹಾಗೂ ರಾಜ್ಯದ ಇತರೆಡೆಗಳಲ್ಲಿ ಹಿಂಸಾಚಾರ ಆರಂಭವಾಯಿತು. ಆರು ವಾರಗಳಾದರೂ ನಿಲ್ಲಲಿಲ್ಲ.

ಕಾಂಗ್ರೆಸ್‌ನ ಒಡೆದು ಆಳುವ ನೀತಿ ಅಷ್ಟರಮಟ್ಟಿಗಿತ್ತು.

# 13
## ಭೂಮಿ ಅಲುಗಿತು
## ಸಿಖ್ಖರ ಕಗ್ಗೊಲೆಯಾಯಿತು

**1984**, ಅಕ್ಟೋಬರ್ 31ರಂದು ಪ್ರಧಾನಿ ಇಂದಿರಾ ಗಾಂಧಿಯವರ ಹತ್ಯೆ ನಡೆಯಿತು. ಅದರೊಂದಿಗೆ ದೊಡ್ಡ ದುರಂತವೇ ಬಂದಪ್ಪಳಿಸಿತು. ಇಡೀ ದೇಶವೇ ದಿಗ್ಭ್ರಮೆಗೊಳಗಾಯಿತು. ಇತ್ತ ರೊಚ್ಚಿಗೆದ್ದ ಕಾಂಗ್ರೆಸಿಗರು ಐದು ಸಾವಿರಕ್ಕೂ ಹೆಚ್ಚು ಮಂದಿ ಸಿಖ್ಖರನ್ನು ಹತ್ಯೆಗೈದರು. ಮಹಿಳೆಯರು, ಮಕ್ಕಳು ಎಂಬ ಭೇದಭಾವವಿಲ್ಲದೆ ಕೈಗೆ ಸಿಕ್ಕಿದವರನ್ನೆಲ್ಲ ಕೊಲ್ಲಲಾಯಿತು.

ಆ ಹಿಂಸಾಚಾರದ ಮುಂದೆ ಗುಜರಾತ್‌ನಲ್ಲಿ ನಡೆದ ಘಟನೆ ಏನೇನೂ ಅಲ್ಲ.

ಇಂದಿರಾ ಗಾಂಧಿಯವರ ಹತ್ಯೆಯೊಂದಿಗೆ ಹೊಸ ಚುನಾವಣೆಗಳೂ ಘೋಷಣೆಯಾದವು. "ಒಂದು ದೊಡ್ಡ ಮರ ಉರುಳಿ ಬಿದ್ದಾಗ ಭೂಮಿ ಅಲುಗುವುದು ಸಹಜ" ಎಂದ ರಾಜೀವ್ ಗಾಂಧಿ ಅಮಾಯಕ ಸಿಖ್ಖರ ಹತ್ಯೆಯನ್ನೂ ಸಮರ್ಥಿಸಿಕೊಂಡರು. ಖಂಡಿತ ಭೂಮಿ ಅಲುಗಿತು! ಇಂದಿರಾ ಗಾಂಧಿಯವರ ಹತ್ಯೆಯಿಂದಾಗಿ ರಾಷ್ಟ್ರಾದ್ಯಂತ ಕಾಂಗ್ರೆಸ್ ಪರ ಅನುಕಂಪದ ಅಲೆ ಎದ್ದಿತು. ಅದು ರಾಜೀವ್ ಗಾಂಧಿಯವರನ್ನು ಭಾರಿ ಬಹುಮತದೊಂದಿಗೆ ಅಧಿಕಾರಕ್ಕೇರಿಸಿತು. ಈ ಅನುಕಂಪದ ಅಲೆಯನ್ನು ಎದುರಿಸುವ ತಾಕತ್ತು ಯಾವ ಪ್ರತಿಪಕ್ಷಗಳಿಗೂ ಹಾಗೂ ಪ್ರತಿಪಕ್ಷ ನಾಯಕರಿಗೂ ಇರಲಿಲ್ಲ. 1984ರ ಮೇನಲ್ಲಿ ರಾಜ್‌ಕೋಟ್ ಹಾಗೂ ಜುನಾಗಢ ನಗರಪಾಲಿಕೆ ಚುನಾವಣೆಯಲ್ಲಿ ಭಾರಿ ಬಹುಮತ ಗಳಿಸಿದ್ದ ಹಾಗೂ ಉಪಚುನಾವಣೆ ನಡೆದ ಐದೂ ವಿಧಾನಸಭೆ ಸ್ಥಾನಗಳನ್ನು ಗೆದ್ದುಕೊಂಡಿದ್ದ ಬಿಜೆಪಿ ಕೂಡ ನೆಲಕಚ್ಚುವಂತಾಯಿತು. ಗುಜರಾತ್‌ನ ಒಟ್ಟು 26 ಲೋಕಸಭೆ ಸ್ಥಾನಗಳಲ್ಲಿ 24ರಲ್ಲಿ ಕಾಂಗ್ರೆಸ್ ಜಯ ಗಳಿಸಿತು. ಕೇವಲ 2 ಸ್ಥಾನಗಳು ಬಿಜೆಪಿಗೆ ಒಲಿದವು.

ಆದರೇನಂತೆ ವಿಧಾನಸಭೆ ಚುನಾವಣೆಯ ವೇಳೆ ಸ್ಥಗಿತಗೊಂಡಿದ್ದ ಮೀಸಲಾತಿ ವಿರೋಧಿ ಪ್ರತಿಭಟನೆ ಚುನಾವಣೆ ಮುಗಿದ ಕೂಡಲೇ ಮತ್ತೆ ತಾರಕಕ್ಕೇರಿತು. ಚುನಾವಣೆ

ಸಂದರ್ಭದಲ್ಲಿನ ವಿರಾಮವನ್ನು ಬಿಟ್ಟರೆ ಒಟ್ಟು ನಾಲ್ಕು ತಿಂಗಳ ಕಾಲ ನಡೆದ ಹಿಂಸಾಚಾರ ರಾಜ್ಯದ ಕಾನೂನು ಮತ್ತು ಸುವ್ಯವಸ್ಥೆಯನ್ನು ಸಂಪೂರ್ಣವಾಗಿ ಹಾಳುಗೆಡವಿತು. ಶೈಕ್ಷಣಿಕ ಸಂಸ್ಥೆಗಳು ಕೂಡ ಆರು ತಿಂಗಳುಗಳ ಕಾಲ ಬಾಗಿಲು ಮುಚ್ಚಬೇಕಾಯಿತು. ಗುಜರಾತಿ ಪತ್ರಿಕೆಗಳು ಪೊಲೀಸರನ್ನು ದೂಷಿಸಿದವು. ಇದರಿಂದ ರೊಚ್ಚಿಗೆದ್ದ ಅಹಮದಾಬಾದ್ ಪೊಲೀಸರು ಅತಿ ಹೆಚ್ಚು ಪ್ರಸಾರವಿದ್ದ 'ಗುಜರಾತ್ ಸಮಾಚಾರ್' ಪತ್ರಿಕೆಯ ಕಚೇರಿ ಮೇಲೆ ದಾಳಿ ಮಾಡಿದರು. ಬೆಂಕಿ ಹಚ್ಚಿ ಧ್ವಂಸಗೊಳಿಸಿದರು. ಸುಮಾರು 3.5 ಕೋಟಿ ರೂ. ನಷ್ಟವಾಯಿತು. ಮುಖ್ಯಮಂತ್ರಿಯನ್ನು ಬದಲಾಯಿಸಬೇಕೆಂಬ ಬೇಡಿಕೆಯನ್ನು ಪ್ರಧಾನಿ ರಾಜೀವ್ ಗಾಂಧಿ ಖಡಾಖಂಡಿತವಾಗಿ ತಿರಸ್ಕರಿಸಿದರು. ಪರಿಸ್ಥಿತಿ ಕೈಮೀರಿ ಹೋಗಲಾರಂಭಿಸಿತು. ಸರಕಾರಿ ಉದ್ಯೋಗಿಗಳು ಅನಿರ್ದಿಷ್ಟಾವಧಿಯ ಮುಷ್ಕರಕ್ಕೆ ಮುಂದಾದರು. ನವನಿರ್ಮಾಣ ಚಳವಳಿಗಿಂತ ಮೀಸಲಾತಿ ವಿರೋಧಿ ಚಳವಳಿಯೇ ದೊಡ್ಡದಾಯಿತು. ಸೋಳಂಕಿಯವರ 100 ದಿನಗಳ ಅಧಿಕಾರಾವಧಿಯಲ್ಲಿ 54 ದಿನಗಳ ಕಾಲ ಅಹಮದಾಬಾದ್‌ನಾದ್ಯಂತ ಸೇನಾಪಡೆಗಳು ಗಸ್ತು ತಿರುಗಬೇಕಾಯಿತು. ಕರ್ಫ್ಯೂ ಜಾರಿಯಲ್ಲಿದ್ದರೂ ರಥಯಾತ್ರೆಯನ್ನು ನಡೆಸಲಾಯಿತು. ಅದು ಪೊಲೀಸರು ಸಂಪೂರ್ಣವಾಗಿ ವಿಫಲಗೊಂಡಿರುವುದರ ಸಂಕೇತವಾಗಿತ್ತು. ಕೊನೆಗೂ ರಾಜೀವ್ ಗಾಂಧಿಯವರು ರಾಜೀನಾಮೆ ನೀಡುವಂತೆ ಸೋಳಂಕಿಯವರಿಗೆ ಸೂಚನೆ ನೀಡಿದರು. ಆದರೆ ಸೋಳಂಕಿ ರಾಜೀನಾಮೆ ನೀಡಿದಾಗ ಗುಜರಾತ್ ಜರ್ಜರಿತವಾಗಿತ್ತು. ಅವರ ಅಧಿಕಾರಾವಧಿ ಕೊನೆಗೊಳ್ಳುವ ವೇಳೆಗೆ 237 ಜನರು ಹತರಾಗಿದ್ದರು. 1,000 ಜನರು ಗಾಯಗೊಂಡಿದ್ದರು ಮತ್ತು 2,200 ಕೋಟಿ ರೂ.ಗೂ ಹೆಚ್ಚು ಮೌಲ್ಯದ ಆಸ್ತಿಪಾಸ್ತಿಗೆ ಹಾನಿಯುಂಟಾಗಿತ್ತು.

ಇದೆಲ್ಲ ಆಗಿದ್ದು ಕಾಂಗ್ರೆಸ್‌ನ ದುರಾಡಳಿತದಿಂದ.

### ಹಿಂಸಾಚಾರ, ಉರುಳಿಬಿದ್ದ ತಲೆಗಳ ಲೆಕ್ಕಾಚಾರ:

ಧಾರ್ಮಿಕ, ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಮತ್ತು ಆರ್ಥಿಕ ಕಾರಣಗಳಿಗಾಗಿ ಹೋರಾಟಕ್ಕಿಳಿಯುವುದು, ಹಿಂಸಾಚಾರದಲ್ಲಿ ತೊಡಗುವುದು ಭಾರತದಲ್ಲಿ ಸರ್ವೇಸಾಮಾನ್ಯ. ಧರ್ಮ ಧರ್ಮಗಳ ನಡುವೆಯಲ್ಲದೆ, ಜಾತಿ ಜಾತಿಗಳ ನಡುವೆಯೂ ಸಂಘರ್ಷಗಳಾಗಿವೆ. ಭಾರತದಲ್ಲಿ ಹಿಂಸಾಚಾರ, ಸಂಘರ್ಷಗಳ ದೊಡ್ಡ ಇತಿಹಾಸವೇ ಇದೆ. ಜಾತ್ಯತೀತತೆ ಎಂಬ ಪರಿಕಲ್ಪನೆಯನ್ನೇ ಕೇಳದ ಕಾಲವಾದ 18 ಮತ್ತು 19ನೇ ಶತಮಾನದಲ್ಲೂ ಕೋಮು ಹಿಂಸಾಚಾರಗಳು ನಡೆದಿವೆ. ಆದರೆ ಅತ್ಯಂತ ವಿಷಪೂರಿತ ಕೋಮು ಸಂಘರ್ಷಗಳ ಬೀಜ





ಬಿತ್ತಿದ್ದು ಬ್ರಿಟಿಷರು. ಸ್ವಾತಂತ್ರ್ಯ ಹೋರಾಟವನ್ನು ದುರ್ಬಲಗೊಳಿಸುವ ಸಲುವಾಗಿ ಈ ರೀತಿಯ ಒಡೆದು ಆಳುವ ನೀತಿಯನ್ನು ಬ್ರಿಟಿಷರು ಅನುಸರಿಸುತ್ತಿದ್ದರು. ಇದಕ್ಕೆ ಇನ್ನೊಂದು ಕಾರಣವೂ ಇತ್ತು. ಸುಮಾರು ಸಾವಿರ ವರ್ಷಗಳಷ್ಟು ಕಾಲ ಮುಸ್ಲಿಮರ ಆಡಳಿತಕ್ಕೊಳಪಟ್ಟಿದ್ದ ಹಿಂದೂಗಳು ತಮ್ಮ ನಂಬಿಕೆಯ ಮೇಲೆ ಹೊಡೆತ ನೀಡುವ ಮುಸ್ಲಿಮರ ಯತ್ನವನ್ನು ಎಂದೂ ಸಹಿಸಿಲ್ಲ. ಇಲ್ಲಿ ಗಮನಿಸಬೇಕಾದ ಬಹುಮುಖ್ಯವಾದ ಅಂಶವೆಂದರೆ, ಎರಡನೇ ಮಹಾಯುದ್ಧದ ನಂತರ ಮುಸ್ಲಿಮರು ಸಮಗ್ರ ಭಾರತದೊಳಗೆ ಒಂದಾಗಿರಲು ಒಪ್ಪಲಿಲ್ಲ. ಮುಸ್ಲಿಂ ನಾಯಕರಾಗಿದ್ದ ಮೊಹಮದ್ ಅಲಿ ಜಿನ್ನಾ ಮುಸ್ಲಿಮರಿಗಾಗಿ ಪ್ರತ್ಯೇಕ ರಾಷ್ಟ್ರ ನೀಡಬೇಕೆಂದು ಪಟ್ಟು ಹಿಡಿದು ಕುಳಿತಿದ್ದರು. ದುರದೃಷ್ಟವಶಾತ್ ಮುಸ್ಲಿಮರೇ ಆರಂಭಿಸಿದ ಇಂತಹ ಕೋಮುವಾದ ಸ್ವಾತಂತ್ರ್ಯಾನಂತರವೂ ನಿಲ್ಲಲಿಲ್ಲ. ಇದುವರೆಗೂ ದೇಶಾದ್ಯಂತ 30 ಸಾವಿರಕ್ಕೂ ಹೆಚ್ಚು ಕೋಮು ಹಿಂಸಾಚಾರಗಳು ಸಂಭವಿಸಿವೆ. ಇವುಗಳಲ್ಲಿ ಹೆಚ್ಚಿನ ಹಿಂಸಾಚಾರಗಳು ಸಂಭವಿಸಿದ್ದು ಕಾಂಗ್ರೆಸ್ ಆಡಳಿತದಲ್ಲಿದ್ದಾಗ ಎಂಬುದು ಇಲ್ಲಿ ಮುಖ್ಯವಾಗುತ್ತದೆ.

1713ರಲ್ಲಿ ಗುಜರಾತ್‌ನಲ್ಲಿ ನಡೆದ ಕೋಮು ಹಿಂಸಾಚಾರ ಆಧುನಿಕ ಕಾಲದಲ್ಲಿ ನಡೆದ ಮೊದಲ ಘಟನೆಯಾಗಿದೆ. ಅಹಮದಾಬಾದ್‌ನಲ್ಲಿ 20ನೇ ಶತಮಾನದಲ್ಲೂ ಕೋಮು ಹಿಂಸಾಚಾರ ಸಂಭವಿಸಿತ್ತು. 1926ರಲ್ಲೂ ಹಿಂದೂ-ಮುಸ್ಲಿಮರ ನಡುವೆ ಸಂಘರ್ಷವೇರ್ಪಟ್ಟಿತ್ತು. ಆನಂತರ ಕೋಮು ಹಿಂಸಾಚಾರಗಳು ಶೀಘ್ರವಾಗಿ ಸಂಭವಿಸಲಾರಂಭಿಸಿದವು. 1967ರ ನಂತರವಂತೂ ಇನ್ನೂ ಹೆಚ್ಚಾದವು. 1969ರಲ್ಲಿ ನಡೆದ ಗುಜರಾತ್ ಕೋಮು ಹಿಂಸಾಚಾರದಲ್ಲಿ 2000ಕ್ಕೂ ಹೆಚ್ಚು ಜನರು ಮೃತಪಟ್ಟಿದ್ದರು. 1985ರ ಗಲಭೆಯ ವೇಳೆ 210 ಜನ ಪ್ರಾಣ ಕಳೆದುಕೊಂಡಿದ್ದರು. 1986ರಲ್ಲಿ 120 ಜನರು ಹತ್ಯೆಯಾದರೆ, 1987ರ ಗಲಭೆಯಲ್ಲಿ 67 ಜನರು ಅಸುನೀಗಿದ್ದರು. 1990ರಲ್ಲಿ ನಡೆದ ಮತ್ತೊಂದು ಕೋಮುದಳ್ಳುರಿಯಲ್ಲಿ 219 ಜನರ ಪ್ರಾಣ ಹೋಗಿತ್ತು. 1992ರಲ್ಲಿ ಭುಗಿಲೆದ್ದ ಕೋಮು ಹಿಂಸಾಚಾರ 441 ಜನರನ್ನು ಬಲಿತೆಗೆದುಕೊಂಡಿತ್ತು. 1993ರಲ್ಲಿ 116 ಜನರು ಸಾವನ್ನಪ್ಪಿದ್ದರು. ಸರಕಾರಿ ದಾಖಲೆಗಳ ಪ್ರಕಾರ 1970ರಿಂದೀಚೆಗೆ ಗುಜರಾತ್‌ನಲ್ಲಿ 440 ಕೋಮು ಗಲಭೆಗಳು ಸಂಭವಿಸಿವೆ!

### ಮೊದಲ ಆದಿವಾಸಿ ಮುಖ್ಯಮಂತ್ರಿಯೆನಿಸಿದ ಅಮರ್‌ಸಿನ್ಹ ಚೌಧರಿ:

ಮಾಧವಸಿನ್ಹ ಸೋಳಂಕಿ ರಾಜೀನಾಮೆ ನೀಡಿದರು. ಅದರೊಂದಿಗೆ ಹೊಸ ಸರಕಾರವೂ ಅಧಿಕಾರಕ್ಕೆ ಬಂದಿತು. ಅಮರ್‌ಸಿನ್ಹ ಚೌಧರಿ ಮುಖ್ಯಮಂತ್ರಿಯಾದರು. ಅವರು ರಾಜ್ಯದ

ಮೊದಲ ಆದಿವಾಸಿ ಮುಖ್ಯಮಂತ್ರಿ. ಆದರೆ ಕಾಂಗ್ರೆಸ್ ಪಕ್ಷ ಇಬ್ಭಾಗವಾಯಿತು. ಆಡಳಿತಶಾಹಿಯಲ್ಲಿಯೂ ಒಡಕುಂಟಾಯಿತು. ಮಾಧವಸಿನ್ಹ ಸೋಳಂಕಿಯವರಿಗೆ ಆಪ್ತರಾಗಿದ್ದರೆನ್ನಲಾದ ಸರಕಾರಿ ಹಾಗೂ ಪೊಲೀಸ್ ಅಧಿಕಾರಿಗಳನ್ನು ಸಸ್ಪೆಂಡ್ ಮಾಡಲಾಯಿತು. ವರ್ಷ ಕಳೆಯುವಷ್ಟರಲ್ಲಿ (1986, ಜುಲೈ) ಮತ್ತೆ ಹಿಂಸಾಚಾರ ಪ್ರಾರಂಭವಾಯಿತು. 1987ರ ವೇಳೆಗಂತೂ ಗುಜರಾತ್ ರಾಜ್ಯದ ಕಾನೂನು ವ್ಯವಸ್ಥೆ ಸಂಪೂರ್ಣವಾಗಿ ಹದಗೆಟ್ಟಿತು. ಕೇಂದ್ರ ಸರಕಾರಕ್ಕೆ ಗುಜರಾತ್ ದೊಡ್ಡ ತಲೆನೋವಾಯಿತು. ಒಂದೆಡೆ ರಾಜ್ಯಾದ್ಯಂತ ಕೋಮು ಹಿಂಸಾಚಾರ ನಡೆಯುತ್ತಿದ್ದರೆ, ಇನ್ನೊಂದೆಡೆ ಮುಖ್ಯಮಂತ್ರಿ ಅಮರ್‌ಸಿನ್ಹ ಚೌಧರಿಯವರು ತಮ್ಮ ಕ್ಯಾಬಿನೆಟ್‌ನಲ್ಲಿದ್ದ ಆರು ಜನ ಸಹೋದ್ಯೋಗಿ ಮಂತ್ರಿಗಳ ಜತೆ ಮಾತನ್ನೇ ಆಡುತ್ತಿರಲಿಲ್ಲ. ಅಷ್ಟರಮಟ್ಟಿಗೆ ಸಂಬಂಧ ಹಳಸಿತ್ತು. 1986 ಮತ್ತು 1988ರ ನಡುವೆ ನೂರಕ್ಕೂ ಹೆಚ್ಚು ಬಾಂಬ್‌ಸ್ಫೋಟಗಳಾದವು. ಅವುಗಳಲ್ಲಿ ಹೆಚ್ಚಿನವು ಸೌರಾಷ್ಟ್ರದಲ್ಲಿ ಸಂಭವಿಸಿದವು. 1988 ಜುಲೈನಲ್ಲಿ 60 ಸಾವಿರ ಪೊಲೀಸರು ದಂಗೆಯೆದ್ದರು. ಪೊಲೀಸರನ್ನು ಕೂಡ ಜಾತಿ, ಭಾಷೆ ಹಾಗೂ ಸಮುದಾಯದ ಆಧಾರದ ಮೇಲೆ ಒಡೆಯಲಾಗಿತ್ತು. ಹೀಗಾಗಿ ಶೇ. 40ರಷ್ಟು ಪೊಲೀಸರು ಕರ್ತವ್ಯ ನಿರ್ವಹಿಸಲು ನಿರಾಕರಿಸಿದರು. ಅರೆಸೇನಾ ಪಡೆಗಳನ್ನು ಕರೆಸಬೇಕಾಗಿ ಬಂತು. ಕಠಿಣ ಕ್ರಮ ಕೈಗೊಳ್ಳಬೇಕಾಯಿತು. ಇತ್ತ ಸರಕಾರದ ಇಂತಹ ಕ್ರಮವನ್ನು ಜನತಾ ಪಕ್ಷ ಹಾಗೂ ಬಿಜೆಪಿ ಕೂಡ ಸಮರ್ಥಿಸಿದವು. ಸಾರ್ವಜನಿಕ ಹಿತಾಸಕ್ತಿ ಹಾಗೂ ದೇಶಪ್ರೇಮವೇ ಅಂತಹ ಬೆಂಬಲಕ್ಕೆ ಕಾರಣವಾಗಿತ್ತು. ಹಾಗಾಗಿ ಪರಿಸ್ಥಿತಿಯನ್ನು ನಿಯಂತ್ರಣಕ್ಕೆ ತರಲು ಸಾಧ್ಯವಾಯಿತು. ಮುಷ್ಕರಕ್ಕೆ ಕಾರಣರಾಗಿದ್ದ 87 ಪೊಲೀಸ್ ಅಧಿಕಾರಿಗಳನ್ನು ಬಂಧಿಸಲಾಯಿತು. ಅವರಲ್ಲಿ 26 ಜನರನ್ನು ಕರ್ತವ್ಯದಿಂದಲೇ ವಜಾ ಮಾಡಲಾಯಿತು. 1989ರ ವೇಳೆಗೆ ರಾಜ್ಯ ಕಾಂಗ್ರೆಸ್ ಪಕ್ಷ ಸೋತು ಸುಣ್ಣವಾಗಿತ್ತು. ಚೌಧರಿಯವರನ್ನು ಅಧಿಕಾರದಿಂದ ಇಳಿಸಿ ಮಾಧವಸಿನ್ಹ ಸೋಳಂಕಿಯವರಿಗೆ ಮತ್ತೆ ಮುಖ್ಯಮಂತ್ರಿ ಸ್ಥಾನ ನೀಡಲಾಯಿತು. ಆದರೆ ಪಕ್ಷ ಮಾತ್ರ ಸರಿಪಡಿಸಲಾರದಷ್ಟು ಜರ್ಜರಿತವಾಗಿತ್ತು. ಚುನಾವಣೆಯಲ್ಲಿ ಕಾಂಗ್ರೆಸ್ ಹೀನಾಯ ಸೋಲನುಭವಿಸಿದರೆ, ಬಿಜೆಪಿ-ಜನತಾದಳ ಮತ್ತೆ ಅಧಿಕಾರಕ್ಕೇರಿದವು. 1990 ಮೇನಲ್ಲಿ ಚಿಮಣ್‌ಭಾಯಿ ಪಟೇಲ್ ನೇತೃತ್ವದ ಹೊಸ ಸರಕಾರ ಅಸ್ತಿತ್ವಕ್ಕೆ ಬಂತು. ಆದರೆ ಕಾಂಗ್ರೆಸ್‌ನ ಅಧಿಕಾರಾವಧಿಯ ದಿನಗಳನ್ನು ಸಿಂಹಾವಲೋಕನ ಮಾಡಿದಾಗ ಕಾಂಗ್ರೆಸ್ ನಾಯಕರ ಅಸಮರ್ಥತೆಯ ಬಗ್ಗೆ ಆಶ್ಚರ್ಯವಾಗುತ್ತದೆ. ಕಾಂಗ್ರೆಸ್ ಹುಟ್ಟುಹಾಕಿದ ಜಾತಿ ರಾಜಕಾರಣ ಹಿಂಸಾಚಾರಕ್ಕೆ ಆಹ್ವಾನ ನೀಡಿತ್ತು. ಹಿಂದೂ ಸಮಾಜ ಒಡೆದು ಚೂರಾಗಿತ್ತು. ಭ್ರಷ್ಟಾಚಾರ ಸರ್ವವ್ಯಾಪಿಯಾಗಿತ್ತು. ಆಳುವವರು ಇದ್ದಾರೆಯೋ ಎಂಬ ಬಗ್ಗೆಯೇ ಅನು





ಮಾನವುಂಟಾಗುವಷ್ಟು ವ್ಯವಸ್ಥೆ ಹದಗೆಟ್ಟಿತ್ತು. ಇಂತಹ ಪರಿಸ್ಥಿತಿಯನ್ನು ಕಣ್ಣಾರೆ ಕಂಡವರು ಗುಜರಾತ್ ಉಳಿದಿದ್ದೇ ಆಶ್ಚರ್ಯ ಎನ್ನುತ್ತಾರೆ. ಹೀಗೆ ಅವಸಾನದಂಚಿಗೆ ತಲುಪಿದ್ದ ಗುಜರಾತನ್ನು ಅಭಿವೃದ್ಧಿಯ ಪಥದತ್ತ ಕೊಂಡೊಯ್ದದ್ದೇ ನರೇಂದ್ರ ಮೋದಿ!

ಆದರೆ 1985ರವರೆಗೂ ನರೇಂದ್ರ ಮೋದಿಯವರು ರಾಜಕೀಯರಂಗಕ್ಕೇ ಬಂದಿರಲಿಲ್ಲ. 1985, ಜುಲೈ 15ರಂದು ಲಕ್ಷ್ಮಣ್‌ರಾವ್ ಇನಾಂದಾರ್(ವಕೀಲ್ ಸಾಹೇಬ್) ತೀರಿಕೊಂಡಾಗ ಅದು ಸಂಘಪರಿವಾರಕ್ಕೆ ತುಂಬಲಾರದ ನಷ್ಟವಾಗಿತ್ತು. ಇಂತಹ ಸಂದಿಗ್ಧ ಸನ್ನಿವೇಶದಲ್ಲಿ 35 ವರ್ಷದ ನರೇಂದ್ರ ಮೋದಿ ತಮ್ಮ ಗುರು ವಕೀಲ್ ಸಾಹೇಬರು ನಿರ್ವಹಿಸುತ್ತಿದ್ದ ಜವಾಬ್ದಾರಿಯನ್ನು ತಾವೇ ವಹಿಸಿಕೊಂಡರು.





## 14
## 1969ರ
## ಕರಾಳ ನೆನಪು

ಒಂದು ವೇಳೆ ಆ ಕಾಲದಲ್ಲಿ ಈಗಿನಂತೆ ಖಾಸಗಿ ಟಿವಿ ಮಾಧ್ಯಮಗಳಿದ್ದಿದ್ದರೆ, ಅಂದಿನ ದಳ್ಳುರಿಯ ಚಿತ್ರಣವನ್ನು ಸೆರೆಹಿಡಿದಿಟ್ಟಿದ್ದಿದ್ದರೆ 1969, ಅಕ್ಟೋಬರ್‌ನಲ್ಲಿ ನಡೆದ ಕೋಮು ಗಲಭೆ 2002ರ ಹಿಂಸಾಚಾರಕ್ಕಿಂತಲೂ ಖಂಡಿತ ಘೋರವೆನಿಸುತ್ತಿತ್ತು. ಆ ಕ್ರೂರ ದಳ್ಳುರಿ ನಡೆದಾಗ ಕಾಂಗ್ರೆಸ್ ಅಧಿಕಾರದಲ್ಲಿತ್ತು. 1967ರಲ್ಲಿ ನಡೆದ ಚುನಾವಣೆಯ ನಂತರ ಹಿತೇಂದ್ರ ದೇಸಾಯಿ ಗುಜರಾತ್‌ನ ಮುಖ್ಯಮಂತ್ರಿಯಾದರು. ಆದರೆ ಚುನಾವಣೆಯ ನಂತರ ಪರಿಸ್ಥಿತಿ ಹದಗೆಡಲಾರಂಭಿಸಿತು. ರಾಜಕೀಯ ವ್ಯವಸ್ಥೆ ಮತ್ತು ರಾಜಕೀಯ ಪ್ರಕ್ರಿಯೆ ಕುಸಿಯಲಾರಂಭಿಸಿತು. ಸರಕಾರ ಬೀಳುವ ಹಂತಕ್ಕೆ ಬಂದು ತಲುಪಿತು. ಅರಾಜಕ ಪರಿಸ್ಥಿತಿ ಸೃಷ್ಟಿಯಾಗತೊಡಗಿತು. ಕಾಂಗ್ರೆಸ್ ನಾಯಕರು ಪರಸ್ಪರ ಕಚ್ಚಾಟದಲ್ಲಿ ತೊಡಗಿದ್ದರು. ಗುಜರಾತ್‌ನ ಖ್ಯಾತ ನಾಯಕ ಮೊರಾರ್ಜಿ ದೇಸಾಯಿ ಅವರನ್ನೇ ಮೂಲೆಗುಂಪು ಮಾಡಲಾಗಿತ್ತು. ಹೀಗೆ ಹಿತೇಂದ್ರ ದೇಸಾಯಿಯವರ ಸಂಪುಟ ಹಲವಾರು ಅಡೆತಡೆಗಳನ್ನು ದಾಟಬೇಕಾಗಿ ಬಂತು. ಸತ್ವಪರೀಕ್ಷೆ ಎದುರಿಸಬೇಕಾಯಿತು. ಆದರೆ ಪ್ರತಿಪಕ್ಷಗಳೂ ಪರಸ್ಪರ ಕಚ್ಚಾಟದಲ್ಲಿ ತೊಡಗಿದ್ದ ಕಾರಣ ಕಾಂಗ್ರೆಸ್ ಸರಕಾರ ಅಧಿಕಾರದಲ್ಲಿಯೇ ಮುಂದುವರಿಯುವಂತಾಯಿತು. ಎಡಪಕ್ಷಗಳು ಸ್ವತಂತ್ರ ಪಾರ್ಟಿಯೊಂದಿಗೆ ಸಹಕರಿಸಲು ನಿರಾಕರಿಸಿದರೆ, ಮೂವರು ಪಕ್ಷೇತರ ಶಾಸಕರು ಮನಸೋಇಚ್ಛೆ ವರ್ತಿಸಲಾರಂಭಿಸಿದರು. ಇಂತಹ ಸಂದರ್ಭವನ್ನು ಮುಖ್ಯಮಂತ್ರಿ ಹಿತೇಂದ್ರ ದೇಸಾಯಿ ಜಾಣತನದಿಂದ ಸದುಪಯೋಗಪಡಿಸಿಕೊಂಡರು.

ಅದೇ ಸಂದರ್ಭದಲ್ಲಿ ಗುಜರಾತ್ ಅಂತಾರಾಷ್ಟ್ರೀಯ ಮಟ್ಟದಲ್ಲಿ ಸುದ್ದಿ ಮಾಡಿತು.

ಪಾಕ್-ಕಛ್ ಗಡಿವಿವಾದಕ್ಕೆ ಸಂಬಂಧಿಸಿದಂತೆ ಅಂತಾರಾಷ್ಟ್ರೀಯ ನ್ಯಾಯಾಲಯ

1968ರಲ್ಲಿ ಪಾಕಿಸ್ತಾನದ ಪರ ತೀರ್ಪು ನೀಡಿತು. ಕಛ್‌ನ ಒಂದು ಭಾಗವನ್ನು ಪಾಕಿಸ್ತಾನಕ್ಕೆ ನೀಡಬೇಕಾಗಿ ಬಂತು. ಇತ್ತ ಭಾರತ ಸರಕಾರವೂ ಬಿಟ್ಟುಕೊಡಲು ಸಿದ್ಧವಾಯಿತು. ಇಂತಹ ನಿರ್ಧಾರದ ವಿರುದ್ಧ ಗುಜರಾತ್‌ನಾದ್ಯಂತ ಪ್ರತಿಭಟನೆಗಳಾದವು. 1969ರ ಮಾರ್ಚ್‌ನಲ್ಲಿ ಭಾರತ ಮತ್ತು ಪಾಕಿಸ್ತಾನಗಳು ಒಪ್ಪಂದ ಮಾಡಿಕೊಂಡು ಹೊಸ ಗಡಿಯನ್ನು ಗುರುತಿಸುವ ನಿರ್ಧಾರಕ್ಕೆ ಬಂದವು. ಹಾಗಾಗಿ ಉದ್ವಿಗ್ನತೆ ಮತ್ತೆ ಹೆಚ್ಚಾಯಿತು. ಇಷ್ಟಾಗಿಯೂ ಸ್ಥಿರ ಸರಕಾರಗಳನ್ನು ಉರುಳಿಸಲು ಪ್ರಯತ್ನಿಸಬಾರದು ಎಂದು ಸ್ವತಂತ್ರ ಪಕ್ಷ ತೆಗೆದುಕೊಂಡ ನಿರ್ಧಾರದಿಂದಾಗಿ ರಾಜ್ಯ ಕಾಂಗ್ರೆಸ್ ಸರಕಾರ ಅಧಿಕಾರದಲ್ಲಿ ಮುಂದುವರಿಯಲು ಅವಕಾಶವಾಯಿತು. ಜತೆಗೆ ಇತರ ಪಕ್ಷಗಳ ಶಾಸಕರೂ ಕೂಡ ಬಂಡಾಯವೆದ್ದು ಕಾಂಗ್ರೆಸ್ ಸೇರತೊಡಗಿದರು. ಆದರಿಂದ ಕಾಂಗ್ರೆಸ್‌ಗೆ ಹೆಚ್ಚು ಲಾಭವೇನೂ ಆಗಲಿಲ್ಲ, ಒಳಜಗಳ ಪ್ರತಿ ಹಂತದಲ್ಲೂ ಪ್ರಾರಂಭವಾಯಿತು. ಅಂತಿಮವಾಗಿ ಕಾಂಗ್ರೆಸ್ ಇಬ್ಭಾಗವಾಗುವ ಹಂತಕ್ಕೆ ಬಂತು. ಈ ಹಂತದಲ್ಲಿ ಭುಗಿಲೆದ್ದ ಕೋಮು ಹಿಂಸಾಚಾರ ರಾಜಕೀಯ ಅಸ್ಥಿರತೆಯನ್ನು ಮರೆಮಾಚಿತು. ಇಸ್ರೇಲ್‌ನ ಜೆರುಸಲೇಮ್‌ನಲ್ಲಿರುವ ಅಲ್ ಅಕ್ಸಾ ಮಸೀದಿಯನ್ನು ಕೆಡವಿದ್ದಾರೆ ಎಂಬ ವದಂತಿ ಹರಡಿದ ಕಾರಣ ಗುಜರಾತ್‌ನ ಮುಸ್ಲಿಮರು ರೊಚ್ಚಿಗೆದ್ದು ಬೀದಿಗಿಳಿದರು. ಹದಗೆಡುತ್ತಿರುವ ಕೋಮುಸೌಹಾರ್ದತೆಯ ಬಗ್ಗೆ ನಿಗಾ ಇಡಬೇಕೆಂದು 1969, ಏಪ್ರಿಲ್‌ನಲ್ಲಿಯೇ ಕೇಂದ್ರ ಸರಕಾರ ಎಲ್ಲ ರಾಜ್ಯಗಳಿಗೂ ಎಚ್ಚರಿಕೆ ನೀಡಿತ್ತು. ಕೇಂದ್ರದ ಎಚ್ಚರಿಕೆಯನ್ನು ಗುಜರಾತ್ ಗಂಭೀರವಾಗಿ ಪರಿಗಣಿಸಿರಲಿಲ್ಲ, ಗುಜರಾತ್ ಸಾಂಪ್ರದಾಯಿಕವಾಗಿ ಕೋಮು ಹಿಂಸಾಚಾರ ಮುಕ್ತ ರಾಜ್ಯ ಎಂದು ರಾಜ್ಯ ಕಾರ್ಯದರ್ಶಿ ಕೇಂದ್ರಕ್ಕೆ ಪತ್ರ ಬರೆದಿದ್ದರು. ಇಂತಹ ಬೇಜವಾಬ್ದಾರಿತನಕ್ಕೆ ದೊಡ್ಡ ಬೆಲೆ ತೆರಬೇಕಾಗಿ ಬಂತು. 1969, ಸೆಪ್ಟೆಂಬರ್ 18ರಂದು ಮಸೀದಿಯೊಂದರ ಬಳಿ ಅಪಾರ ಸಂಖ್ಯೆಯ ಮುಸ್ಲಿಮರು ನೆರೆದಿದ್ದರು. ಆ ಮಸೀದಿ ಬಳಿಯೇ ಜಗನ್ನಾಥ ದೇವಾಲಯವೂ ಇದೆ. ಅದು ಹಿಂದುಗಳಿಗೆ ಅತ್ಯಂತ ಪವಿತ್ರವಾದ ಸ್ಥಳ. ಎಂದಿನಂತೆ ಸಂಜೆ ನಾಲ್ಕು ಗಂಟೆಯ ವೇಳೆಗೆ ಸಾಧು-ಸಂತರು ಹಸುಗಳೊಂದಿಗೆ ದೇವಾಲಯಕ್ಕೆ ಮರಳುತ್ತಿದ್ದರು. ಹಾಗೆ ಮರಳುತ್ತಿದ್ದ ಹಸುಗಳು ನೆರೆದ ಜನಸ್ತೋಮದ ನಡುವೆ ಸಾಗುವಾಗ ಮುಸ್ಲಿಮರು ತಗಾದೆ ತೆಗೆದರು. ಸಾಧುಗಳ ಮೇಲೆ ಆಕ್ರಮಣ ನಡೆಯಿತು. ದೇವಾಲಯದ ಕಿಟಕಿಗಳನ್ನು ಧ್ವಂಸಗೊಳಿಸಲಾಯಿತು. ಆದರೆ ಅನಗತ್ಯವಾಗಿ ವಿವಾದವೆದ್ದಿದೆ ಎಂಬುದನ್ನು ಅರಿತ ಕೆಲ ಮುಸ್ಲಿಂ ನಾಯಕರು ಸಂಜೆ ವೇಳೆಗೆ ಕ್ಷಮೆ ಯಾಚಿಸಿದರು. ಮರುದಿನ ಪ್ರಕಟವಾದ ಸ್ಥಳೀಯ ಪತ್ರಿಕಾ ವರದಿಗಳಲ್ಲಿ ದೇವಾಲಯದ ಮೇಲೆ ಹೇಗೆ, ಯಾವ ಕಾರಣಕ್ಕಾಗಿ ಆಕ್ರಮಣ ನಡೆಯಿತು ಎಂಬ ಬಗ್ಗೆ ಕೂಲಂಕಷವಾಗಿ





ವಿವರಿಸಲಾಗಿತ್ತು. ಆದರೆ ಸಾಧುಗಳ ಮೇಲಿನ ಆಕ್ರಮಣಕ್ಕೆ ಕಾರಣರಾಗಿದ್ದ ಮುಸ್ಲಿಂ ಯುವಕರ ಪರವಾಗಿ ಕ್ಷಮೆ ಯಾಚಿಸಿದ್ದನ್ನು ಪ್ರಕಟಿಸಿರಲಿಲ್ಲ. ವರದಿಯನ್ನು ಓದಿ ಕುಪಿತರಾದ ಹಿಂದೂಗಳು ಮುಸ್ಲಿಮರ ಗೋರಿಯೊಂದನ್ನು ನಾಶಪಡಿಸಿದರು. ಪ್ರತೀಕಾರಕ್ಕೆ ಮುಂದಾದ ಮುಸ್ಲಿಮರು ದೇವಾಲಯದ ಮುಂದೆ ಘೋಷಣೆ ಕೂಗಿದರು. ಅದೇ ವೇಳೆಗೆ ಜಗನ್ನಾಥ ದೇವಾಲಯದ ಅರ್ಚಕರ ಮೇಲೆ ದಾಳಿ ನಡೆದಿದೆ ಎಂಬ ಸುಳ್ಳು ವದಂತಿ ಹಬ್ಬಿತು.

ಸೆಪ್ಟೆಂಬರ್ 18ರ ಮಧ್ಯಾಹ್ನದ ವೇಳೆಗೆ ಕೋಮು ಹಿಂಸಾಚಾರ ಮತ್ತು ಹತ್ಯೆ ಆರಂಭವಾಯಿತು. ಪರಿಸ್ಥಿತಿಯನ್ನು ನಿಯಂತ್ರಣಕ್ಕೆ ತರುವಲ್ಲಿ ವಿಫಲರಾಗಿದ್ದೇವೆ ಎಂಬುದನ್ನು ಪೊಲೀಸರೂ ಕೂಡ ಒಪ್ಪಿಕೊಂಡರು. ಸೆಪ್ಟೆಂಬರ್ 23ರ ವೇಳೆಗೆ ಹಿಂಸಾಚಾರ ಅಂತ್ಯಗೊಂಡಿತು. ಆದರೆ ನಾಲ್ಕು ದಿನಗಳ ದಳ್ಳುರಿಯಲ್ಲಿ ಸಂಭವಿಸಿದ ಸಾವು-ನೋವು ದಿಗ್ಭ್ರಮೆ ಹುಟ್ಟಿಸುವಂತಿತ್ತು. 1969ರಿಂದೀಚೆಗೆ ಅಂತಹ ಕೋಮು ದಳ್ಳುರಿ ಗುಜರಾತ್‌ನಲ್ಲೇ ಸಂಭವಿಸಿಲ್ಲ. ಕೇವಲ ಒಂದೆರಡು ದಿನಗಳಲ್ಲಿ 2000ಕ್ಕೂ ಹೆಚ್ಚು ಜನರು ಮೃತರಾಗಿದ್ದರು. 4000 ಜನರು ಗಾಯಗೊಂಡರೆ, 50 ಸಾವಿರ ಜನರು ಮನೆ ಮಠ ಕಳೆದುಕೊಂಡು ಬೀದಿಗೆ ಬಂದರು. ಸೇನೆಯನ್ನು ಕರೆಸಬೇಕಾಗಿ ಬಂತು. ಅಹಮದಾಬಾದ್ ನಗರ ಕೋಮು ಹಿಂಸಾಚಾರದ ಸಲುವಾಗಿ ಕುಖ್ಯಾತಿ ಪಡೆಯಿತು. ಭಾರತದಲ್ಲಷ್ಟೇ ಅಲ್ಲ, ಇಸ್ಲಾಮಿಕ್ ರಾಷ್ಟ್ರಗಳಲ್ಲೂ ಅಹಮದಾಬಾದ್ ಕೆಟ್ಟ ಹೆಸರು ಪಡೆದುಕೊಂಡಿತು! ಈ ಘಟನೆಯ ಬಗ್ಗೆ ತನಿಖೆ ನಡೆಸುವ ಸಲುವಾಗಿ ಜಗಮೋಹನ್ ರೆಡ್ಡಿ ನೇತೃತ್ವದಲ್ಲಿ ನ್ಯಾಯಾಂಗೀಯ ಆಯೋಗವೊಂದನ್ನು ರಚಿಸಲಾಯಿತು. ಜನಸಂಘ, ಆರೆಸ್ಸೆಸ್ ಹಾಗೂ ಹಿಂದೂ ಮಹಾಸಭಾದತ್ತ ಆಯೋಗ ಬೊಟ್ಟುಮಾಡಿತು. ಪೊಲೀಸರನ್ನೂ ಟೀಕಿಸಿತು. ಆದರೇನಂತೆ ಕೋಮು ಹಿಂಸಾಚಾರಕ್ಕೆ ಸಿಲುಕಿ ತತ್ತರಿಸಿಹೋಗಿದ್ದ ಅಹಮದಾಬಾದ್, ಬರೋಡಾ, ಮೆಹ್‌ಸಾನಾ, ಆನಂದ್, ಗೊಂದಾಲ್, ನದಿಯಾದ್‌ಗಳಲ್ಲಿ ಪರಿಹಾರ ಕಾರ್ಯವನ್ನು ಆರಂಭಿಸಿದ್ದೇ ಆರೆಸ್ಸೆಸ್. ಜಗನ್ನಾಥ್ ರೆಡ್ಡಿ ಆಯೋಗ ಆರೆಸ್ಸೆಸ್ ಮತ್ತು ಜನಸಂಘವನ್ನು ದೂರಿದರೂ ಕೋಮು ಹಿಂಸಾಚಾರದ ನಂತರ ಜನರ ನೋವಿಗೆ ಸ್ಪಂದಿಸಿದ ಈ ಸಂಘಟನೆಗಳು ಇನ್ನೂ ಬಲಿಷ್ಠವಾಗಿ ಹೊರಹೊಮ್ಮಿದವು. ಆಳುವ ಕಾಂಗ್ರೆಸ್ ಸರಕಾರ ತನ್ನ ಕರ್ತವ್ಯವನ್ನು ನಿರ್ವಹಿಸುವಲ್ಲಿ ಸಂಪೂರ್ಣವಾಗಿ ವಿಫಲಗೊಂಡಿತು. ಹಿಂಸಾಚಾರ ಭುಗಿಲೆದ್ದಾಗ ಒಬ್ಬ ಕಾಂಗ್ರೆಸ್ ನಾಯಕನೂ ಕಣ್ಣಿಗೆ ಕಾಣುತ್ತಿರಲಿಲ್ಲ. ಹಿಂಸಾಚಾರವನ್ನು ತಣ್ಣಗಾಗಿಸಲು ಯಾವ ಕಾಂಗ್ರೆಸ್ ಕಾರ್ಯಕರ್ತರೂ ಪ್ರಯತ್ನಿಸಲಿಲ್ಲ. ಗಾಂಧೀಜಿ ಹಾಗೂ ಸರ್ದಾರ್ ಪಟೇಲ್ ನಂತರ ಗುಜರಾತ್‌ನ ಅತಿ ದೊಡ್ಡ ನಾಯಕರೆನಿಸಿದ್ದ ಮೊರಾರ್ಜಿ ದೇಸಾಯಿಯವರು ಆಗಮಿಸಿದಾಗ ಹಿಂಸಾಚಾರ ಪ್ರಾರಂಭವಾಗಿ ನಾಲ್ಕು

ದಿನಗಳಾಗಿದ್ದವು. ಕಾಂಗ್ರೆಸ್ಸಿಗರು ಹಿಂಸಾಚಾರದಲ್ಲಿ ಭಾಗಿಯಾಗದಿದ್ದರೂ ಅವರ ಕರ್ತವ್ಯ ಚ್ಯುತಿ ಹಿಂಸಾಚಾರ ಹೆಚ್ಚಾಗಲು ಖಂಡಿತ ಕಾರಣವಾಗಿತ್ತು.

**ಜಗನ್ನಾಥ ರೆಡ್ಡಿ ಆಯೋಗದ ವರದಿ, ಹುಸಿ ಆರೋಪಗಳ ಸರದಿ:**

1969ರ ಕೋಮು ಹಿಂಸಾಚಾರಕ್ಕೆ ಕಾರಣ ಯಾರು? ಜನರನ್ನು ಪ್ರಚೋದಿಸಿದವರಾರು? ಈ ಬಗ್ಗೆ ತನಿಖೆ ನಡೆಸಲು ರಚನೆಯಾದ ಜಗನ್ನಾಥ ರೆಡ್ಡಿ ಆಯೋಗ ಬೃಹತ್ ಗಾತ್ರದ ವರದಿಯನ್ನೇ ಸಲ್ಲಿಸಿತು. 306 ಪುಟಗಳನ್ನು ಹೊಂದಿದ್ದ ಆ ವರದಿಯಲ್ಲಿ 2,84,000 ಪದಗಳಿದ್ದವು! ಆಯೋಗದಲ್ಲಿ ಜಗನ್ನಾಥ ರೆಡ್ಡಿಯವರಲ್ಲದೆ ಗುಜರಾತ್ ಹೈಕೋರ್ಟ್‌ನ ನ್ಯಾಯಮೂರ್ತಿಗಳಾಗಿದ್ದ ನಸರ್‌ವಾಂಜಿ ಕೆ. ವಕೀಲ್ ಮತ್ತು ಅಕ್ಬರ್ ಎಸ್. ಸರೇಲಾ ಎಂಬ ಇನ್ನಿಬ್ಬರು ಸದಸ್ಯರಿದ್ದರು. ಅವರು ಜನಸಂಘ ಹಾಗೂ ಆರೆಸ್ಸೆಸ್‌ನ ಪಾತ್ರದ ಬಗ್ಗೆ ಕಟುವಾದ ಟೀಕೆ ಮಾಡದೇ ಇರಲು ಸಾಧ್ಯವೇ ಇರಲಿಲ್ಲ.

1. ಪೊಲೀಸ್ ಠಾಣೆಯಲ್ಲಿ ದಾಖಲಾಗದ ಘಟನೆಗಳ ಬಗ್ಗೆ ಏನನ್ನೂ ಹೇಳುವುದಕ್ಕಾಗುವುದಿಲ್ಲ ಎನ್ನುತ್ತಾರೆ ಪೊಲೀಸ್ ಕಮೀಷನರ್. ಆದರೆ ದೂರು ನೀಡಲು ಹೋದ ಮುಸ್ಲಿಮರನ್ನು ಪೊಲೀಸರೇ ಗದರಿಸಿ ಕಳುಹಿಸಿದ್ದಾರೆ ಎಂದು ಮುಸ್ಲಿಂ ಸಂಘಟನೆಗಳು ಬಲವಾದ ಆರೋಪ ಮಾಡಿವೆ.

2. ಕೇವಲ 50-60 ಜನರ ಗುಂಪೊಂದು ದಾಂಧಲೆಯಲ್ಲಿ ತೊಡಗಿತ್ತು ಎಂದು ಪೊಲೀಸ್ ಕಮೀಷನರ್ ವ್ಯಾಸ್ ಪ್ರಾರಂಭದಲ್ಲಿ ಹೇಳಿದ್ದರು. ಆದರೆ ಒತ್ತಡ ಬಿದ್ದ ಕೂಡಲೇ 2000ದಿಂದ 4000 ಜನರು ದೊಂಬಿಯಲ್ಲಿ ತೊಡಗಿದ್ದರು ಎಂದು ಸಾಕ್ಷ್ಯ ಹೇಳಿದ್ದಾರೆ. ಪೊಲೀಸರು ಕೂಡ ಭಾಗಿಯಾಗಿದ್ದರು ಎಂಬುದು ಇದರಿಂದ ತಿಳಿಯುತ್ತದೆ.

ಈ ರೀತಿ ಇರುವ ಜಗನ್ನಾಥ ರೆಡ್ಡಿ ಆಯೋಗದ ವರದಿಯನ್ನು ಓದುತ್ತಾ ಹೋದರೆ 2002ರಲ್ಲಿ ನಡೆದ ಗುಜರಾತ್ ಕೋಮು ಹಿಂಸಾಚಾರದ ವರದಿಯನ್ನು ಓದುತ್ತಿದ್ದೇವೆಂಬ ಅನುಮಾನ ಸೃಷ್ಟಿಯಾದರೂ ಸೃಷ್ಟಿಯಾದೀತು. ಮೋದಿ ಬಗ್ಗೆ ಮಾಧ್ಯಮಗಳು ಯಾವ ಮಾತುಗಳ ನ್ನಾಡಿದವೋ ಅದೇ ಮಾತುಗಳು ಅಂದಿನ ಕಾಂಗ್ರೆಸ್ ಮುಖ್ಯಮಂತ್ರಿ ಹಿತೇಂದ್ರ ದೇಸಾಯಿಯವರಿಗೂ ಅನ್ವಯವಾಗುತ್ತವೆ.

1969ರ ಕೋಮು ಹಿಂಸಾಚಾರ ಹಾಗೂ 2002ರ ಗುಜರಾತ್ ದಳ್ಳುರಿಗಳೆರಡನ್ನೂ ಹೋಲಿಸಿ ನೋಡಿ. ದೇಸಾಯಿ ಮತ್ತು ಮೋದಿ ಸ್ಪಂದಿಸಿದ ವಿಧಾನವನ್ನು ಗಮನಿಸಿ. 1969ರಲ್ಲಿ ಹಿಂಸಾಚಾರ ಭುಗಿಲೆದ್ದಿದ್ದು ಸೆಪ್ಟೆಂಬರ್ 18ರಂದು. ಗಡಿ ಭದ್ರತಾ ಪಡೆ(ಬಿಎಸ್‌ಎಫ್) ಯನ್ನು





ಕರೆಸಿದ್ದು 20ರಂದು. ಅಂದರೆ ಹಿಂಸಾಚಾರ ಪ್ರಾರಂಭವಾಗಿ ಎರಡು ದಿನಗಳ ನಂತರ. ಇದಕ್ಕೆ ತದ್ವಿರುದ್ಧವೆಂಬಂತೆ 2002, ಫೆಬ್ರವರಿ 27ರಂದು ಹಿಂಸಾಚಾರ ಭುಗಿಲೆದ್ದ 24 ಗಂಟೆಗಳಲ್ಲಿ ಮೋದಿ ಸೇನೆಯನ್ನು ಕರೆಸಿದರು. ಕರಸೇವಕರನ್ನು ಸಜೀವ ದಹನ ಘಟನೆ ಸಂಭವಿಸಿದ ಕೂಡಲೇ ಅಪಾಯವನ್ನು ಅರಿತ ಅವರು, ರಾಜ್ಯಾದ್ಯಂತ ಕಟ್ಟೆಚ್ಚರ ವಹಿಸುವಂತೆ ಆದೇಶ ನೀಡಿದರು. ಸಾಬರಮತಿ ರೈಲಿನಲ್ಲಿ ಸುಟ್ಟು ಕರಕಲಾಗಿದ್ದ ದೇಹಗಳನ್ನು ಅಹಮದಾಬಾದ್‌ನ ಸರಕಾರಿ ಆಸ್ಪತ್ರೆಯ ಬದಲು ದೂರದ ಸೋಲಾದಲ್ಲಿರುವ ಆಸ್ಪತ್ರೆಗೆ ಸಾಗಿಸುವಂತೆ ಸೂಚನೆ ನೀಡಿದರು. ಏಕೆಂದರೆ ಮೃತ ದೇಹಗಳನ್ನು ಅಹಮದಾಬಾದ್‌ಗೆ ತಂದರೆ ಅವುಗಳನ್ನು ನೋಡಿ ಜನ ರೊಚ್ಚಿಗೇಳಬಹುದು ಎಂಬ ಮುಂದಾಲೋಚನೆ ಮೋದಿಯವರಲ್ಲಿತ್ತು. ಅಷ್ಟೇ ಅಲ್ಲ, ಫೆಬ್ರವರಿ 27ರಂದೇ ಗೋಧ್ರಾದಲ್ಲಿ ಕರ್ಫ್ಯೂ ವಿಧಿಸಿದರು. 28ರಂದು ವಡೋದರಾ, ಅಹಮದಾಬಾದ್, ಸಬರ್‌ಕಾಂತಾ ಮುಂತಾದ ಹಲವಾರು ಸೂಕ್ಷ್ಮ ನಗರಗಳಿಗೂ ಕರ್ಫ್ಯೂವನ್ನು ವಿಸ್ತರಿಸಿದರು. ಫೆಬ್ರವರಿ 27ರ ಮಧ್ಯಾಹ್ನದ ವೇಳೆಗೆ ಅಹಮದಾಬಾದ್, ಗೋಧ್ರಾ ಮತ್ತು ವಡೋದರಾದಲ್ಲಿ ಶೀಘ್ರ ಪ್ರಹಾರದಳವನ್ನು ನಿಯೋಜನೆ ಮಾಡಲಾಯಿತು.

ಪೊಲೀಸರು ಸುಮಾರು 10 ಸಾವಿರ ಸುತ್ತು ಗುಂಡು ಹಾರಿಸಿದರು. ಪೊಲೀಸ್ ಗೋಲಿಬಾರ್‌ನಲ್ಲಿ 204 ಜನ ಮಡಿದರು. ಹಿಂಸಾಚಾರಕ್ಕೆ ಸಂಬಂಧಿಸಿದಂತೆ 18 ಸಾವಿರ ಜನರನ್ನು ಬಂಧಿಸಲಾಯಿತು. 30 ಸಾವಿರ ಜನರನ್ನು ಮುಂಜಾಗ್ರತಾ ಕ್ರಮವಾಗಿ ವಶಕ್ಕೆ ತೆಗೆದುಕೊಳ್ಳಲಾಯಿತು. ಬಂಧಿತರಾದ ಒಟ್ಟು 48 ಸಾವಿರ ಜನರಲ್ಲಿ 37,600 ಜನರು ಹಿಂದೂಗಳು. ಹತರಾದ 945 ಜನರಲ್ಲಿ 688 ಮುಸ್ಲಿಮರು ಹಾಗೂ 257 ಹಿಂದೂಗಳು.

ಈಗ ಹೇಳಿ- ನರೇಂದ್ರ ಮೋದಿಯವರ ಸರಕಾರ ಶೀಘ್ರವಾಗಿ ಕಾರ್ಯಪ್ರವೃತ್ತವಾಗಲಿಲ್ಲ, ಪರಿಸ್ಥಿತಿಯನ್ನು ಹತೋಟಿಗೆ ತರಲು ವಿಫಲವಾಯಿತು, ಪರಿಸ್ಥಿತಿಯನ್ನು ಸರಿಯಾಗಿ ನಿಭಾಯಿಸಲಿಲ್ಲ ಎಂದು ಹೇಗೆ ತಾನೇ ಹೇಳಲು ಸಾಧ್ಯ?

ನಿಜ ಸಂಗತಿಯೇನೆಂದರೆ ನಮ್ಮ "ಸೋ ಕಾಲ್ಡ್" ಜಾತ್ಯತೀತ ಮಾಧ್ಯಮಗಳಿಗೆ ಮೋದಿಯವರೆಂದರೆ ಒಂಥರಾ ಕೋಪ. ಪರಿಸ್ಥಿತಿಯನ್ನು ಅವರೆಷ್ಟೇ ಸಮರ್ಥ ವಾಗಿ ನಿಭಾಯಿಸಿದರೂ, ಯಾವುದೇ ಕ್ರಮ ಕೈಗೊಂಡರೂ ಟೀಕಿಸುವುದನ್ನು ಮಾತ್ರ ಬಿಡುವುದಿಲ್ಲ. ಇಷ್ಟಾಗಿಯೂ ನರೇಂದ್ರ ಮೋದಿಯವರು ಇಂದಿಗೂ ಗುಜರಾತ್‌ನ ಮುಖ್ಯಮಂತ್ರಿಯಾಗಿದ್ದಾರೆ. ಚುನಾವಣೆಗಳ ನಂತರ ಚುನಾವಣೆಗಳು ಬಂದರೂ ಗೆಲುವು ಸಾಧಿಸುತ್ತಿದ್ದಾರೆ.

ಏಕೆಂದರೆ ಅವರ ಮೇಲೆ ಗುಜರಾತಿಗಳಿಗೆ ವಿಶ್ವಾಸವಿದೆ.





# 15
## ರಥಯಾತ್ರೆಗಳ ರೂವಾರಿ ಯಾರೆಂದು ತಿಳಿದಿರುವಿರಿ?

'ಇಡೀ ದೇಶಾದ್ಯಂತ ಹುಬ್ಬೇರುವ ಘಟನೆಗಳು ಸಂಭವಿಸುತ್ತಿದ್ದರೂ ನರೇಂದ್ರ ಮೋದಿ ಮಾತ್ರ ಬದಿಯಲ್ಲಿ ನಿಂತು ವೀಕ್ಷಿಸಬೇಕಾಗಿತ್ತು. ಈ ಹಿನ್ನೆಲೆಯಲ್ಲಿ 1987 ಮೋದಿ ಪಾಲಿಗೆ ಬಹುಮುಖ್ಯವಾದ ವರ್ಷವಾಯಿತು. ಅದೊಂದು ಸವಾಲಿನ ಕ್ಷಣವೂ ಹೌದು. ಅವರು "ನ್ಯಾಯ ಯಾತ್ರೆ" ಎಂಬ ಯಾತ್ರೆಯ ಯೋಜನೆಯನ್ನು ರೂಪಿಸಿದರು.

ಈ ಕಾರ್ಯಕ್ಕಾಗಿ ನಾಲ್ಕು ಜನ ನಾಯಕರನ್ನು ಆಯ್ಕೆ ಮಾಡಲಾಯಿತು.

ಆ ನಾಲ್ವರು ರಾಜ್ಯದ ನಾಲ್ಕೂ ಭಾಗಗಳಿಂದ ಏಕಕಾಲಕ್ಕೆ ಯಾತ್ರೆ ಆರಂಭಿಸಬೇಕೆಂದು ಸೂಚಿಸಲಾಯಿತು. ಬರಪೀಡಿತ ಪಂಚಮಹಲ್, ಸಬರ್‌ಕಾಂತಾ, ಮೆಹ್‌ಸಾನಾ, ಅಹ ಮದಾಬಾದ್, ಕಛ್, ಸುರೇಂದ್ರನಗರ್, ರಾಜ್‌ಕೋಟ್, ಜಾಮ್‌ನಗರ್, ಅಮ್ರೇಲಿ ಮತ್ತು ಭಾವನಗರ ಮುಂತಾದ ಜಿಲ್ಲೆಗಳಲ್ಲಿ ಹಾದುಹೋದ 'ನ್ಯಾಯ ಯಾತ್ರೆ' ರಾಜ್ಯದ 115 ತಾಲೂಕುಗಳಿಗೂ ಭೇಟಿ ನೀಡಿತು. 10 ಸಾವಿರ ಗ್ರಾಮಗಳ ಮೂಲಕ ಸಾಗಿಬಂದ ಅದು ಗುಜರಾತ್‌ನ ಇತಿಹಾಸದಲ್ಲಿಯೇ ಮೊದಲ ಯಾತ್ರೆಯಾಗಿತ್ತು. ಬರಪೀಡಿತ ಪ್ರದೇಶಗಳಲ್ಲಿ ಪರಿಹಾರ ಕಾರ್ಯ ಯಾವ ರೀತಿ ನಡೆಯುತ್ತಿದೆ ಎಂಬ ಬಗ್ಗೆ ಕೇಳುವ ಎದೆಗಾರಿಕೆ ಯಾರಿಗೂ ಇರಲಿಲ್ಲ. ಆದರೆ ಯಾತ್ರೆ ಕೈಗೊಂಡಿದ್ದ ಬಿಜೆಪಿ ನಾಯಕರು ಬರಪೀಡಿತ ಪ್ರದೇಶಗಳಿಗೆ ಭೇಟಿ ಕೊಟ್ಟು ಪರಿಹಾರ ಕಾರ್ಯದ ಬಗ್ಗೆ ವಿಚಾರಿಸಿದರು. ಪ್ರಶ್ನೆಗಳನ್ನು ಕೇಳಿ ಪರಿಹಾರದಲ್ಲಿನ ಪ್ರಗತಿಯ ಬಗ್ಗೆ ತಿಳಿದುಕೊಳ್ಳಲು ಪ್ರಯತ್ನಿಸಿದರು. ಇಂತಹ ಕಾರ್ಯದಿಂದಾಗಿ ಬಿಜೆಪಿ ತಮ್ಮ ಭಾವನೆಗಳಿಗೆ ಸ್ಪಂದಿಸುತ್ತಿದೆ ಎಂಬ ಭಾವನೆ ಜನರಲ್ಲುಂಟಾಯಿತು. ಅಲ್ಲದೆ ಪರಿಹಾರ ಕಾರ್ಯಕ್ಕೆ ಬೇಕಾದ ದವಸ-ಧಾನ್ಯಗಳನ್ನು ಪಕ್ಷದ ವತಿಯಿಂದ ವಿತರಿಸಿದರು. ರಾಜ್ಯದ ಒಟ್ಟಾರೆ ಪರಿಸ್ಥಿತಿಯನ್ನು ತಿಳಿದುಕೊಳ್ಳುವ ಸಲುವಾಗಿ ಪಕ್ಷದ ಕಾರ್ಯಕರ್ತರಿಗೆ ವಿವಿಧ

ಜವಾಬ್ದಾರಿಗಳನ್ನು ವಹಿಸಲಾಯಿತು. ಹೀಗೆ ಕಲೆಹಾಕಿದ ಸಮಗ್ರ ವರದಿಯನ್ನು 1988, ಜನವರಿ 18ರಂದು ರಾಜ್ಯಪಾಲರಿಗೆ ಸಲ್ಲಿಸಲಾಯಿತು.

ಇಂತಹ ಒಂದು ಅಭೂತಪೂರ್ವ ಯಾತ್ರೆಯನ್ನು ಆಯೋಜಿಸಿದ ನರೇಂದ್ರ ಮೋದಿಯವರು, ಬಿಜೆಪಿಯನ್ನು ಜನರ ಬಳಿಗೆ ಕೊಂಡೊಯ್ಯುವಲ್ಲಿ ಸಫಲರಾದರು.

ಈ ಯಾತ್ರೆಯ ಬೆನ್ನಲ್ಲೇ 'ಲೋಕಶಕ್ತಿ ರಥಯಾತ್ರೆ' ಎಂಬ ಮತ್ತೊಂದು ಯೋಜನೆ ಸಿದ್ಧವಾಯಿತು. ಆ ಮೂಲಕ ಪಕ್ಷದ ಪ್ರಭಾವವನ್ನು ಇನ್ನಷ್ಟು ಹೆಚ್ಚಿಸುವ ಹಾಗೂ ಜನರಲ್ಲಿ ಜಾಗೃತಿ ಮೂಡಿಸುವ ಪ್ರಯತ್ನ ಮಾಡಲಾಯಿತು. ಲೋಕಶಕ್ತಿ ರಥಯಾತ್ರೆಯನ್ನು ಆಯೋಜಿಸಿದವರೂ ನರೇಂದ್ರ ಮೋದಿಯವರೇ. ಆದರೆ ಯಾತ್ರೆಯ ಮುಂದಾಳತ್ವ ವಹಿಸಿದ್ದು ಕೇಶುಭಾಯಿ ಪಟೇಲ್. ಐದು ಹಂತಗಳನ್ನು ಹೊಂದಿದ್ದ ಈ ಯಾತ್ರೆಯನ್ನು 1989, ಜನವರಿ 31ರಿಂದ 1989, ಮೇ 1ರವರೆಗೂ ನಡೆಸಲು ನಿರ್ಧರಿಸಲಾಯಿತು. ಅಂಬಾಜಿಯಿಂದ ಪ್ರಾರಂಭವಾದ ಯಾತ್ರೆ ಸುಮಾರು ನೂರು ತಾಲೂಕುಗಳ 10 ಸಾವಿರ ಗ್ರಾಮಗಳ ಮೂಲಕ ಹಾದುಹೋಯಿತು. 1 ಕೋಟಿ ಜನರನ್ನು ಸ್ಪರ್ಶಿಸಿತು. ಅಲ್ಲದೆ ಯಾತ್ರೆಯಿಂದ ಸೃಷ್ಟಿಯಾದ ಅವಕಾಶವನ್ನು ಬಳಸಿಕೊಂಡು ಜನರಿಂದಲೇ ದೇಣಿಗೆ ಸಂಗ್ರಹ ಮಾಡಲಾಯಿತು. ಜನರು ತುಲಾಭಾರ ಮಾಡುವ ಮೂಲಕ ಕೇಶುಭಾಯಿಯವರಿಗೆ ಧನಸಹಾಯ ಮಾಡಲಾರಂಭಿಸಿದರು. ಒಂದೊಂದು ತುಲಾಭಾರದಲ್ಲೂ 70ರಿಂದ 80 ಸಾವಿರ ರೂ. ಸಂಗ್ರಹವಾಗುತ್ತಿತ್ತು. ಈ ಎಲ್ಲ ಕ್ರಮಗಳು ಕೇಶುಭಾಯಿಯವರು ಒಬ್ಬ ಪ್ರಭಾವಿ ಹಾಗೂ ಜನಪ್ರಿಯ ನಾಯಕನಾಗಿ ಹೊರಹೊಮ್ಮುವಂತೆ ಮಾಡಿದವು. ಯಾತ್ರೆಯ ಹೆಸರಾದ 'ಲೋಕಶಕ್ತಿ'ಯನ್ನು 'ಜನರ ಶಕ್ತಿ' ಎಂಬುದಾಗಿ ಬಿಂಬಿಸಲಾಯಿತು. ಇದೆಲ್ಲವೂ ನರೇಂದ್ರ ಮೋದಿಯವರ ಯೋಜನೆಯ ಫಲಗಳೇ ಆಗಿದ್ದವು. ಸುಮಾರು ಮೂರು ತಿಂಗಳ ಕಾಲ ನಡೆದ ಲೋಕಶಕ್ತಿ ರಥಯಾತ್ರೆ ಪಕ್ಷವನ್ನು ಮತ್ತಷ್ಟು ಬಲಿಷ್ಠಗೊಳಿಸಿತು. ಕೇವಲ ಪಟೇಲರು ಹೆಚ್ಚಿರುವ ಸೌರಾಷ್ಟ್ರದಲ್ಲಿ ಮಾತ್ರ ಪ್ರಭಾವಿ ವ್ಯಕ್ತಿಯಾಗಿದ್ದ ಕೇಶುಭಾಯಿ ಪಟೇಲ್ ಲೋಕಶಕ್ತಿ ಯಾತ್ರೆಯಿಂದಾಗಿ ತಮ್ಮ ಜನಪ್ರಿಯತೆಯನ್ನು ಇಡಿ ರಾಜ್ಯಕ್ಕೇ ವಿಸ್ತರಿಸಿಕೊಳ್ಳಲು ಅವಕಾಶ ದೊರೆಯಿತು. ಸಾವಿರಾರು ಜನ ಆದಿವಾಸಿ ಹಾಗೂ ಬುಡಕಟ್ಟು ಜನಾಂಗದವರು ಕೂಡ ಪಕ್ಷದತ್ತ ಆಕರ್ಷಿತರಾದರು. ಲೋಕಶಕ್ತಿ ಯಾತ್ರೆ ಬಿಜೆಪಿ ಜನರ ವಿಶ್ವಾಸವನ್ನು ಗೆಲ್ಲಲು ಅನುವು ಮಾಡಿಕೊಟ್ಟಿತು.

ನರೇಂದ್ರ ಮೋದಿಯವರು ಆಯೋಜಿಸಿದ್ದು ಕೇವಲ ಎರಡೇ ಯಾತ್ರೆಗಳಲ್ಲ.

ಗುಜರಾತ್‌ನಲ್ಲಿ ನಡೆದ ನ್ಯಾಯಯಾತ್ರೆ ಹಾಗೂ ಲೋಕಶಕ್ತಿ ರಥಯಾತ್ರೆಗಳಲ್ಲದೆ,





ಅಡ್ವಾಣಿಯವರು ಕೈಗೊಂಡ ಅಯೋಧ್ಯಾ ಯಾತ್ರೆ ಮತ್ತು ಡಾ. ಮುರಳಿಮನೋಹರ ಜೋಶಿಯವರ ಏಕತಾಯಾತ್ರೆಯನ್ನು ಆಯೋಜಿಸುವಲ್ಲಿಯೂ ಮೋದಿಯವರ ಪಾತ್ರವಿತ್ತು. 1990, ಸೆಪ್ಟೆಂಬರ್ 25ರಂದು ಖ್ಯಾತ ಸೋಮನಾಥ ದೇವಾಲಯದಿಂದ ಆರಂಭವಾದ ಅಯೋಧ್ಯಾ ರಥಯಾತ್ರೆ ಮುಂಬೈ ತಲುಪುವವರೆಗೂ ಮೋದಿ ಅಡ್ವಾಣಿಯವರ ಜತೆಗೇ ಇದ್ದರು. ಗುಜರಾತ್‌ನುದ್ದಕ್ಕೂ ಅಯೋಧ್ಯೆ ರಥಯಾತ್ರೆಗೆ ಜನರಿಂದ ಅಪಾರ ಬೆಂಬಲ ವ್ಯಕ್ತವಾಯಿತು. ಅಂದಿನ ಬಿಜೆಪಿ ಅಧ್ಯಕ್ಷ ಡಾ. ಮುರಳಿಮನೋಹರ ಜೋಶಿಯವರು ದೇಶವನ್ನು ಒಗ್ಗೂಡಿಸಲು ಕೈಗೊಂಡ 'ಏಕತಾ ಯಾತ್ರೆ'ಯ ಹಿಂದೆಯೂ ಮೋದಿಯವರ ದೂರದೃಷ್ಟಿಯಿತ್ತು. 1991, ಡಿಸೆಂಬರ್ 11ರಂದು ಕನ್ಯಾಕುಮಾರಿಯಿಂದ ಪ್ರಾರಂಭವಾದ ಏಕತಾ ಯಾತ್ರೆ 1992, ಜನವರಿ 26ರಂದು ಕಾಶ್ಮೀರದ ಶ್ರೀನಗರಕ್ಕೆ ಬಂದು ತಲುಪಿತು. ಇಂತಹ ದೀರ್ಘ ಯಾತ್ರೆಯನ್ನು ಆಯೋಜಿಸುವ ಜವಾಬ್ದಾರಿಯೂ ಮೋದಿಯವರ ಹೆಗಲೇರಿತ್ತು. ಯಾತ್ರೆ ಆಯೋಜಿಸುವಲ್ಲಿ ನಿಸ್ಸೀಮರಾಗಿದ್ದ ಮೋದಿ ಈ ಜವಾಬ್ದಾರಿಯನ್ನು ಖುಷಿಯಿಂದಲೇ ಒಪ್ಪಿಕೊಂಡಿದ್ದರು. ಆದರೆ ಯಾವುದೇ ಕೆಲಸ ಮಾಡಬೇಕಾದರೂ ಮೋದಿ ತಕ್ಕ ಪೂರ್ವತಯಾರಿ ನಡೆಸುತ್ತಾರೆ. ಏಕತಾ ಯಾತ್ರೆ ಹಾದುಹೋಗಬೇಕಾದ ಮಾರ್ಗವನ್ನು ಗುರುತಿಸಿದ ನಂತರ ಯಾತ್ರೆಗೂ ಮೊದಲು ಸ್ವತಃ ಪ್ರತಿ ಸ್ಥಳಗಳಿಗೂ ಭೇಟಿಕೊಟ್ಟ ಮೋದಿ, ಯಾತ್ರೆ ಸುಸೂತ್ರವಾಗಿ ನಡೆಯಲು ಸಿದ್ಧತೆ ಮಾಡಿ ಬಂದರು. ಹಾಗೆ ಸಿದ್ಧತೆ ನಡೆಸುವಾಗ ಉಗ್ರವಾದಿಗಳು ಗುಂಡು ಹಾರಿಸುವ ಅಥವಾ ಕ್ಷಿಪಣಿಯನ್ನು ಉಡಾಯಿಸಿ ಪ್ರಾಣವನ್ನೇ ತೆಗೆಯುವ ಅಪಾಯವಿತ್ತು. ಆದರೆ ಮೋದಿಯವರು ಗುಂಡುನಿರೋಧಕ ಜಾಕೆಟನ್ನು ಧರಿಸಲು ನಿರಾಕರಿಸಿದರು. ಅಷ್ಟೇ ಅಲ್ಲ, ಯಾವ ಅಡೆತಡೆಗಳೂ ಇಲ್ಲದೆ 46 ದಿನಗಳ ಏಕತಾ ಯಾತ್ರೆ ಯಶಸ್ವಿಯಾಗಿ ಪೂರ್ಣಗೊಳ್ಳುವಂತೆ ಮಾಡಿದರು. ಈ ಯಾತ್ರೆ ಭಯೋತ್ಪಾದನೆಯ ವಿರುದ್ಧ ದೇಶಾದ್ಯಂತ ಜಾಗೃತಿಯನ್ನುಂಟುಮಾಡಿತು. ಅಂತಿಮ ದಿನವಾದ 1992, ಜನವರಿ 26ರಂದು ಕಾಶ್ಮೀರದ ಲಾಲ್‌ಚೌಕದಲ್ಲಿ ಮುರಳಿಮನೋಹರ ಜೋಶಿಯವರು ಭಾರತದ ತ್ರಿವರ್ಣ ಧ್ವಜ ಹಾರಿಸಿದರು. ಏಕತಾ ಯಾತ್ರೆಯ ನಂತರ ಮೋದಿಯವರ ರೂಪದಲ್ಲಿ ಒಬ್ಬ ಯುವ ಹಾಗೂ ಸಮರ್ಥ ನಾಯಕ ಹೊರಹೊಮ್ಮಿರುವುದು ಅರಿವಾಗತೊಡಗಿತು. ನರೇಂದ್ರ ಮೋದಿ ಹಾಗೂ ಬಿಜೆಪಿಯ ಇತರ ನಾಯಕರಿಗೆ ಯಾತ್ರೆಯ ಯಶಸ್ಸು ಖುಷಿ ಕೊಟ್ಟಿತು. ಆದರೆ ಅದಕ್ಕಿಂತ ಖುಷಿ ಹಾಗೂ ಭಾವನಾತ್ಮಕ ಕ್ಷಣ ಇನ್ನೊಂದಿತ್ತು. ಗುಜರಾತ್‌ನಲ್ಲಿ ಬಿಜೆಪಿ ಒಂದು ಬಲಿಷ್ಠ ಶಕ್ತಿಯಾಗಿ ಹೊರಹೊಮ್ಮಿತು.





# 16

## ಜನತಾದಳ–ಬಿಜೆಪಿ ಮೈತ್ರಿ ಭವಿಷ್ಯಕ್ಕಿರಲಿಲ್ಲ ಖಾತ್ರಿ

1989ರ ಲೋಕಸಭೆ ಚುನಾವಣೆಯಲ್ಲಿ ಕಾಂಗ್ರೆಸ್ ಹೀನಾಯವಾಗಿ ಸೋತ ಕಾರಣ ಅಮರಸಿನ್ಹ ಚೌಧರಿ ಅವರನ್ನು ಮುಖ್ಯಮಂತ್ರಿ ಸ್ಥಾನದಿಂದ ಕೆಳಗಿಳಿಸಲಾಯಿತು. 1990ರಲ್ಲಿ ಮಾಧವಸಿನ್ಹ ಸೋಳಂಕಿ ಮತ್ತೆ ಮುಖ್ಯಮಂತ್ರಿಯಾದರು. ಈ ಮಧ್ಯೆ ಬಿಜೆಪಿ ಬೆಂಬಲದೊಂದಿಗೆ ಜನತಾದಳ ಕೇಂದ್ರದಲ್ಲಿ ಸರಕಾರ ರಚಿಸಿತು. ಇತ್ತ ನರೇಂದ್ರ ಮೋದಿಯವರು ಗುಜರಾತ್ ವಿಧಾನಸಭೆ ಚುನಾವಣೆಯಲ್ಲಿ ಯಾವ ಪಕ್ಷಗಳ ಬೆಂಬಲ ಹಂಗೂ ಇಲ್ಲದೆ ಸ್ವತಂತ್ರವಾಗಿ ಸ್ಪರ್ಧಿಸುವಂತೆ ಮಾಡಲು ಬಿಜೆಪಿಯನ್ನು ಅಣಿಗೊಳಿಸುತ್ತಿದ್ದರು. ಅಷ್ಟಕ್ಕೂ ರಾಜ್ಯದ ಒಟ್ಟು 182 ಸ್ಥಾನಗಳಲ್ಲಿ 148 ಸ್ಥಾನಗಳಲ್ಲಿ ಸ್ಪರ್ಧಿಸಲು ಮುಂದಾಗಿದ್ದ ಚಿಮಣ್‌ಭಾಯ್ ಪಟೇಲ್ ಬಿಜೆಪಿಗೆ ಉಳಿದ ಬೆರಳೆಣಿಕೆಯ ಸ್ಥಾನಗಳನ್ನು ನೀಡಲಷ್ಟೇ ಸಿದ್ಧರಿದ್ದರು. ಇಂತಹ ಹಿರಿಯಣ್ಣನ ವರ್ತನೆ ಬಿಜೆಪಿ ಮತ್ತು ಇತರ ಪ್ರತಿಪಕ್ಷಗಳಿಗೆ ಸರಿ ಕಾಣಿಸಲಿಲ್ಲ. ಅಂತಿಮವಾಗಿ ಚುನಾವಣೆ ನಡೆದು ಫಲಿತಾಂಶ ಹೊರಬಿದ್ದಾಗ ಬಿಜೆಪಿ 67 ಹಾಗೂ ಜನತಾದಳ 70 ಸ್ಥಾನಗಳನ್ನು ಗೆದ್ದುಕೊಂಡಿದ್ದವು. ಕಾಂಗ್ರೆಸ್ ಹೀನಾಯವಾಗಿ ಸೋತಿತ್ತು.

ಬಿಜೆಪಿ ಹಾಗೂ ಜನತಾದಳದ ಜತೆ ಮೈತ್ರಿ ಏರ್ಪಟ್ಟ ಕಾರಣ 1990, ಮಾರ್ಚ್ 3ರಂದು ಚಿಮಣ್‌ಭಾಯ್ ಪಟೇಲ್ ನೇತೃತ್ವದಲ್ಲಿ ಸರಕಾರ ರಚನೆಯಾಯಿತು. ಚಿಮಣ್‌ಭಾಯಿಗೆ ಅದೊಂದು ಪ್ರಮುಖ ಘಟ್ಟವಾಗಿತ್ತು. ಅದಕ್ಕೂ ಮೊದಲು ಅವರು ಮುಖ್ಯಮಂತ್ರಿಯಾಗಿದ್ದುದು 1973ರಲ್ಲಿ, ಆಗ ಅಧಿಕಾರಾವಧಿಯನ್ನು ಪೂರ್ಣಗೊಳಿಸುವುದಕ್ಕೂ ಸಾಧ್ಯವಾಗಿರಲಿಲ್ಲ, ಹಾಗಾಗಿ ಈ ಬಾರಿ ಪ್ರತೀಕಾರ ತೆಗೆದುಕೊಳ್ಳುವ ಆತುರದಲ್ಲಿದ್ದರು. ಸಂಪುಟದಲ್ಲಿ ಚಿಮಣ್‌ಭಾಯಿಯವರದ್ದೇ ಮೇಲುಗೈ ಆದರೂ ಕೇಶುಭಾಯಿ ಪಟೇಲ್ ಅವರನ್ನು ನಂ.2 ಸ್ಥಾನಕ್ಕೆ ಅಧಿಕೃತವಾಗಿ ನಿಯೋಜಿಸಲಾಯಿತು. ಇತ್ತ ಬಿಜೆಪಿಯಿಂದ

ಮಂತ್ರಿಗಳಾದವರು ತೀರಾ ಅನನುಭವಿಗಳಾಗಿದ್ದರು. ಒಟ್ಟಿನಲ್ಲಿ ಚಿಮಣ್‌ಭಾಯಿಯವರ ಸರಕಾರ ಗದ್ದುಗೆಯೇರಿ ಆಡಳಿತ ನಡೆಸುತ್ತಿರುವ ಪ್ರಾರಂಭಿಕ ಹಂತದಲ್ಲಿ ಎರಡು ಪ್ರಮುಖ ಘಟನೆಗಳು ನಡೆದವು. ಅವು ಇಡಿ ದೇಶವನ್ನೇ ಆಶ್ಚರ್ಯಚಕಿತಗೊಳಿಸಿದವು. ಅಯೋಧ್ಯೆ ಯಾತ್ರೆ ಹೊರಟಿದ್ದ ಅಡ್ವಾಣಿಯವರು ಸೋಮನಾಥದಿಂದ 8 ಸಾವಿರ ಕಿಲೋಮೀಟರ್ ಯಾತ್ರೆ ಮಾಡಿ ಅಂತಿಮವಾಗಿ 1990, ಅಕ್ಟೋಬರ್ 24ರಂದು ಉತ್ತರ ಪ್ರದೇಶದ ಅಯೋಧ್ಯೆಗೆ ಬಂದು ತಲುಪಬೇಕಿತ್ತು. ಅಲ್ಲಿಗೆ ಅಯೋಧ್ಯೆ ಯಾತ್ರೆ ಮುಕ್ತಾಯಗೊಳ್ಳುತ್ತಿತ್ತು. ಆದರೆ ಬಿಹಾರದಲ್ಲಿ ತೆರಳುತ್ತಿದ್ದಾಗಲೇ ಸಮಷ್ಠಿಪುರದಲ್ಲಿ ಅಡ್ವಾಣಿಯವರನ್ನು ಬಂಧಿಸಲಾಯಿತು. ಈ ಸುದ್ದಿ ಕಾಳ್ಗಿಚ್ಚಿನಂತೆ ಹರಡತೊಡಗಿತು. ಇನ್ನೊಂದೆಡೆ 58 ಸಂಸದರನ್ನು ತಮ್ಮ ತೆಕ್ಕೆಗೆ ಸೆಳೆದುಕೊಂಡ ಚಂದ್ರಶೇಖರ್ 1990, ನವೆಂಬರ್ 5ರಂದು ಜನತಾದಳವನ್ನು ಇಬ್ಭಾಗ ಮಾಡಿದರು. ಎರಡು ದಿನಗಳ ನಂತರ ಪ್ರಧಾನಿ ವಿ.ಪಿ. ಸಿಂಗ್ ರಾಜೀನಾಮೆ ನೀಡಿದರು. ಗುಜರಾತ್‌ನಲ್ಲೂ ರಾಜಕೀಯ ಅಲ್ಲೋಲಕಲ್ಲೋಲ ಸಂಭವಿಸಲಾರಂಭಿಸಿತು. ಜನತಾದಳದಿಂದ ದೂರ ಸರಿದ ಬಿಜೆಪಿ ಪ್ರತಿಪಕ್ಷದ ಸ್ಥಾನದಲ್ಲಿ ಕುಳಿತುಕೊಳ್ಳಲು ಮುಂದಾಯಿತು. ಆದರೆ ಅದರಿಂದ ಚಿಮಣ್‌ಭಾಯ್ ವಿಚಲಿತರಾಗಲಿಲ್ಲ, ಕಾಂಗ್ರೆಸ್‌ನ ಬೆಂಬಲ ಯಾಚಿಸಿದರು. ಸದವಕಾಶಕ್ಕಾಗಿ ಕಾದು ಕುಳಿತಿದ್ದ ಕಾಂಗ್ರೆಸ್ ವಿಳಂಬ ಮಾಡದೆ ಬೆಂಬಲ ನೀಡಿತು. ಒಂದೆಡೆ 1991, ಮಾರ್ಚ್‌ನಲ್ಲಿ ಕಾಂಗ್ರೆಸ್ ಬೆಂಬಲ ಹಿಂತೆಗೆದುಕೊಳ್ಳುವುದರೊಂದಿಗೆ ಚಂದ್ರಶೇಖರ್ ಸರಕಾರ ಪತನವಾದರೆ, ಗುಜರಾತ್ ಜನತಾದಳವನ್ನೇ ತುಂಡರಿಸಿದ ಚಿಮಣ್‌ಭಾಯಿ ಪ್ರತ್ಯೇಕ ಪ್ರಾದೇಶಿಕ ಪಕ್ಷವನ್ನು ಕಟ್ಟಿ ಕಾಂಗ್ರೆಸ್‌ನ ಬೆಂಬಲದೊಂದಿಗೆ ಆಳ್ವಿಕೆಯನ್ನು ಮುಂದುವರಿಸಿದರು. 1991ರ ಸಾರ್ವತ್ರಿಕ ಚುನಾವಣೆಯ ನಂತರ ಪಿ.ವಿ. ನರಸಿಂಹರಾವ್ ಪ್ರಧಾನಿಯಾದಾಗ ಚಿಮಣ್‌ಭಾಯಿ ತಮ್ಮ ಪಕ್ಷವನ್ನು(ಜೆಡಿ(ಜಿ)) ಕಾಂಗ್ರೆಸ್‌ನೊಂದಿಗೆ ವಿಲೀನಗೊಳಿಸಿದರು.

ಈ ಹಂತದಲ್ಲಿ ನರೇಂದ್ರ ಮೋದಿಯವರನ್ನು ಬಿಜೆಪಿಯ ಅಖಿಲ ಭಾರತ ಚುನಾವಣಾ ಸಮಿತಿಗೆ ಗುಜರಾತ್ ಸದಸ್ಯರಾಗಿ ನೇಮಕ ಮಾಡಲಾಯಿತು.

ಹದಿನೇಳು ಪ್ರಭಾವಿ ಹಾಗೂ ಬುದ್ಧಿವಂತ ನಾಯಕರನ್ನು ಹೊಂದಿದ್ದ ಚುನಾವಣಾ ಸಮಿತಿಯ ಸದಸ್ಯರಾಗಿದ್ದು ಮೋದಿಯವರಿಗೆ ಹೆಮ್ಮೆಯ ವಿಷಯವಾಗಿತ್ತು. ಮುಂಬರುವ ವರ್ಷಗಳಲ್ಲಿ ನರೇಂದ್ರ ಮೋದಿಯವರು ಬಿಜೆಪಿಯ ಪ್ರತಿಯೊಂದು ಕಾರ್ಯಕಾರಿಣಿ ಸಭೆಗಳಲ್ಲೂ ಭಾಗಿಯಾಗುವ ಹಾಗೂ ಅಭಿಪ್ರಾಯವನ್ನು ಹಂಚಿಕೊಳ್ಳುವ ಅವಕಾಶ ದೊರೆಯಿತು. ಹೀಗೆ ಗುರುತರ ಜವಾಬ್ದಾರಿಗಳು ಸಿಗಲಾರಂಭಿಸಿದವು. ಇತ್ತ ಗುಜರಾತ್‌ನಲ್ಲಿ





ಕಾಂಗ್ರೆಸ್ ಜತೆ ರಾಜಕೀಯ ಹಣಾಹಣಿಗಾಗಿ ತೀರಾ ತವಕದಲ್ಲಿತ್ತು ಬಿಜೆಪಿ. 1991ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ಕಾಂಗ್ರೆಸ್ಸನ್ನು ಸೋಲಿಸುವಲ್ಲಿ ಯಶಸ್ವಿಯೂ ಆಯಿತು. ಒಂದು ವೇಳೆ ಚುನಾವಣಾ ಪ್ರಚಾರಾಂದೋಲನದ ವೇಳೆ ರಾಜೀವ್ ಗಾಂಧಿಯವರ ಹತ್ಯೆಯಾಗದೇ ಹೋಗಿದ್ದಿದ್ದರೆ ಎಲ್ಲ 26 ಲೋಕಸಭೆ ಸ್ಥಾನಗಳಲ್ಲೂ ಖಂಡಿತ ಗೆಲುವು ಸಾಧಿಸುತ್ತಿತ್ತು. ಆದರೇನಂತೆ ಕಾಂಗ್ರೆಸ್‌ಗೆ ದೊರೆತಿದ್ದ ಅನುಕಂಪದ ಅಲೆಯ ಹೊರತಾಗಿಯೂ ಬಿಜೆಪಿ 20 ಸ್ಥಾನಗಳನ್ನು ಗೆದ್ದುಕೊಂಡಿತು. ಅದಕ್ಕೆ ಶೇ. 50ರಷ್ಟು ಮತಗಳು ಲಭ್ಯವಾದವು. ಗುಜರಾತ್‌ನ ಗಾಂಧಿನಗರದಿಂದ ಲೋಕಸಭೆಗೆ ಆಯ್ಕೆಯಾದ ಲಾಲ್‌ಕೃಷ್ಣ ಅಡ್ವಾಣಿಯವರು ಶೇ. 57ರಷ್ಟು ಮತಗಳನ್ನು ಪಡೆದರು.

ಇಂತಹ ಸಾಧನೆಯ ಹಿಂದೆ ಮೋದಿಯವರ ಪಾತ್ರ ಹಿರಿದಾಗಿತ್ತು. ಏಕತಾ ಯಾತ್ರೆಯನ್ನು ಮುಗಿಸಿದ ನರೇಂದ್ರ ಮೋದಿಯವರು 1992, ಜನವರಿ 30ರಂದು ಅಹಮದಾಬಾದ್‌ಗೆ ವಾಪಸಾದಾಗ ಅಭೂತಪೂರ್ವ ಸ್ವಾಗತ ಕೋರಲಾಯಿತು. ಆದರೆ ಅಂತಹ ಭವ್ಯ ಸ್ವಾಗತವೇ ನರೇಂದ್ರ ಮೋದಿಯವರಿಗೆ ಮುಳುವಾಯಿತು. ಅಂದು ಯಶಸ್ಸು ಶತ್ರುವಾಗಿ ಕಾಡತೊಡಗಿತು. ಮೋದಿಯವರ ಯಶಸ್ಸು ಮತ್ತು ಜನಪ್ರಿಯತೆಯನ್ನು ಕಂಡು ಮತ್ಸರಗೊಂಡ ಗುಜರಾತಿನ ಹಿರಿಯ ಬಿಜೆಪಿ ನಾಯಕರು ಹಾಗೂ ರಾಜ್ಯ ಬಿಜೆಪಿಯ ನೂತನ ಅಧ್ಯಕ್ಷರು ತಮ್ಮ ತಂಡದಲ್ಲಿ ಮೋದಿಯವರಿಗೆ ಸ್ಥಾನ ನೀಡಲು ನಿರಾಕರಿಸಿದರು. ಹೀಗೆ ರಾತ್ರಿ ಕಳೆದು ಬೆಳಗಾಗುವಷ್ಟರಲ್ಲಿ ಮೋದಿ ತಾವು ಕಟ್ಟಿದ ಪಕ್ಷಕ್ಕೇ ಬೇಡವಾಗಿಬಿಟ್ಟರು.

# 17

## ಸಂಸ್ಕಾರಧಾಮ ರಾಜಕೀಯಕ್ಕೆ ಅಲ್ಪವಿರಾಮ

ಬಹುಶಃ 'ಸಂಸ್ಕಾರಧಾಮ'ವೆಂಬ ಯೋಚನೆ ಮತ್ತು ಯೋಜನೆ ಮೊಳಕೆಯೊಡೆಯುವ ಕಾಲ ಬಂದಿತ್ತೋ ಏನೊ?! ನರೇಂದ್ರ ಮೋದಿಯವರು ರಾಜಕೀಯದಿಂದ ಬೇಸತ್ತರೂ ಧೃತಿಗೆಡಲಿಲ್ಲ, ವಿಚಲಿತರೂ ಆಗಲಿಲ್ಲ. ಅದುವರೆಗೂ ಶೈಕ್ಷಣಿಕ ಕ್ಷೇತ್ರದತ್ತ ಕಣ್ಣು ಹಾಯಿಸಿದರು. ಶಾಲೆಯೊಂದನ್ನು ಸ್ಥಾಪಿಸುವ ಯೋಚನೆ ಹಾಗೂ ಯೋಜನೆ ನರೇಂದ್ರ ಮೋದಿಯವರಿಗೆ ಎಂದೋ ಹೊಳೆದಿತ್ತು. ಸಮಕಾಲೀನ ಶೈಕ್ಷಣಿಕ ಗುಣಮಟ್ಟವನ್ನು ಹೊಂದಿರುವ ಹಾಗೂ ನಮ್ಮ ಪರಂಪರಾಗತ ಕಲ್ಪನೆಯನ್ನು ತಳಹದಿಯಾಗಿಸಿಕೊಂಡಿರುವ ಶಾಲೆಯೊಂದನ್ನು ತೆರೆಯಲು ಮುಂದಾದರು. ಆದರೆ ಅಂತಹ ಶಾಲೆಯನ್ನು ಕಟ್ಟಲು ಬೇಕಾದ ನಿಧಿಯನ್ನು ಸಂಗ್ರಹಿಸುವುದು ಹಾಗೂ ಶಾಲೆಯನ್ನು ನಿರಂತರವಾಗಿ ನಡೆಸುವುದು ಕಷ್ಟದ ಕೆಲಸವಾಗಿತ್ತು. ಹಾಗಾಗಿ ಗುಜರಾತ್‌ನ ಮಧ್ಯಮವರ್ಗದ ಜನರ ಕೈಗೆಟಕುವಂತಹ ರೆಸಿಡೆನ್ಸಿಯಲ್ ಶಾಲೆಯನ್ನು ತೆರೆಯಲು ಮುಂದಾದರು. ಭಾರತದ ಪುರಾತನ ಸಾಂಸ್ಕೃತಿಕ ಮೌಲ್ಯಗಳನ್ನು ಮಕ್ಕಳಲ್ಲಿ ತುಂಬಲು ಮುಂದಾದರು. ಸೈಲ್ವಾನ್‌ನಲ್ಲಿ ಪ್ರಾರಂಭವಾದ 'ಸಂಸ್ಕಾರಧಾಮ' ಎಂಬ ಹೆಸರಿನ ಈ ರೆಸಿಡೆನ್ಸಿಯಲ್ ಸ್ಕೂಲ್, ಗುಣಮಟ್ಟದ ಶಿಕ್ಷಣಕ್ಕೆ ಇನ್ನೊಂದು ಹೆಸರಾ ಯಿತು. ವಿದ್ಯಾರ್ಥಿಗಳಿಗೆ ಐದನೇ ತರಗತಿಯಿಂದ ಪ್ರವೇಶ ನೀಡಲಾಯಿತು. ಇಲ್ಲಿ ಗ್ರಾಮೀಣ ವಿದ್ಯಾರ್ಥಿಗಳಿಗೆ ಆದ್ಯತೆ ನೀಡಲಾಗುತ್ತಿತ್ತು. ಅಲ್ಲದೆ ವಿದ್ಯಾರ್ಥಿಗಳ ವಯೋಮಾನ 11 ವರ್ಷಕ್ಕಿಂತ ಕಡಿಮೆ ಇರುವಂತಿರಲಿಲ್ಲ.

11 ವರ್ಷ ಏಕೆ ಅನ್ನುತ್ತೀರಾ?

"ಆಧುನಿಕ ವಿಜ್ಞಾನದ ಪ್ರಕಾರ ಬಾಲ್ಯಾವಸ್ಥೆಯಲ್ಲಿ ಮಗುವಿಗೆ ಪ್ರೀತಿ, ವಾತ್ಸಲ್ಯದ ಅಗತ್ಯವಿರುತ್ತದೆ. ತಾಯಿಯೇ ಮೊದಲ ಗುರು ಅಂತ ಹೇಳುವುದು ಅದೇ ಕಾರಣಕ್ಕೆ.

ಹಾಗಾಗಿ ಮನೆಯಲ್ಲೇ ಮೊದಲ ಮತ್ತು ಮೂಲ ಪಾಠವನ್ನು ಕಲಿತ ನಂತರ ಆ ಮಗುವನ್ನು ಸೇರಿಸಿಕೊಳ್ಳಬೇಕು ಎಂಬುದು ಸಂಸ್ಕಾರಧಾಮದಲ್ಲಿರುವ ನಮ್ಮ ದೃಢ ನಂಬಿಕೆಯಾಗಿದೆ" ಎಂಬುದಾಗಿ ಸಂಸ್ಕಾರಧಾಮದ ಪರಿಚಯಪತ್ರದಲ್ಲೇ ಸ್ಪಷ್ಟವಾಗಿ ಉಲ್ಲೇಖಿಸಲಾಗಿತ್ತು. 11 ವರ್ಷ ತುಂಬಿದ ನಂತರವೇ ಮಗುವನ್ನು ಗುರುಕುಲ ಅಥವಾ ಆಶ್ರಮಕ್ಕೆ ಸೇರಿಸಬೇಕೆಂದು ಪುರಾಣಗಳಲ್ಲೇ ಹೇಳಿರುವುದನ್ನೂ ಅದರಲ್ಲಿ ಬರೆಯಲಾಗಿತ್ತು. ಸಂಸ್ಕಾರಧಾಮ ಮಕ್ಕಳಿಗೆ ಸಮಗ್ರ ತರಬೇತಿ ನೀಡುವ ಹಾಗೂ ಮಕ್ಕಳ ಸಮಗ್ರ ಬೆಳವಣಿಗೆಯ ಗುರಿ ಹೊಂದಿತ್ತು. ಎಳೆಯ ಮನಸುಗಳಿಗೆ ಅರಿವಾಗುವಂತೆ ಕೌಶಲಗಳನ್ನು ಹೇಳಿಕೊಡಲಾಗುತ್ತಿತ್ತು. ಅಲ್ಲಿ ಮಕ್ಕಳನ್ನು ಹೇಗೆ ಅಣಿಗೊಳಿಸುತ್ತಿದ್ದರೆಂದರೆ, ಅವರ ಮನಸ್ಸು ಕಲಿಕೆಗೆ ತೆರೆದುಕೊಳ್ಳುವಂತೆ ಮಾಡುತ್ತಿದ್ದರು. ಮಕ್ಕಳಿಗೆ ಬಾಲ್ಯದಲ್ಲೇ ಶಿಸ್ತನ್ನು ಕಲಿಸಿದರೆ ದೊಡ್ಡವರಾದ ಮೇಲೂ ಶಿಸ್ತುಬದ್ಧ ಜೀವನವನ್ನೇ ನಡೆಸುತ್ತಾರೆಎಂಬುದು ಸಂಸ್ಕಾರಧಾಮದ ಬಲವಾದ ನಂಬಿಕೆಯಾಗಿತ್ತು. ಅಲ್ಲಿನ ದಿನಚರಿಯನ್ನು ಹೇಗೆ ವಿನ್ಯಾಸಗೊಳಿಸಲಾಗಿತ್ತೆಂದರೆ ಶಿಸ್ತು, ಸಮಯಪ್ರಜ್ಞೆ, ಸ್ವತಂತ್ರ ಚಿಂತನೆ ಹಾಗೂ ನಿರ್ಧಾರ ಕೈಗೊಳ್ಳುವಿಕೆ ಮುಂತಾದ ಎಲ್ಲ ಗುಣಗಳನ್ನು ಮೈಗೂಡಿಸಿಕೊಳ್ಳುವಂತೆ ಮಾಡುತ್ತಿತ್ತು. ವಿದ್ಯಾರ್ಥಿಗಳನ್ನು ತಲಾ 25ರಂತೆ ಎರಡು ತಂಡಗಳಾಗಿ ವಿಭಜಿಸಲಾಗುತ್ತಿತ್ತು. ಪ್ರತಿ ತಂಡಕ್ಕೂ ಒಬ್ಬ (ಅಭಿಭಾವಕಾಚಾರ್ಯ)ಪಾಲಕ ಶಿಕ್ಷಕರಿರುತ್ತಿದ್ದರು. ವಿದ್ಯಾರ್ಥಿಗಳ ಸಣ್ಣಪುಟ್ಟ ಸಮಸ್ಯೆಗಳನ್ನು ಪರಿಹರಿಸುವ ಜವಾಬ್ದಾರಿ ಅವರದಾಗಿರುತ್ತಿತ್ತು. ಆ ಪಾಲಕ ಪೋಷಕರು ಸಮಸ್ಯೆಗಳನ್ನು ಪರಿಹರಿಸುವ ಕಾರ್ಯದ ಜತೆಗೆ ಮಾರ್ಗದರ್ಶಕರಾಗಿಯೂ ಕಾರ್ಯ ನಿರ್ವಹಿಸುತ್ತಿದ್ದರು. ಪ್ರತಿಯೊಬ್ಬ ವಿದ್ಯಾರ್ಥಿಯನ್ನೂ ಖುದ್ದಾಗಿ ಗಮನಿಸುತ್ತಿದ್ದರು. ಅವರ ಯೋಗಕ್ಷೇಮ ನೋಡಿಕೊಳ್ಳುತ್ತಿದ್ದರು. ಬೆಳಗ್ಗೆ ಹಾಗೂ ಸಂಜೆ ಹೇಳಿಕೊಡುತ್ತಿದ್ದ ಆಟೋಟಗಳು ಕೌಟುಂಬಿಕ ಏಕತೆಯನ್ನು ಸೃಷ್ಟಿಸುವ ನಿಟ್ಟಿನಲ್ಲಿರುತ್ತಿದ್ದವು. ಯೋಜಿತ ಪಠ್ಯದ ಜತೆಗೆ ವಿದ್ಯಾರ್ಥಿಗಳಿಗೆ ಯೋಗ, ಕರಾಟೆ, ಬ್ಯಾಂಡ್ ಮ್ಯೂಸಿಕ್, ಸಾಂಸ್ಕೃತಿಕ ಮತ್ತು ನೈತಿಕ ಶಿಕ್ಷಣ, ಕುದುರೆ ಸವಾರಿ ಹಾಗೂ ಕಂಪ್ಯೂಟರ್ ತರಬೇತಿಯನ್ನೂ ನೀಡಲಾಗುತ್ತಿತ್ತು. ವಿದ್ಯಾರ್ಥಿಗಳ ದೈನಂದಿನ ಚಟುವಟಿಕೆಗಳು ಸರಿಯಾಗಿ ಬೆಳಗ್ಗೆ 5 ಗಂಟೆಗೆ ಪ್ರಾರಂಭವಾಗುತ್ತಿದ್ದವು. ಮಲಗುವಾಗ ರಾತ್ರಿ 10 ಗಂಟೆಯಾಗುತ್ತಿತ್ತು. ಮಕ್ಕಳಿಗೆ ಗಂಟೆಯ ಮೂಲಕ ಸೂಚನೆ ನೀಡಲಾಗುತ್ತಿತ್ತು. ದಿನಚರಿಯಲ್ಲಿ ಶ್ರಮದಾನ ಮತ್ತು ಪರಿಸರ ಪ್ರಜ್ಞೆ ಮೂಡಿಸುವ ಅಂಶಗಳೂ ಇರುತ್ತಿದ್ದವು. ಸಮೂಹ ಚರ್ಚೆಗಳು ನಡೆಯುತ್ತಿದ್ದವು. ಚರ್ಚೆಯ ವೇಳೆಯಲ್ಲಿ ಶಿಕ್ಷಕರು ಹಾಗೂ ಪೋಷಕರು ಭಾಗಿಯಾಗುತ್ತಿದ್ದರು. ಪ್ರತಿ ವಾರವೂ ಪಠ್ಯ ಪರೀಕ್ಷೆ, ಸಾಮಾನ್ಯಜ್ಞಾನ ಪರೀಕ್ಷೆ ನಡೆಯುತ್ತಿದ್ದವು. ಪ್ರತಿಯೊಬ್ಬ ವಿದ್ಯಾರ್ಥಿಯ ಜನ್ಮದಿನವನ್ನೂ





ಯಜ್ಞದ ರೂಪದಲ್ಲಿ ಆಚರಿಸಲಾಗುತ್ತಿತ್ತು. ಅದೇ ಸಂಸ್ಕಾರಧಾಮದ ಪರಿಶುದ್ಧ ಮಾರ್ಗ.

ಸಂಸ್ಕಾರಧಾಮದ ಅಡಿಗಲ್ಲು ಇಟ್ಟ ದಿನದಿಂದ ಪ್ರಾರಂಭವಾದ ಮೋದಿಯವರ ಪರಿಶ್ರಮ ಶಾಲೆಯನ್ನು ಉನ್ನತಿಯತ್ತ ಕೊಂಡೊಯ್ಯುವವರೆಗೂ ಇತ್ತು. ಆ ಶಾಲೆ ಮೋದಿಯವರ ಮೈ ಮನಸ್ಸುಗಳೆರಡನ್ನೂ ಎಷ್ಟು ಆವರಿಸಿತ್ತೆಂದರೆ, ವಿದೇಶಗಳಿಗೆ ಪ್ರಯಾಣ ಹೋದಾಗಲೆಲ್ಲ ಶಾಲೆಯ ಪ್ರಯೋಗಾಲಯಕ್ಕೆ ಮೋದಿಯವರು ಹೊಸ ಹೊಸ ಉಪಕರಣಗಳನ್ನು ತರುತ್ತಿದ್ದರು. "ಅವರು ಬರಿಗೈಲಿ ಹಿಂದಿರುಗಿದ ಸಂದರ್ಭಗಳೇ ಇಲ್ಲ" ಎನ್ನುತ್ತಾರೆ ಶಾಲೆಯ ಆಡಳಿತ ಮಂಡಳಿಯ ಸದಸ್ಯರೊಬ್ಬರು. 1992 ಜೂನ್‌ನಲ್ಲಿ ಋಷಿಪಂಚಮಿಯಂದು ಸಂಸ್ಕಾರಧಾಮ ಮತ್ತು ಲಕ್ಷ್ಮಣ ಜ್ಞಾನಪೀಠಗಳೆರಡನ್ನೂ ಉದ್ಘಾಟನೆ ಮಾಡಲಾಯಿತು. ಆ ದಿನದಿಂದ ಶಾಲೆಯ ಕಾರ್ಯಚಟುವಟಿಕೆಗಳಿಗೆ ಸಂಬಂಧಿಸಿದ ಯಾವುದೇ ವಿಚಾರದಲ್ಲೂ ಸಲಹೆ ಪಡೆದುಕೊಳ್ಳಲು ಮೋದಿಯವರು ಸದಾ ಲಭ್ಯವಿರುತ್ತಿದ್ದರು. ಭೇಟಿ ನೀಡುವವರನ್ನು ಯಾವ ರೀತಿ ಬರಮಾಡಿಕೊಳ್ಳಬೇಕು, ಯೋಗಕ್ಷೇಮ ನೋಡಿಕೊಳ್ಳಬೇಕಾದ ವಿಧಾನ, ಶಾಲೆಗೆ ಸಂಬಂಧಪಟ್ಟ ಪ್ರದರ್ಶನ, ಗಣ್ಯರು ಆಗಮಿಸಿದಾಗ ಅವರ ಸಹಾಯಕರ ಯೋಗಕ್ಷೇಮವನ್ನೂ ನೋಡಿಕೊಳ್ಳಬೇಕೆಂಬ ವಿಚಾರ ಮುಂತಾದ ಸಣ್ಣಪುಟ್ಟ ಸಲಹೆಗಳನ್ನೂ ಮೋದಿ ನೀಡುತ್ತಿದ್ದರು. ಶಾಲೆಗೆ ಸಂಬಂಧಿಸಿದ ಯಾವ ವಿಚಾರಗಳನ್ನೂ ಅವರು ಲಘುವಾಗಿ ಪರಿಗಣಿಸುತ್ತಿರಲಿಲ್ಲ. ಒಮ್ಮೆ ಶಾಲೆಯ ಉದ್ಯೋಗಿಯೊಬ್ಬರು ತೀವ್ರ ಅನಾರೋಗ್ಯಕ್ಕೊಳಗಾಗಿ ಹಾಸಿಗೆ ಹಿಡಿದಾಗ ಕೂಡಲೇ ಆಗಮಿಸಿದ ಮೋದಿಯವರು ಸ್ವತಃ ಆರೈಕೆಯ ಮೇಲ್ವಿಚಾರಣೆಯನ್ನು ಕೈಗೆತ್ತಿಕೊಂಡರು. ದುರದೃಷ್ಟವಶಾತ್ ಆ ಉದ್ಯೋಗಿ ತೀರಿಕೊಂಡರು. ಅವರ ಅಂತಿಮ ವಿಧಿವಿಧಾನದ ಸಂದರ್ಭದಲ್ಲಿ ಒಂದೆರಡು ಮಾತನಾಡುವಂತೆ ಕೇಳಿಕೊಂಡಾಗ ಹೆಣದ ಮುಂದೆ ಕೈಮುಗಿದು ಕೊಂಡು ಕುಳಿತ ಮೋದಿಯವರ ಬಾಯಿಯಿಂದ ಒಂದೇ ಒಂದು ಶಬ್ದವೂ ಹೊರಬರಲಿಲ್ಲ. ಆದರೆ ಕಣ್ಣುಗಳಲ್ಲಿ ಧಾರಾಕಾರವಾಗಿ ನೀರು ಸುರಿಯುತ್ತಿತ್ತು.

ನರೇಂದ್ರ ಮೋದಿಯವರು ತಮ್ಮ ಗುರು ಲಕ್ಷ್ಮಣ್‌ರಾವ್ ಇನಾಂದಾರ್(ವಕೀಲ್ ಸಾಹೇಬ್) ಅವರ ನೆನಪಿಗಾಗಿ ಕಟ್ಟಿಸಿದ ವಿದ್ಯಾಸೌಧವೇ ಸಂಸ್ಕಾರಧಾಮವಾಗಿತ್ತು.

# 18
## ಮತ್ತೆ ಕರೆಯಿತು ರಾಜಕೀಯ

ನರೇಂದ್ರ ಮೋದಿಯವರು ರಾಜಕೀಯದಿಂದ ವಿಮುಖರಾಗಿಯೇ ಇರಲು ಬಿಡುವುದರಿಂದ ಪಕ್ಷಕ್ಕೇ ಹಾನಿ ಎಂಬುದು ಹಿರಿಯ ನಾಯಕರಿಗೆ ಅರಿವಾಯಿತು. ಅವರನ್ನು ದಿಲ್ಲಿಗೆ ಕರೆಸಿಕೊಂಡು ಪಕ್ಷದ ವ್ಯವಹಾರಗಳ ಕಾರ್ಯದರ್ಶಿಯನ್ನಾಗಿ ಮಾಡಲಾಯಿತು.

ಈ ಘಟನೆಯ ನಂತರ ನರೇಂದ್ರ ಮೋದಿಯವರು ರಾಜಕೀಯದಲ್ಲಿ ಪ್ರಬುದ್ಧ ವ್ಯಕ್ತಿಯಾಗಿ ಹೊರಹೊಮ್ಮಿದರು. ತಮಗೆ ನೀಡಿದ ಜವಾಬ್ದಾರಿಯನ್ನು ಅಷ್ಟೇ ಆಸಕ್ತಿಯಿಂದಲೂ ಸ್ವೀಕರಿಸಿದರು. ಆಗ ಉತ್ತರ ಪ್ರದೇಶ, ಮಧ್ಯಪ್ರದೇಶ, ಹಿಮಾಚಲ ಪ್ರದೇಶ, ರಾಜಸ್ಥಾನ ಮತ್ತು ಅಸ್ಸಾಂ ಹೀಗೆ ಐದು ರಾಜ್ಯಗಳಿಗೆ ಚುನಾವಣೆ ಘೋಷಣೆಯಾಗಿತ್ತು. ಪ್ರತಿ ರಾಜ್ಯಗಳೂ ತಮ್ಮದೇ ಆದ ವಿಶಿಷ್ಟ ಗುಣಲಕ್ಷಣಗಳು, ತಮ್ಮದೇ ಆದ ಸಮಸ್ಯೆಗಳು, ತಮ್ಮದೇ ಆದ ಅಡೆತಡೆಗಳನ್ನು ಹೊಂದಿದ್ದವು. ಚುನಾವಣೆಗೆ ಮೂರರಿಂದ ನಾಲ್ಕು ತಿಂಗಳುಗಳಿದ್ದು ಅತ್ಯಂತ ಕಡಿಮೆ ಅವಧಿಯಲ್ಲಿ ಇಂತಹ ಎಲ್ಲ ಅಂಶಗಳನ್ನು ಅರ್ಥ ಮಾಡಿಕೊಳ್ಳಬೇಕಿತ್ತು. ಹಾಗಾಗಿ ವಿವಿಧ ನಾಯಕರು ಮತ್ತು ಸಹೋದ್ಯೋಗಿಗಳೊಂದಿಗೆ ಮಾತುಕತೆ ನಡೆಸುವ, ಅಭಿಪ್ರಾಯ ಹಂಚಿಕೊಳ್ಳುವ, ಹೊಸದನ್ನು ತಿಳಿದುಕೊಳ್ಳುವ ಸದವಕಾಶ ಮೋದಿಗೆ ಲಭ್ಯವಾಯಿತು.

ಇತ್ತ ಗುಜರಾತ್‌ನಲ್ಲಿ ಚಿಮಣ್‌ಭಾಯಿ ಪಟೇಲ್ ಮುಖ್ಯಮಂತ್ರಿಯಾಗಿ ಮುಂದುವರಿಯುತ್ತಿದ್ದರು. ಅವರಿಗೆ 182 ಸದಸ್ಯರ ವಿಧಾನಸಭೆಯಲ್ಲಿ 100 ಶಾಸಕರ ಬೆಂಬಲವಿತ್ತು. ಕಾಂಗ್ರೆಸ್‌ನ ಅಂದಿನ ಪ್ರಧಾನಿ ಪಿ.ವಿ. ನರಸಿಂಹರಾವ್ ಜತೆ ಚಿಮಣ್‌ಭಾಯಿ ಸೌಹಾರ್ದಯುತ ಸಂಬಂಧ ಹೊಂದಿದ್ದರು. ಗುಜರಾತ್‌ನಲ್ಲಿ ಬಿಜೆಪಿಯ ಓಘಕ್ಕೆ ತಡೆಯೊಡ್ಡುವ ತಾಕತ್ತು ಇದ್ದುದು ಚಿಮಣ್‌ಭಾಯಿಗೆ ಮಾತ್ರ. ನರ್ಮದಾ ಅಣೆಕಟ್ಟಿನ ನಿರ್ಮಾಣದ ವಿಷಯದಲ್ಲಿ ತೋರಲಾಗುತ್ತಿದ್ದ ಕೇಂದ್ರದ ವಿಳಂಬ ನೀತಿಯ ವಿರುದ್ಧ

ಸ್ವತಃ ಧ್ವನಿಯೆತ್ತಿದ ಚಿಮಣ್‌ಭಾಯಿ ಪಟೇಲ್ ಬಿಜೆಪಿಗೆ ಪ್ರತಿಭಟಿಸಲು ವಿಷಯಗಳೇ ಇಲ್ಲದಂತೆ ಮಾಡಿದರು. ಆದರೇನಂತೆ ಚಿಮಣ್‌ಭಾಯಿ ದುರದೃಷ್ಟಕ್ಕೆ ಬಾಬರಿ ಮಸೀದಿ ನೆಲಸಮವಾಯಿತು. ಅದರ ಪರಿಣಾಮ ಗುಜರಾತ್‌ನಲ್ಲಿ ತೀವ್ರ ಪ್ರಮಾಣದಲ್ಲಾಯಿತು. ಗುಜರಾತ್‌ನಾದ್ಯಂತ ಹಿಂಸಾಚಾರ, ದೊಂಬಿ ಮತ್ತು ಗಲಭೆಗಳು ಭುಗಿಲೆದ್ದವು. ಅದರಲ್ಲೂ ಸೂರತ್‌ನಲ್ಲಿ ಭಾರಿ ಪ್ರಮಾಣದ ಹತ್ಯೆಗಳು ನಡೆದವು. ಗಲಭೆಯನ್ನು ಕಠಿಣ ಕ್ರಮಗಳ ಮೂಲಕ ಹತ್ತಿಕ್ಕುವುದನ್ನು ಬಿಟ್ಟರೆ ಚಿಮಣ್‌ಭಾಯಿಯವರಿಗೆ ಬೇರಾವ ಮಾರ್ಗಗಳೂ ಇರಲಿಲ್ಲ, ಆ ವೇಳೆಯಲ್ಲಿ ಚಿಮಣ್‌ಭಾಯಿ ಒಬ್ಬ ಬದಲಾದ ವ್ಯಕ್ತಿಯಾಗಿದ್ದರು. ಅವರ ಹಾಸ್ಯಮಿಶ್ರಿತ ಮಾತು ಮತ್ತು ದೃಢ ಕ್ರಮಗಳ ಜತೆ ಅತ್ಯಂತ ವಿರಳವಾದ ಪ್ರಬುದ್ಧತೆಯೂ ಜತೆಗೂಡಿತ್ತು. ಎಲ್ಲರನ್ನೂ ಒಪ್ಪಿಕೊಳ್ಳುವ, ಅಪ್ಪಿಕೊಳ್ಳುವ ಅವರ ನಡತೆ ಎಲ್ಲರಿಗೂ ಆಪ್ತವಾಗಿತ್ತು. ಅವರು ನರ್ಮದಾ ಬಚಾವೊ ಆಂದೋಲನದ ಬಾಬಾ ಆಮ್ಟೆ ಮತ್ತು ಮೇಧಾ ಪಾಟ್ಕರ್ ಅವರ ಒತ್ತಡಕ್ಕೂ ಮಣಿಯಲಿಲ್ಲ, ದುರದೃಷ್ಟವಶಾತ್ ಚಿಮಣ್‌ಭಾಯಿಯವರ ನಡೆ-ನುಡಿಯ ಬಗ್ಗೆ ಅನುಮಾನಗಳು ಹುಟ್ಟಿಕೊಂಡವು. ಭ್ರಷ್ಟಾಚಾರದ ಆರೋಪಗಳೂ ಕೇಳಿಬಂದವು. ಕಾನೂನು ವ್ಯವಸ್ಥೆಯೂ ಹದಗೆಟ್ಟಿತ್ತು. ಅಹಮದಾಬಾದ್‌ನಲ್ಲಿ ಹಿರಿಯ ಕಾಂಗ್ರೆಸ್ ರಾಜಕಾರಣಿ ರೌಫ್ ವಲಿಯುಲ್ಲಾ ಅವರನ್ನು ಹಾಡಹಗಲೇ ಹತ್ಯೆ ಮಾಡಲಾಯಿತು. ಕುಪಿತರಾದ ಸಿ.ಡಿ. ಪಟೇಲ್ ಚಿಮಣ್‌ಭಾಯಿ ಸಂಪುಟಕ್ಕೆ ರಾಜೀನಾಮೆ ನೀಡಿದರು.

ಈ ಮಧ್ಯೆ ಆಘಾತಕಾರಿ ಘಟನೆಯೊಂದು ನಡೆಯಿತು!

1994, ಫೆಬ್ರವರಿಯಲ್ಲಿ ಭಾರಿ ಹೃದಯಾಘಾತಕ್ಕೊಳಗಾದ ಚಿಮಣ್‌ಭಾಯಿ ಪಟೇಲ್ ಅಸುನೀಗಿದರು. ಆದರೆ ಚಿಮಣ್‌ಭಾಯಿಯವರ ಸ್ಥಾನವನ್ನು ತುಂಬುವಂತಹ ನಾಯಕರಾರೂ ಕಾಂಗ್ರೆಸ್‌ನಲ್ಲಿರಲಿಲ್ಲ, ಕೊನೆಗೆ ಸಂಪುಟದಲ್ಲಿ ಸಚಿವರಾಗಿದ್ದ ಛಬಿಲ್‌ದಾಸ್ ಮೆಹ್ತಾ ಅವರು ಚಿಮಣ್‌ಭಾಯಿಯವರ ಉತ್ತರಾಧಿಕಾರಿಯಾದರು. ಆದರೆ 45 ಸಚಿವರನ್ನು ಹೊಂದಿದ್ದ ಗಜಗಾತ್ರದ ಸಂಪುಟವನ್ನು ಕಡಿತಗೊಳಿಸಲು ಛಬಿಲ್‌ದಾಸ್ ಅವರಿಗೆ ಯಾವುದೇ ಮಾರ್ಗಗಳಿರಲಿಲ್ಲ, ಅಧಿಕಾರದಲ್ಲಿ ಮುಂದುವರಿಯಬೇಕಾದರೆ ಪಕ್ಷದೊಳಗಿನ ಒತ್ತಡಕ್ಕೆ ಮಣಿಯಲೇಬೇಕಾಯಿತು. ಜತೆಗೆ 1995, ಫೆಬ್ರವರಿ-ಮಾರ್ಚ್‌ನಲ್ಲಿ ನಡೆಯಲಿರುವ ವಿಧಾನಸಭೆ ಚುನಾವಣೆವರೆಗೂ ತಾವು ತಾತ್ಕಾಲಿಕ ವ್ಯವಸ್ಥೆಯಷ್ಟೇ ಎಂಬುದು ಛಬಿಲ್‌ದಾಸ್‌ಗೂ ತಿಳಿದಿತ್ತು. ಇನ್ನೊಂದೆಡೆ ರಾಜಕೀಯಕ್ಕೆ ಮರಳಿದ್ದ ನರೇಂದ್ರ ಮೋದಿಯವರು ಚುನಾವಣೆ ಎದುರಿಸಲು ಆದಾಗಲೇ ಸಿದ್ಧತೆ ನಡೆಸುತ್ತಿದ್ದರು. ಚುನಾವಣೆಯಲ್ಲಿ ವೈಜ್ಞಾನಿಕ





ತಂತ್ರಗಳನ್ನು ಅಳವಡಿಸಿಕೊಳ್ಳುವ ಸಲುವಾಗಿ ಪ್ರತಿ ಜಿಲ್ಲೆ ಮತ್ತು ತಾಲೂಕು ಮಟ್ಟಗಳಲ್ಲಿ ಪಕ್ಷದ ಕಾರ್ಯಕರ್ತರಿಗೆ ತರಬೇತಿ ನೀಡುವ ಯೋಜನೆಯೊಂದನ್ನು ಸಿದ್ಧಪಡಿಸಲಾಯಿತು. ಆ ಬೃಹತ್ ಪ್ರಮಾಣದ ತರಬೇತಿ ಕಾರ್ಯಕ್ರಮದಡಿ 1.5 ಲಕ್ಷ ಕಾರ್ಯಕರ್ತರಿಗೆ ವೈಜ್ಞಾನಿಕ ತಂತ್ರಗಳನ್ನು ಹೇಳಿಕೊಡಲಾಯಿತು. ಆ ಮೂಲಕ 28 ಸಾವಿರ ಮತಗಟ್ಟೆಗಳಲ್ಲಿ ಮತದಾರರನ್ನು ಹೇಗೆ ನಿಭಾಯಿಸಬೇಕು ಎಂಬುದನ್ನು ಹೇಳಿಕೊಟ್ಟರು. ಅದು ಅತ್ಯಂತ ಯಶಸ್ವಿ ಕಾರ್ಯಕ್ರಮವಾಯಿತು. ಅಲ್ಲದೆ ಸಂಘಟನೆ ಕೇಂದ್ರಿತ ಚುನಾವಣೆಗಳೂ ಕೂಡ ವಿಶಿಷ್ಟ ಹಾಗೂ ಯಶಸ್ವಿ ಪ್ರಯೋಗವೆನಿಸಿದವು.

ಈ ಎಲ್ಲ ಯೋಜನೆಗಳ ಹಿಂದೆ ನರೇಂದ್ರ ಮೋದಿಯವರ ಪಾತ್ರ ಮತ್ತು ಪರಿಶ್ರಮ ವಿತ್ತು.

**ಬಿಜೆಪಿ ಅಧಿಕಾರಗ್ರಹಣ, ಮೋದಿ ಕಾರಣ**

ಉತ್ತರ ಪ್ರದೇಶ, ಮಧ್ಯಪ್ರದೇಶ, ಹಿಮಾಚಲ ಪ್ರದೇಶ, ರಾಜಸ್ಥಾನ, ಅಸ್ಸಾಂ ಮುಂತಾದ ಐದು ರಾಜ್ಯಗಳಿಗೆ ನಡೆದ ಚುನಾವಣೆಯಲ್ಲಿ ಕಳಪೆ ಪ್ರದರ್ಶನ ನೀಡಿದ್ದ ಬಿಜೆಪಿಯ ಪಾಲಿಗೆ 1995ರ ಗುಜರಾತ್ ವಿಧಾನಸಭೆ ಚುನಾವಣೆ ಅತ್ಯಂತ ಮಹತ್ವದ ವಿಷಯವಾಯಿತು. ಇನ್ನೊಂದೆಡೆ ಕಾಂಗ್ರೆಸ್ ಹಲವಾರು ಸಮಸ್ಯೆಗಳೊಂದಿಗೇ ಕಣಕ್ಕಿಳಿಯಬೇಕಾಯಿತು. ಮೊದಲನೆಯದಾಗಿ, ಚಿಮಣ್‌ಭಾಯಿಯವರ ವರ್ಚಸ್ಸನ್ನು ಸರಿದೂಗಿಸುವಂತಹ ನಾಯಕರಾರೂ ಕಾಂಗ್ರೆಸ್‌ನಲ್ಲಿರಲಿಲ್ಲ, ಜನತಾದಳ(ಜಿ)ದ ವಿಲೀನದೊಂದಿಗೆ ಕಾಂಗ್ರೆಸ್ ಪಕ್ಷದೊಳಗಿನ ಒಳಜಗಳ ತೀವ್ರಗೊಂಡಿತ್ತು. ಪಕ್ಷದಲ್ಲಿ ನಾಲ್ಕು ಬಣಗಳಿದ್ದವು. ಒಂದು ಬಣಕ್ಕೆ ಚಿಮಣ್‌ಭಾಯಿಯವರ ಪತ್ನಿ ಊರ್ಮಿಳಾಬೇನ್ ನಾಯಕಿಯಾಗಿದ್ದರೆ, ಛಬಿಲ್ ದಾಸ್ ಮೆಹ್ತಾ ಅವರ ಬಣವೊಂದಿತ್ತು. ಪ್ರಬೋದ್ ರಾವಲ್ ಮತ್ತು ಎರಡು ಬಾರಿ ಮುಖ್ಯಮಂತ್ರಿಯಾಗಿದ್ದ ಮಾಧವ್‌ಸಿನ್ಹ ಸೋಳಂಕಿಯವರ ಬಣಗಳೂ ಇದ್ದವು. ಇಂತಹ ಸಮಸ್ಯೆಗಳಿಗೆ ಮತ್ತೊಂದು ಸೇರ್ಪಡೆಯೆಂಬಂತೆ ಬಹುಜನ ಸಮಾಜಪಕ್ಷ(ಬಿಎಸ್‌ಪಿ) ಕೂಡ ಚುನಾವಣಾ ಕಣಕ್ಕಿಳಿಯಿತು. ಕಾಂಗ್ರೆಸ್‌ನ ಸಾಂಪ್ರದಾಯಿಕ ಮತಗಳಾದ ದಲಿತರ ವೋಟುಗಳನ್ನು ಬಿಎಸ್‌ಪಿ ಕಸಿದುಕೊಳ್ಳುವ ಅಪಾಯ ಎದುರಾಯಿತು.

ಇಂತಹ ಸಮಸ್ಯೆಗಳನ್ನು ಇನ್ನಷ್ಟು ಹೆಚ್ಚು ಮಾಡುವಂತೆ ಕೇಂದ್ರ ಸರಕಾರ ಚುನಾವಣೆ ಸಂದರ್ಭದಲ್ಲಿ ವಿಶ್ವ ಹಿಂದೂ ಪರಿಷತ್ ಮೇಲೆ ನಿಷೇಧ ಹೇರಿತು. ಅದು ಬಿಜೆಪಿ ಪಾಲಿಗೆ ಬ್ರಹ್ಮಾಸ್ತ್ರವಾಯಿತು. ವಿಧಾನಸಭೆಯ ಒಟ್ಟು 182 ಸ್ಥಾನಗಳಲ್ಲಿ 121 ಬಿಜೆಪಿಯ ಪಾಲಾ

ದವು. ಕಾಂಗ್ರೆಸ್‌ಗೆ ದೊರೆತಿದ್ದು ಕೇವಲ 45 ಸೀಟುಗಳು. 1952ರಲ್ಲಿ ನಡೆದಿದ್ದ ದೇಶದ ಮೊಟ್ಟ ಮೊದಲ ಸಾರ್ವತ್ರಿಕ ಚುನಾವಣೆಯಲ್ಲಿ ಕೇವಲ 4000 ಮತಗಳನ್ನು ಪಡೆದಿದ್ದ ಬಿಜೆಪಿ (ಆಗಿನ ಜನಸಂಘ) ನಾಲ್ಕು ದಶಕಗಳ ನಂತರ ಅಂದರೆ 1995ರಲ್ಲಿ 6,624,711 ಮತಗಳನ್ನು ಗಳಿಸಿತು! ಇದು ಜನಪ್ರಿಯತೆಯಲ್ಲಿನ ದಾಪುಗಾಲಾಗಿತ್ತು. ಭಾರತದ ಇತಿಹಾಸದಲ್ಲಿ ಯಾವ ಪಕ್ಷಗಳೂ ಅಂತಹ ಅಮೋಘ ಪ್ರಗತಿಯನ್ನು ಕಂಡಿರಲಿಲ್ಲ. ಪಂಚಾಯಿತಿ ಚುನಾವಣೆಯಲ್ಲಂತೂ ಶೇ. 98ರಷ್ಟು ಸ್ಥಾನಗಳು ಬಿಜೆಪಿಯ ಪಾಲಾದವು. ಕೆಲವು ಪಂಚಾಯಿತಿಗಳಲ್ಲಿ ಬಿಜೆಪಿ ಶೇ. 100ಕ್ಕೆ 100ರಷ್ಟು ಯಶಸ್ಸು ಕಂಡಿತು. ಗುಜರಾತ್‌ನಲ್ಲಿ ಬಿಜೆಪಿ ಸಾಧಿಸಿದ ಅಮೋಘ ಜಯಕ್ಕೆ ನರೇಂದ್ರ ಮೋದಿಯವರೇ ಮುಖ್ಯ ಕಾರಣ ಎಂದು ಮಾಧ್ಯಮಗಳು ಹಾಗೂ ರಾಜಕೀಯ ವಿಶ್ಲೇಷಕರು ವರ್ಣಿಸಿದರು. ಹೀಗೆ ರಾಜ್ಯ ವಿಧಾನಸಭೆ ಮತ್ತು ಸ್ಥಳೀಯ ಸಂಸ್ಥೆಗಳ ಚುನಾವಣೆಗಳಲ್ಲಿನ ಯಶಸ್ಸನ್ನು ಮೋದಿಯವರಿಗೆ ಅರ್ಪಿಸಲಾಯಿತು. ಮೋದಿ ವಿಜಯದ ಶಿಲ್ಪಿಯಾದರು. ಆದರೆ ಬಿಜೆಪಿ ಕಂಡ ಅದ್ಭುತ ಜಯ ಪಕ್ಷಕ್ಕೇ ತಲೆನೋವಾಯಿತು.

ಅದು ಹೇಗೆ?

ಅತ್ಯಂತ ಪ್ರಭಾವಿ ಎನಿಸಿರುವ ಪಕ್ಷದ ಸಂಘಟನಾ ಕಾರ್ಯದರ್ಶಿಯ ಸ್ಥಾನಕ್ಕೆ ಮರುಜೀವ ನೀಡಿದ್ದು 1980ರ ದಶಕದಲ್ಲಿ. ಆದರೆ ಹೊರಗಿನವರಿಗೆ ಮಣೆ ಹಾಕುವ ನೀತಿಗೆ ಈ ಸ್ಥಾನ ದೊಡ್ಡ ಅಡಚಣೆಯಾಯಿತು. ಸಾಮಾನ್ಯವಾಗಿ ಆರೆಸ್ಸೆಸ್‌ನ ಪ್ರಚಾರಕರಾಗಿದ್ದವರೇ ಪಕ್ಷದ ಸಂಘಟನಾ ಕಾರ್ಯದರ್ಶಿಯಾಗುತ್ತಾರೆ. ತೆರೆಯ ಹಿಂದಿನಿಂದ ಪಕ್ಷವನ್ನು ಮುನ್ನಡೆಸುವ ಜವಾಬ್ದಾರಿ ಅದಾಗಿರುತ್ತದೆ. ಇಲ್ಲಿ ಗಮನಿಸಬೇಕಾದ ಅಂಶವೇನೆಂದರೆ ಪಕ್ಷದೊಳಗೆ ಸಂಘಟನಾ ಕಾರ್ಯದರ್ಶಿಯೇ ಸುಪ್ರೀಂ. ಅಧ್ಯಕ್ಷರಿಗಿಂತ ಪ್ರಭಾವಿ ಸ್ಥಾನವದು. ಆದರೆ ಸರಕಾರದಲ್ಲಿ ಭಾಗಿಯಾಗುವ, ಮಂತ್ರಿಯಾಗುವ ಅವಕಾಶ ಇರುವುದಿಲ್ಲ. ಪಕ್ಷಕ್ಕಾಗಿ ನಿಸ್ವಾರ್ಥವಾಗಿ ದುಡಿಯಬೇಕು. ಆದರೂ 1980ರಲ್ಲಿ ಬಿಜೆಪಿ ಅಸ್ತಿತ್ವಕ್ಕೆ ಬಂದಾಗ ಪಕ್ಷದ ಸಂಘಟನಾ ಕಾರ್ಯದರ್ಶಿ ಸ್ಥಾನವನ್ನು 'ಜನಸಂಘದ ಪರಂಪರೆ' ಎಂದು ಭಾವಿಸಿ ಪಕ್ಷದ ನೂತನ ವ್ಯವಸ್ಥೆಯಲ್ಲಿ ಆ ಸ್ಥಾನವನ್ನು ತೆಗೆದುಹಾಕಲಾಗಿತ್ತು. ಆದರೆ 1984ರ ಲೋಕಸಭೆ ಚುನಾವಣೆಯಲ್ಲಿ ಪಕ್ಷ ಹೀನಾಯ ಸೋಲು ಅನುಭವಿಸಿದ ನಂತರ ಆ ಸ್ಥಾನಕ್ಕೆ ಮರುಜೀವ ನೀಡಲಾಗಿತ್ತು. ಗುಜರಾತ್‌ನಲ್ಲಿ ಪಕ್ಷದ ಸಂಘಟನಾ ಕಾರ್ಯದರ್ಶಿಯಾಗಿದ್ದ ನರೇಂದ್ರ ಮೋದಿ ಆರೆಸ್ಸೆಸ್‌ನ ಪ್ರಚಾರಕರೂ ಆಗಿದ್ದವರೇ. ಸ್ಥಾನದ ಮಹಿಮೆಯಿಂದ ಭಾರಿ ಪ್ರಭಾವವನ್ನೂ ಹೊಂದಿದ್ದರು. ಒಬ್ಬ ಸಮರ್ಥ ಸಂಘಟಕರೂ ಆಗಿದ್ದ ಮೋದಿಯವರು ಪಕ್ಷದ





ಆಂತರಿಕ ವ್ಯವಸ್ಥೆಯನ್ನು ವ್ಯವಸ್ಥಿತಗೊಳಿಸಿದರು. ಅದು ಕೆಲವರ ಕಣ್ಣು ಕೆಂಪಾಗಿಸಿದ್ದೂ ಇದೆ. ಅದರಲ್ಲೂ ಕಾಶಿರಾಂ ರಾಣಾ ಅವರು ಗುಜರಾತ್ ಬಿಜೆಪಿಯ ಅಧ್ಯಕ್ಷರಾದಾಗ ನರೇಂದ್ರ ಮೋದಿಯವರನ್ನು ಪಕ್ಷದ ಪ್ರಧಾನ ಕಾರ್ಯದರ್ಶಿಯಾಗಿ ಮರುನಾಮಕರಣ ಮಾಡಲು ನಿರಾಕರಿಸಿದರು. ಮೋದಿ ಬದಲಿಗೆ ಸುರೇಶ್ ಮೆಹ್ತಾ ಅವರಿಗೆ ಮಣೆ ಹಾಕಲು ಮುಂದಾದರು. ಇದು ಪಕ್ಷದ ಮೇಲೆ ತನಗಿರುವ ಹಿಡಿತಕ್ಕೆ ಕಡಿವಾಣ ಹಾಕುವ ಪ್ರಯತ್ನ ಎಂದು ಭಾವಿಸಿದ ಆರೆಸ್ಸೆಸ್ ನರೇಂದ್ರ ಮೋದಿಯವರನ್ನು ಮರುನಾಮಕರಣ ಮಾಡುವಂತೆ ರಾಣಾ ಅವರ ಮೇಲೆ ಒತ್ತಡ ಹೇರಿತು. ಬಿಜೆಪಿಯ ರಾಷ್ಟ್ರೀಯ ಅಧ್ಯಕ್ಷರಾಗಿದ್ದ ಲಾಲ್‌ಕೃಷ್ಣ ಆಡ್ವಾಣಿಯವರು ಕೂಡ ನರೇಂದ್ರ ಮೋದಿಯವರ ಪರ ನಿಂತರು. ಹೀಗಾಗಿ ಪಕ್ಷದ ಹಿರಿಯ ನಾಯಕರಾಗಿದ್ದ ಶಂಕರ್‌ಸಿನ್ಹ ವಾಘೇಲಾ, ಕಾಶೀರಾಂ ರಾಣಾ ಮತ್ತು ಸುರೇಶ್ ಮೆಹ್ತಾ ತಮ್ಮನ್ನು ಅವಮಾನಿಸಲಾಗಿದೆ ಎಂದು ಭಾವಿಸಿದರು. ಆದರೆ ಪಕ್ಷದ ರಾಷ್ಟ್ರೀಯ ಅಧ್ಯಕ್ಷ ಆಡ್ವಾಣಿ ಹಾಗೂ ಸಂಘದ ಮೂವರು ಹಿರಿಯ ನಾಯಕರು ಬಯಸಿರುವಾಗ ಮೋದಿಯವರನ್ನು ಹೇಗೆ ತಾನೇ ದೂರಲು ಸಾಧ್ಯ? ಅಷ್ಟಕ್ಕೂ ವಿಧಾನಸಭೆ ಚುನಾವಣೆಯಲ್ಲಿ ಬಿಜೆಪಿಗೆ ಗೆಲುವು ತಂದುಕೊಟ್ಟಿದ್ದು ಮೋದಿಯವರ ಸಂಘಟನಾ ಚಾಕಚಕ್ಯತೆಯೇ ಅಲ್ಲವೆ?

ಇದೇನೇ ಇರಲಿ, 1995, ಫೆಬ್ರವರಿ 20ರಂದು ಫಲಿತಾಂಶ ಘೋಷಣೆಯಾದ ಕೂಡಲೇ ಕೇಶುಭಾಯಿ ಪಟೇಲ್ ಮುಂದಿನ ಮುಖ್ಯಮಂತ್ರಿಯಾಗುವುದು ಖಚಿತವಾಗಿತ್ತು. ಅವರ ಆಯ್ಕೆ ಯಾರಿಗೂ ಆಶ್ಚರ್ಯವನ್ನೂ ತರಲಿಲ್ಲ. ಒಂದು ವೇಳೆ ಬಿಜೆಪಿ ಅಧಿಕಾರಕ್ಕೆ ಬಂದರೆ ಕೇಶುಭಾಯಿ ಪಟೇಲ್ ಅವರೇ ಮುಖ್ಯಮಂತ್ರಿಯಾಗುತ್ತಾರೆ ಎಂದು ಲಾಲ್‌ಕೃಷ್ಣ ಆಡ್ವಾಣಿಯವರು ಚುನಾವಣೆಗೂ ಮೊದಲೇ ಘೋಷಿಸಿದ್ದರು.





# 19
# ಬಿಗ್
# ಫೈಟ್!

ಗುಜರಾತ್ ಗೆಲುವು ಬಿಜೆಪಿಗೆ ಅತೀವ ಖುಷಿ ಕೊಟ್ಟಿತು. "ನಮ್ಮ ನಿರೀಕ್ಷೆಗೂ ಮೀರಿ ವಿಜಯ ಸಿಕ್ಕಿದೆ" ಎಂದು ಅಟಲ್ ಬಿಹಾರಿ ವಾಜಪೇಯಿಯವರೇ ವರ್ಣಿಸಿದರು. 1995, ಮಾರ್ಚ್ 14ರಂದು ಗುಜರಾತ್‌ನ ಮೊಟ್ಟಮೊದಲ ಬಿಜೆಪಿ ಮುಖ್ಯಮಂತ್ರಿಯಾಗಿ ಕೇಶುಭಾಯಿ ಪಟೇಲ್ ಪ್ರಮಾಣವಚನ ಸ್ವೀಕರಿಸಿದರು. ಆದರೆ ಅವರ ಮುಂದಿನ ಹಾದಿ ಸುಗಮವಾಗಿರಲಿಲ್ಲ, ಪ್ರಾರಂಭದಲ್ಲೇ ಸಮಸ್ಯೆ ಆರಂಭವಾಯಿತು. ಸಂಪುಟ ರಚನೆ ದೊಡ್ಡ ಅಡಚಣೆಯಾಯಿತು. ಮಂತ್ರಿಮಂಡಲವನ್ನು ರಚಿಸಲು ವಾರ ಬೇಕಾಯಿತು. ಪ್ರತಿಯೊಬ್ಬರೂ ಮಂತ್ರಿಯಾಗುವ ಮಹತ್ವಾಕಾಂಕ್ಷೆ ಹೊಂದಿದ್ದರು. ಈ ಹಿನ್ನೆಲೆಯಲ್ಲಿ 33 ಸಚಿವರ ಜಂಬೋ ಮಂತ್ರಿಮಂಡಲವನ್ನು ರಚಿಸಬೇಕಾಗಿ ಬಂತು. ಕೇಶುಭಾಯಿ ಪಟೇಲರ ತವರೂರಾದ ಸೌರಾಷ್ಟ್ರಕ್ಕೆ ಹೆಚ್ಚಿನ ಪ್ರಾತಿನಿಧಿತ್ವ ನೀಡಲಾಗಿದೆ ಎಂಬ ಆರೋಪ, ಒಳ್ಳೆಯ ವ್ಯಕ್ತಿಗಳಿಗೆ ಮಂತ್ರಿಸ್ಥಾನ ನೀಡಲಾಗಿಲ್ಲ ಎಂಬ ಟೀಕೆಗಳೂ ಕೇಳಿಬಂದವು.

ಆದರೆ ವಾಸ್ತವದಲ್ಲಿ ಮಂತ್ರಿಮಂಡಲದ ಸಚಿವರನ್ನು ಆಯ್ಕೆ ಮಾಡಿದ್ದುದು ಕೇಶುಭಾಯಿಯಲ್ಲ, ನರೇಂದ್ರಭಾಯಿ!

ಅಸಮಾಧಾನ ವ್ಯಕ್ತಪಡಿಸಿದವರಲ್ಲಿ ಶಂಕರ್‌ಸಿನ್ಹ ವಾಘೇಲಾ ಮೊದಲಿಗರು. ಮಂತ್ರಿ ಮಂಡಲ ರಚಿಸುವ ಮೊದಲು ತಮ್ಮ ಸಲಹೆಯನ್ನೇ ಕೇಳಲಿಲ್ಲ ಎಂದು ಬಂಡಾಯದ ಭಾವುಟ ಹಾರಿಸಿದರು. ಅಂದರೆ ನರೇಂದ್ರ ಮೋದಿಯವರು ಯಾರ ಅಭಿಪ್ರಾಯವನ್ನೂ ಕೇಳದೆ ತಮ್ಮ ಇಚ್ಛೆಗನುಗುಣವಾಗಿ ಸಂಪುಟ ರಚಿಸಿದ್ದಾರೆ ಎಂಬುದೇ ಆ ಮಾತಿನ ಪರೋಕ್ಷ ಅರ್ಥವಾಗಿತ್ತು. ಹೀಗೆ ರಾತ್ರಿ ಕಳೆದು ಬೆಳಗಾಗುವಷ್ಟರಲ್ಲಿ ಮೋದಿ ವಿಲನ್ ಆದರು. ತಮ್ಮ ಬಗ್ಗೆ ನಕಾರಾತ್ಮಕ ಪ್ರಚಾರಾಂದೋಲನ ನಡೆಯುತ್ತಿದ್ದರೂ ಮೋದಿ ಮಾತ್ರ ಜನರಿಗೆ

ಸ್ವ-ಆಡಳಿತ ನಡೆಸುವ ಬಗ್ಗೆ ತರಬೇತಿ ನೀಡುವ ಕಾರ್ಯದಲ್ಲಿ ತಲ್ಲೀನರಾಗಿದ್ದರು. ಕೇವಲ ಎರಡು ತಿಂಗಳುಗಳ ಅವಧಿಯಲ್ಲಿ 10 ಸಾವಿರ ಮಂದಿಗೆ ತರಬೇತಿ ನೀಡಬೇಕಿತ್ತು. 1995, ಜೂನ್‌ನಲ್ಲಿ ನಡೆದ ಚುನಾವಣೆಯಲ್ಲಿ ಎಲ್ಲ 6 ಮಹಾನಗರ ಪಾಲಿಕೆಗಳು ಹಾಗೂ 19ರಲ್ಲಿ 18 ಜಿಲ್ಲಾ ಪಂಚಾಯಿತಿಗಳನ್ನು ಬಿಜೆಪಿ ಗೆದ್ದುಕೊಂಡಿತು. ಸೂರತ್ ಮಹಾನಗರ ಪಾಲಿಕೆ ಚುನಾವಣೆಯಲ್ಲಂತೂ ಬಿಜೆಪಿ ಎಲ್ಲ ಸ್ಥಾನಗಳಲ್ಲೂ ಜಯಗಳಿಸಿತು. ಬಿಜೆಪಿ ಸದಸ್ಯರೂ ಕೂಡ ರಾಜಕೀಯ ಮಹತ್ವಾಕಾಂಕ್ಷೆಗಳಿಂದ ಮುಕ್ತರಾಗಿರಲಿಲ್ಲ, ಅಧಿಕಾರಕ್ಕಾಗಿ ಮೇಲಾಟ ಆರಂಭವಾಯಿತು. ಶಿಸ್ತಿನ ಬಗ್ಗೆ ಯಾರಿಗೂ ಅಂಜಿಕೆಯಿರಲಿಲ್ಲ, ಅದರಲ್ಲೂ ಶಂಕರ್‌ಸಿನ್ಹ ವಾಘೇಲಾ ಅವರಿಗಂತೂ ಇರಲಿಲ್ಲ, ಕೇಶುಭಾಯಿ ವಿರುದ್ಧ ವೈಷಮ್ಯ ಸಾಧಿಸಲು ಮುಂದಾದರು. ಎಲ್ಲ ಮುಖ್ಯ ನಿರ್ಧಾರಗಳನ್ನು ಕೈಗೊಳ್ಳುವ ಮೊದಲು ತಮ್ಮ ಸಲಹೆ ಕೇಳಬೇಕೆಂದು ಬಯಸಿದರು. ಪ್ರಮುಖವಾಗಿ ರಾಜ್ಯ ಸರಕಾರದ 42 ನಿಗಮ ಮಂಡಳಿಗಳು ಹಾಗೂ ಪಾಲಿಕೆಗಳ ಅಧ್ಯಕ್ಷರನ್ನು ನೇಮಕ ಮಾಡುವಾಗ ತಮ್ಮನ್ನು ಕೇಳದೇ ಮಾಡಬಾರದು ಎಂದುಕೊಂಡಿದ್ದರು. ಆದರೆ ಕೇಶುಭಾಯಿ ಅಧಿಕಾರ ಹಂಚಿಕೊಳ್ಳಲು ಸಿದ್ಧರಿರಲಿಲ್ಲ, ಹಾಗಾಗಿ ಕೇಶುಭಾಯಿ ವಿದೇಶಕ್ಕೆ ಪ್ರವಾಸ ಹೊರಡುವ ವೇಳೆಗೆ ಉಭಯ ನಾಯಕರ ನಡುವಿನ ಸಂಘರ್ಷ ಇನ್ನೂ ಗಂಭೀರ ರೂಪಕ್ಕೆ ತಿರುಗಿತು. "ನಿಗಮ ಮಂಡಳಿಯ ಅಧ್ಯಕ್ಷರ ನೇಮಕಾತಿಯಲ್ಲಿ ಮೂಗು ತೂರಿಸಬೇಡ" ಎಂದು ಕೇಶುಭಾಯಿ ಖಾರವಾಗಿ ಹೇಳಿದಾಗ, 'ವಿದೇಶದಿಂದ ವಾಪಸಾಗುವ ವೇಳೆಗೆ ನೀನು ಮುಖ್ಯಮಂತ್ರಿಯಾಗಿರುವುದೇ ಇಲ್ಲ" ಎಂದು ವಾಘೇಲಾ ಮಾರುತ್ತರ ನೀಡಿದರು. ಅಲ್ಲಿಗೆ ಇಬ್ಬರ ನಡುವಿನ ಸಂಬಂಧ ಸರಿಪಡಿಸಲಾಗದಷ್ಟು ಹಳಸಿತು.

ಆದರೂ 1995, ಸೆಪ್ಟೆಂಬರ್ 8ರಂದು ಅಮೆರಿಕ ಪ್ರವಾಸಕ್ಕೆ ಹೊರಟೇಬಿಟ್ಟರು ಕೇಶುಭಾಯಿ. ಗುಜರಾತ್‌ನ ಅಭಿವೃದ್ಧಿಗಾಗಿ ಅನಿವಾಸಿ ಭಾರತೀಯರಿಂದ ನಿಧಿ ಸಂಗ್ರಹಿಸುವುದು ಅವರ ಉದ್ದೇಶವಾಗಿತ್ತು. ಅವರ ಜತೆ ದೊಡ್ಡ ನಿಯೋಗವೂ ಹೊರಟಿತ್ತು. ಆದರೆ ವಾಘೇಲಾ ಅವರನ್ನೂ ಕರೆದುಕೊಂಡು ಹೋಗುವುದಕ್ಕೆ ಕೇಶುಭಾಯಿ ತಡೆಯೊಡ್ಡಿದರು. ಇದು ವಾಘೇಲಾ ಅವರನ್ನು ಮತ್ತಷ್ಟು ರೊಚ್ಚಿಗೇಳಿಸಿತು. ಕೇಶುಭಾಯಿಯವರ ಅನುಪಸ್ಥಿತಿಯಲ್ಲಿ ಮುಖ್ಯಮಂತ್ರಿಯ ಜವಾಬ್ದಾರಿ ವಹಿಸಿಕೊಂಡಿದ್ದ ಅಶೋಕ್ ಭಟ್, ವಿವಿಧ ನಿಗಮ ಮಂಡಳಿಗಳ ಅಧ್ಯಕ್ಷ ಸ್ಥಾನಗಳಿಗೆ ನೇಮಕ ಮಾಡಲಾಗಿರುವವರ ಪಟ್ಟಿಯನ್ನು ಘೋಷಣೆ ಮಾಡಿದರು. ಬೆಂಕಿಗೆ ತುಪ್ಪ ಸುರಿದಂತಾಯಿತು. ವಾಘೇಲಾ ಬಂಡಾಯದ ಭಾವುಟ ಹಾರಿಸಿಯೇ ಬಿಟ್ಟರು. ಅದು ಮೂಲತಃ ವೈಯಕ್ತಿಕ ಅಹಂಗಳ ನಡುವಿನ ಘರ್ಷಣೆಯಾಗಿತ್ತು.





ಅದರಲ್ಲಿ ಯಾವ ಸೈದ್ಧಾಂತಿಕ ಅಂಶಗಳೂ ಇರಲಿಲ್ಲ, ರಾಜ್ಯ ಬಿಜೆಪಿಯಲ್ಲಿನ ಸರ್ವಾಧಿಕಾರಿ ಧೋರಣೆ, ಸ್ವಜನ ಪಕ್ಷಪಾತ ಮತ್ತು ಗೂಂಡಾಯಿಸಂ ವಿರುದ್ಧ ಪ್ರತಿಭಟಿಸುವ ಸಲುವಾಗಿ 1995, ಸೆಪ್ಟೆಂಬರ್ 25ರಂದು ವಾಘೇಲಾ ಸಭೆಯೊಂದನ್ನು ಆಯೋಜಿಸಿದರು. ಅವರು ಪಕ್ಷದ ಹೈಕಮಾಂಡ್ ಮುಂದೆ ತಮ್ಮ ಅಸಮಾಧಾನ ಮತ್ತು ಕೋಪವನ್ನು ತೋಡಿಕೊಳ್ಳಬಹುದಿತ್ತು. ಅವರ ವರ್ತನೆ ತೀರಾ ವಿಚಿತ್ರವೆನಿಸಿತು. ವಾಘೇಲಾ ಸಭೆ ನಡೆದು ಎರಡು ದಿನಗಳ ನಂತರ ಗುಜರಾತ್ ಬಿಜೆಪಿಯೂ ಒಂದು ಸಭೆ ನಡೆಸಿತು. ಅದರಲ್ಲಿ ಭಾಗಿಯಾಗಿದ್ದು ಕೇವಲ 60 ಶಾಸಕರು. ವಾಘೇಲಾ ಕರೆದಿದ್ದ ಸಭೆಯಲ್ಲಿ 47 ಎಂಎಲ್‌ಎಗಳು ಪಾಲ್ಗೊಂಡಿದ್ದರು! ಅವರು ನರೇಂದ್ರ ಮೋದಿ ವಿರುದ್ಧ ಕೋಪ-ತಾಪ ವ್ಯಕ್ತಪಡಿಸಿದ್ದರು. ಹತಾಶರಾದ ಮೋದಿ ಪಕ್ಷದ ಪ್ರಧಾನ ಕಾರ್ಯದರ್ಶಿ ಸ್ಥಾನಕ್ಕೆ ರಾಜೀನಾಮೆ ನೀಡಿದರು. ಅದಕ್ಕೆ ಕಾರಣವನ್ನು ವಿವರಿಸಿ ಪಕ್ಷದ ರಾಜ್ಯ ಘಟಕದ ಅಧ್ಯಕ್ಷ ಕಾಶೀರಾಮ್ ರಾಣಾ ಅವರಿಗೆ ಪತ್ರವೊಂದನ್ನು ಬರೆದರು.

**ಗೌರವಾನ್ವಿತ ಶ್ರೀ ಕಾಶೀರಾಮ್ ಭಾಯಿ,**

ನಿಮಗೆ ಸಸ್ನೇಹ ನಮಸ್ಕಾರಗಳು.

ಇಂದು ಗುಜರಾತ್ ಜನರ ಆಶೋತ್ತರಗಳ ಮೇಲೆ ಹಲವಾರು ಪ್ರಶ್ನಾರ್ಥಕ ಚಿಹ್ನೆಗಳು ಮೂಡಿವೆ. ಪಕ್ಷದ ಸಾವಿರಾರು ಕಾರ್ಯಕರ್ತರು ಹಗಲಿರುಳು ದುಡಿದು ಜಯ ತಂದುಕೊಟ್ಟಿದ್ದಾರೆ. ಆದರೆ ಗೆದ್ದುಬಂದ ನಂತರ ಸಂಭವಿಸುತ್ತಿರುವ ಘಟನೆಗಳು ಪಕ್ಷದ ಘನತೆಗೆ ಕುಂದು ತರುತ್ತಿವೆ. ಜನರ ಮುಂದೆ ಸತ್ಯ ಬಯಲಾಗಿದೆ. ಕಳೆದ ಎರಡು ದಿನಗಳಲ್ಲಿ ನಡೆದ ಘಟನೆಗಳೇ ಅದಕ್ಕೆ ಸಾಕ್ಷಿ. ಪಕ್ಷದ ಹಿತದೃಷ್ಟಿಯಿಂದ ನಾನು ಬಹಳ ಕಾಲದಿಂದಲೂ ಮೌನವಾಗಿದ್ದೆ. ಈ ಹಿಂದೆ ಹಲವು ಬಾರಿ ನಿಮ್ಮನ್ನು ಭೇಟಿಯಾಗಿ ಎಲ್ಲ ಜವಾಬ್ದಾರಿಗಳಿಂದಲೂ ನನ್ನನ್ನು ಮುಕ್ತಗೊಳಿಸಿ ಎಂದು ಕೇಳಿಕೊಂಡಿದ್ದೆ. ಇಂದು ಸನ್ನಿವೇಶ ಬಹಳ ಸೂಕ್ಷ್ಮವಾಗಿದೆ. ಕಳೆದೆರಡು ದಿನಗಳಲ್ಲಿ ನಡೆದ ಘಟನೆಗಳು ನನ್ನ ಅಮಾಯಕತೆಯನ್ನು ಸಾಬೀತುಪಡಿಸಿವೆ. ಆದರೂ ನಾನು ಪಡೆದಿರುವ ಸಂಸ್ಕಾರ, ಪಕ್ಷದ ಕಾರ್ಯಕರ್ತನಾಗಿರುವ ನನ್ನ ಪಾತ್ರದ ಬಗ್ಗೆ ಮರುಚಿಂತನೆ ಮಾಡುವಂತೆ ಮಾಡಿದೆ.

ನನಗೊಂದು ಕಥೆ ನೆನಪಾಗುತ್ತಿದೆ. ಮಗುವೊಂದು ತನಗೆ ಸೇರಬೇಕೆಂದು ನಿಜವಾದ ತಾಯಿ ಹಾಗೂ ಮಲತಾಯಿ ಜಗಳಕ್ಕೆ ನಿಂತಿರುತ್ತಾರೆ. ವಿಷಯ ನ್ಯಾಯಾಲಯದ ಕಟಕಟೆ ಹತ್ತುತ್ತದೆ. ಮಗುವನ್ನು ಎರಡು ತುಂಡು ಮಾಡಿ ಹಂಚಿಕೊಳ್ಳಿ ಎನ್ನುತ್ತಾರೆ ನ್ಯಾಯಾಧೀಶರು. ಆದರೆ ತುಂಡರಿಸಬೇಡಿ ಎಂದು ಅಂಗಲಾಚುತ್ತಾಳೆ ನಿಜವಾದ ತಾಯಿ. ಇದೇ ಹಿನ್ನೆಲೆಯಲ್ಲಿ

ನಾನೂ ಕೂಡ ಅಂತಹದ್ದೇ ನಿರ್ಧಾರಕ್ಕೆ ಬಂದಿದ್ದೇನೆ. ಪಕ್ಷದ ಹಿತದೃಷ್ಟಿಯಿಂದ ನಾನೇ 'ಬಲಿ'ಯಾಗಲು ಸಿದ್ಧನಾಗಿದ್ದೇನೆ. ಪ್ರಧಾನ ಕಾರ್ಯದರ್ಶಿ ಸ್ಥಾನಕ್ಕೆ ರಾಜೀನಾಮೆ ನೀಡುವ ನಿರ್ಧಾರಕ್ಕೆ ಬಂದಿದ್ದೇನೆ. ಇನ್ನು ಮುಂದೆಯಾದರೂ ಯಾರೂ ನನ್ನ ಹೆಸರಿನಲ್ಲಿ ಏನನ್ನೂ ಮಾಡುವುದಿಲ್ಲ ಎಂದು ನಂಬಿದ್ದೇನೆ. ಈ ಹಿಂದಿನಂತೆ ತಿರಸ್ಕರಿಸದೆ ನನ್ನ ರಾಜೀನಾಮೆಯನ್ನು ಸ್ವೀಕರಿಸಬೇಕೆಂದು ವಿನಯಪೂರ್ವಕವಾಗಿ ಕೇಳಿಕೊಳ್ಳುತ್ತೇನೆ. ಇದೇ ಸಂದರ್ಭದಲ್ಲಿ ನಿಮ್ಮ ಮೂಲಕ ಬಿಜೆಪಿಯ ಸಾವಿರಾರು ಕಾರ್ಯಕರ್ತರಿಗೆ ಧನ್ಯವಾದಗಳನ್ನು ಹೇಳಬಯಸುತ್ತೇನೆ. ಅಂತಹ ಋಣಭಾರ ನನ್ನ ಮೇಲಿದೆ.

ನಿಮಗೆ ನನ್ನ ವಿಶೇಷ ವಂದನೆಗಳು.

**ತಾಯಿ ಭಾರತೀಯ ಸೇವೆಗಾಗಿ ಸದಾ ನಿಮ್ಮವನಾಗಿರುವೆ.**

ನರೇಂದ್ರ ಮೋದಿ.

1995, ಸೆಪ್ಟೆಂಬರ್ 28ರಂದು ಈ ಪತ್ರ ಬರೆದ ನರೇಂದ್ರ ಮೋದಿ ಪಕ್ಷದ ಜವಾಬ್ದಾರಿಯಿಂದ ದೂರವಾದರು. ಅದೇ ದಿನ ಪತ್ರಿಕಾಗೋಷ್ಠಿಯೊಂದನ್ನು ಕರೆದ ಶಂಕರ್‌ಸಿನ್ಹ ವಾಘೇಲಾ, ವಿಧಾನಸಭೆಯಲ್ಲಿ ತಮಗೆ ಬಹುಮತವಿದೆ ಎಂದು ಪ್ರತಿಪಾದಿಸಿದರು. ಸ್ವಜನ ಪಕ್ಷಪಾತ ಹಾಗೂ ಭ್ರಷ್ಟಾಚಾರದ ಸಲುವಾಗಿ ರಾಜ್ಯ ಬಿಜೆಪಿ ವಿರುದ್ಧ ತೀವ್ರ ಟೀಕಾ ಪ್ರಹಾರ ಮಾಡಿದರು. ಪಕ್ಷದೊಳಗಿನ ತಿಕ್ಕಾಟದ ಬಗ್ಗೆ ನಿರ್ಲಕ್ಷ್ಯ ತೋರುತ್ತಿರುವುದಕ್ಕಾಗಿ ರಾಷ್ಟ್ರೀಯ ಅಧ್ಯಕ್ಷ ಲಾಲ್ ಕೃಷ್ಣ ಅಡ್ವಾಣಿಯವರ ವಿರುದ್ಧವೂ ಹರಿಹಾಯ್ದರು. ಅಲ್ಲದೆ ತಮ್ಮ ಬೆಂಬಲಿಗ ಶಾಸಕರನ್ನು ಹಿಡಿದಿಟ್ಟುಕೊಳ್ಳುವ ಸಲುವಾಗಿ ಗಾಂಧಿನಗರದಿಂದ 60 ಕಿ.ಮೀ. ದೂರದಲ್ಲಿರುವ ವಾಸನ್ ಎಂಬ ಗ್ರಾಮಕ್ಕೆ ಕರೆದೊಯ್ದರು. ಅಲ್ಲಿಂದ ವಿಮಾನದ ಮೂಲಕ ಮಧ್ಯಪ್ರದೇಶಕ್ಕೆ ಸಮೀಪದ ಖಜುರಾಹೋಗೆ ವರ್ಗಾಯಿಸಿದರು.

ಈ ಹಂತದಲ್ಲಿ ಬಿಜೆಪಿ ಹೈಕಮಾಂಡ್ ಶಿಸ್ತುಕ್ರಮ ಕೈಗೊಳ್ಳುವ ನಿರ್ಧಾರಕ್ಕೆ ಬಂತು. ಅಕ್ಟೋಬರ್ 5ರಂದು ಸಂಜೆ ಗಾಂಧಿನಗರಕ್ಕೆ ಆಗಮಿಸಿದ ಅಟಲ್ ಬಿಹಾರಿ ವಾಜಪೇಯಿ ಅವರು ಪಕ್ಷದ ಸ್ಥಳೀಯ ನಾಯಕರೊಂದಿಗೆ ಹಲವಾರು ಗಂಟೆಗಳ ಕಾಲ ಚರ್ಚೆ ನಡೆಸಿದರು. ಮುಖ್ಯಮಂತ್ರಿ ಕೇಶುಭಾಯಿ ಪಟೇಲ್ ಅವರೊಂದಿಗೆ ವಿಶೇಷವಾಗಿ ಚರ್ಚಿಸಿದ ವಾಜಪೇಯಿ, ರಾಜೀನಾಮೆ ನೀಡುವಂತೆ ಸೂಚಿಸಿದರು. ಒಲ್ಲದ ಮನಸ್ಸಿನಿಂದಲೇ ಸೈ ಎಂದ ಕೇಶುಭಾಯಿ ರಾಜೀನಾಮೆ ನೀಡಲು ಮುಂದಾದರು. ಅದು ಶಂಕರ್‌ಸಿನ್ಹ ವಾಘೇಲಾ ಅವರ ಅಶಿಸ್ತಿಗೆ ನೀಡಿದ ಬಹುಮಾನದಂತೆ ಕಂಡುಬಂತು!





ಆದರೆ ಅದೊಂದು ರಾಜೀಸೂತ್ರವಾಗಿತ್ತು. ಬಂಡಾಯವೆದ್ದಿದ್ದ ಶಾಸಕರು ಅಹಮದಾಬಾದ್‌ಗೆ ಮರಳಿ ಕೇಶುಭಾಯಿಯವರಿಗೆ ತಮ್ಮ ನಿಷ್ಠೆ ವ್ಯಕ್ತಪಡಿಸಬೇಕು ಮತ್ತು ವಿಶ್ವಾಸಮತ ಗೊತ್ತುವಳಿಯ ಪರ ಮತ ನೀಡಬೇಕು. ಅನಂತರ ಕೇಶಭಾಯಿ ರಾಜೀನಾಮೆ ನೀಡುತ್ತಾರೆ ಎಂಬುದೇ ಆ ರಾಜೀಸೂತ್ರವಾಗಿತ್ತು. ಅಕ್ಟೋಬರ್ 7ರಂದು ಎಲ್ಲವೂ ಅಂದುಕೊಂಡಂತೇ ಆಯಿತು. ವಿಶ್ವಾಸಮತ ಗೆದ್ದ ಕೇಶುಭಾಯಿ ಮರುದಿನವೇ ರಾಜೀನಾಮೆ ನೀಡಿದರು. ಇತ್ತ ವಾಘೇಲಾ ಮತ್ತೆ ಬಿಜೆಪಿ ಸೇರಿದರು.

ಆದರೆ ಮುಖ್ಯಮಂತ್ರಿ ಸ್ಥಾನ ಮಾತ್ರ ಸಿಗಲಿಲ್ಲ!

ಅವರ ಬದಲಿಗೆ ರಾಜೀ ಅಭ್ಯರ್ಥಿಯಾಗಿ ಸುರೇಶ್ ಮೆಹ್ತಾ ಮುಖ್ಯಮಂತ್ರಿಯಾದರು. ಆ ವೇಳೆಗೆ, ಮತ್ತೆ ಬಿಜೆಪಿಯನ್ನು ಸೇರಿದರೂ ಪಕ್ಷದಲ್ಲಿ ತಮಗೆ ಯಾವ ಭವಿಷ್ಯವೂ ಉಳಿದಿಲ್ಲ ಎಂಬುದು ವಾಘೇಲಾ ಅವರಿಗೂ ಗೊತ್ತಾಗಿತ್ತು. ಬಂಡಾಯವೇಳುವ ಮೂಲಕ ತಮ್ಮ ದೋಣಿಯನ್ನು ತಾವೇ ಮುಳುಗಿಸಿದ್ದರು. ಇತ್ತ ಪಕ್ಷದ ಹೈಕಮಾಂಡ್ ಕೇಶುಭಾಯಿ, ವಾಘೇಲಾ ಮತ್ತು ನರೇಂದ್ರ ಮೋದಿಯವರನ್ನು ಕ್ರಮವಾಗಿ ಪಕ್ಷದ ರಾಷ್ಟ್ರೀಯ ಉಪಾಧ್ಯಕ್ಷ, ರಾಷ್ಟ್ರೀಯ ಕಾರ್ಯಕಾರಿ ಸದಸ್ಯ ಹಾಗೂ ರಾಷ್ಟ್ರೀಯ ಕಾರ್ಯದರ್ಶಿಗಳನ್ನಾಗಿ ನೇಮಕ ಮಾಡಿತು. ಆದರೂ ಬಂಡಾಯವೆದ್ದಿದ್ದ ಶಾಸಕರು ಹಾಗೂ ಪಕ್ಷಕ್ಕೆ ನಿಷ್ಠರಾಗಿದ್ದ ಶಾಸಕರ ನಡುವಿನ ಭಿನ್ನಾಭಿಪ್ರಾಯ ಮತ್ತು ತಿಕ್ಕಾಟ ಮಾತ್ರ ಕೊನೆಗೊಳ್ಳಲಿಲ್ಲ. 1996 ಮೇನಲ್ಲಿ ನಡೆದ ಲೋಕಸಭೆ ಚುನಾವಣೆಯಲ್ಲಿ ಪಕ್ಷ ನಿಷ್ಠ ಶಾಸಕರು ಬಂಡಾಯವೆದ್ದಿದ್ದವರ ವಿರುದ್ಧ ಸೇಡು ತೀರಿಸಿಕೊಂಡರು! ಸ್ವತಃ ಶಂಕರ್‌ಸಿನ್ಹ ವಘೇಲಾ ಅವರೇ ಸೋಲನುಭವಿಸಬೇಕಾಯಿತು. ಕೊನೆಯಿಲ್ಲದ ಒಳಜಗಳ ಪಕ್ಷಕ್ಕೆ ಆಪ್ತಘಾತುಕಕಾರಿಯಾಯಿತು.

'ಗುಜರಾತ್ ಕಿಸಾನ್ ಸೇನಾ' ಎಂಬ ಹೊಸ ಸಂಘಟನೆಯನ್ನು ಆರಂಭಿಸಿದರು ಶಂಕರ್‌ಸಿನ್ಹ ವಘೇಲಾ. 1996, ಆಗಸ್ಟ್ 18ರಂದು ಪಕ್ಷದಿಂದ ದೂರವಾದ ಅವರು 'ಮಹಾ ಗುಜರಾತ್ ಜನತಾ ಪಾರ್ಟಿ(ಎಂಜಿಜೆಪಿ) ಎಂಬ ರಾಜಕೀಯ ಪಕ್ಷವನ್ನೂ ಹುಟ್ಟು ಹಾಕಿದರು. ಹೊಸದಾಗಿ ಸ್ಥಾಪನೆಯಾದ ಎಂಜಿಜೆಪಿ, ರಾಜ್ಯ ವಿಧಾನಸಭೆಯಲ್ಲಿ ತನ್ನನ್ನು ಪ್ರತ್ಯೇಕ ಪಕ್ಷವೆಂದು ಪರಿಗಣಿಸುವಂತೆ ಆಗಸ್ಟ್ 19ರಂದು ಮನವಿ ಮಾಡಿಕೊಂಡಿತು. ಬಿಜೆಪಿಯ ಒಟ್ಟು ಶಾಸಕರಲ್ಲಿ ಮೂರನೇ ಒಂದು ಭಾಗ ಎಂಜಿಜೆಪಿ ಜತೆಯಲ್ಲಿದ್ದಾರೆ ಎಂಬ ಮಾತು ಕೇಳಿ ಬಂತು. ಅಹಮದಾಬಾದ್‌ನ ರಾಮಲೀಲಾ ಮೈದಾನದಲ್ಲಿ ಆಗಸ್ಟ್ 20ರಂದು ಬೃಹತ್ ಸಭೆಯನ್ನು ಏರ್ಪಡಿಸುವ ಮೂಲಕ ಹೊಸ ಪಕ್ಷದ ಉದಯವನ್ನು ಔಪಚಾರಿಕವಾಗಿ ಘೋಷಿಸಲಾಯಿತು. ಬಿಜೆಪಿ ಜತೆಗಿನ ಎಲ್ಲ ಸಂಬಂಧಗಳನ್ನೂ

ಕಳೆದುಕೊಂಡರು. ಅದೂ ಪ್ರತೀಕಾರದೊಂದಿಗೆ! ಆದರೇನಂತೆ ಎಂಜಿಜೆಪಿಯತ್ತ ವಾಲಿದ್ದ 46 ಶಾಸಕರಲ್ಲಿ 18 ಶಾಸಕರು ಅಂತಿಮವಾಗಿ ಬಿಜೆಪಿಗೆ ವಾಪಸ್ಸಾದರು. 1996, ಸೆಪ್ಟೆಂಬರ್ 2ರಂದು ಗಾಂಧೀ ಆಶ್ರಮಕ್ಕೆ ತೆರಳಿದ 94 ಬಿಜೆಪಿ ಶಾಸಕರು ಏಕತೆಯ ಮೂಲಕ ಪಕ್ಷವನ್ನು ಬಲಗೊಳಿಸುವ ಶಪಥ ಮಾಡಿದರು. ಆದರೂ ಸುರೇಶ್ ಮೆಹ್ತಾ ಸರಕಾರದ ಭವಿಷ್ಯದ ಬಗೆಗಿನ ಅನಿಶ್ಚಯತೆ ಮಾತ್ರ ಹಾಗೆಯೇ ಮುಂದುವರಿಯಿತು. ಸೆಪ್ಟೆಂಬರ್ 18ರಂದು ವಿಧಾನಸಭೆ ಅಧಿವೇಶನ ಪ್ರಾರಂಭವಾದ ಕೂಡಲೇ ಶಂಕರ್‌ಸಿನ್ಹ ವಾಘೇಲಾ ಬೆಂಬಲಿಗರು ದೊಡ್ಡ ದಾಂಧಲೆ ಎಬ್ಬಿಸಿದರು. ಕಲಾಪವನ್ನು ಸ್ಥಗಿತಗೊಳಿಸಲಾಯಿತು. ಸಹಜವಾಗಿಯೇ ರಾಷ್ಟ್ರಪತಿ ಆಡಳಿತವನ್ನು ಜಾರಿಗೆ ತರಬೇಕೆಂದು ರಾಜ್ಯಪಾಲರು ಕೇಂದ್ರಕ್ಕೆ ಶಿಫಾರಸು ಮಾಡಿದರು. ರಾಷ್ಟ್ರಪತಿ ಆಡಳಿತವೂ ಜಾರಿಯಾಯಿತು. 1995, ಅಕ್ಟೋಬರ್ 21ರಂದು ಅಧಿಕಾರಕ್ಕೆ ಬಂದಿದ್ದ ಸುರೇಶ್ ಮೆಹ್ತಾ ಸರಕಾರ 1996, ಸೆಪ್ಟೆಂಬರ್ 19ರಂದು ಅಧಿಕಾರ ಕಳೆದುಕೊಂಡಿತು. ಆದರೆ ವೈಯಕ್ತಿಕ ವರ್ಚಸ್ಸು, ಪ್ರಭಾವ, ರಾಜಕೀಯ ಜಾಣ್ಮೆ, ಕೌಶಲ ಹೊಂದಿದ್ದ ವಾಘೇಲಾ ಅವರಂತಹ ವ್ಯಕ್ತಿಯಲ್ಲಿ ಪಕ್ಷದ ಶಿಸ್ತನ್ನು ಒಪ್ಪಿಕೊಳ್ಳುವ ಔದಾರ್ಯತೆಯೇ ಇರಲಿಲ್ಲವೇ? ಯಾವ ಪಕ್ಷವನ್ನು ಸೋಲಿಸಲು ಸತತ ಹೋರಾಟ ಮಾಡಿದರೋ ಅದೇ ಕಾಂಗ್ರೆಸ್ ಪಕ್ಷದ ಜತೆ ಕೈಜೋಡಿಸುವ ಸಲುವಾಗಿ ಮೈಗೂಡಿಸಿಕೊಂಡಿದ್ದ ಶಿಸ್ತು ಮತ್ತು ತತ್ತ್ವಗಳನ್ನೇ ಹೇಗೆ ಬಲಿಕೊಟ್ಟರು?

ನಿಜಕ್ಕೂ ಆಶ್ಚರ್ಯವಾಗುತ್ತದೆ.





## ಹೆಸರಲ್ಲೂ ಮೋದಿ

ನರೇಂದ್ರ ಮೋದಿ ಹೊಸ ಹೊಸ ಯೋಜನೆಗಳನ್ನು ಘೋಷಿಸುವುದು ಮಾತ್ರವಲ್ಲ, ಅವುಗಳಿಗೆ ಅಷ್ಟೇ ಚೆಂದದ ಹೆಸರು ನೀಡಿ ಜನರ ಗಮನವನ್ನು ಸೆಳೆದು ಬಿಡುತ್ತಾರೆ. ಅವುಗಳ ಕೆಲ ಜಲಕ್‌ಗಳು ಇಲ್ಲಿವೆ–

1. ಸುಜಲಾಂ ಸುಫಲಾಂ ಯೋಜನೆ: ನೀರು, ಪೈರು.
2. ಜ್ಯೋತಿ ಗ್ರಾಮ: ಗ್ರಾಮ ವಿದ್ಯುದೀಕರಣ.
3. ಸರಸ್ವತಿ ಸಂಗಮ: ನದಿ ಜೋಡಣೆ.
4. ವೃದ್ಧಿ ಸಿದ್ಧಿ: ಗ್ರಾಮವಾಸಿಗಳ ಆದಾಯ ಹೆಚ್ಚಳಕ್ಕೆ ಪ್ರೋತ್ಸಾಹ.
5. ಪಂಚಾಮೃತ: ಜ್ಞಾನ, ಜಲ, ನೆಲ, ಶಕ್ತಿ ಮತ್ತು ಪ್ರವಾಸೋದ್ಯಮ ಮುಂತಾದ ಐದು ಪ್ರಮುಖ ಕ್ಷೇತ್ರಗಳಿಗೆ ಉತ್ತೇಜನ.
6. ವಿದ್ಯಾಲಕ್ಷ್ಮಿ: ಹೆಣ್ಣುಮಕ್ಕಳ ಶಿಕ್ಷಣ.
7. ಸುದರ್ಶನ ಸುರಕ್ಷಾ ಕವಚ: ಭಯೋತ್ಪಾದನೆಯ ವಿರುದ್ಧ ಹೋರಾಟ.
8. ಜಲಾಭಿಷೇಕ ಯೋಜನೆ: ಸ್ಥಳೀಯವಾಗಿ ನೀರಾವರಿ ಸಮಸ್ಯೆಗೆ ಪರಿಹಾರ ಕಂಡುಕೊಳ್ಳುವುದು.
9. ಫೆಸ್ಟಿವಲ್ ಟೂರಿಸಂ: ಹಬ್ಬಗಳಿಗೆ ಪ್ರವಾಸಿಗರನ್ನು ಆಕರ್ಷಿಸುವುದು.
10. ವಿದ್ಯಾದೀಪ: ಶಾಲಾ ಮಕ್ಕಳಿಗೆ ವಿಮೆ ಸೌಲಭ್ಯ.





## 20
## ಅಂತಹ ಪ್ರತಿಷ್ಠಿತ ಸ್ಥಾನವನ್ನು ಅಲಂಕರಿಸಿದವರು ಐವರು ಮಾತ್ರ

ಅದುವರೆಗೂ ಗವರ್ನರ್ ಆಗಿದ್ದ ನರೇಶ್ಚಂದ್ರ ಅವರ ಬದಲಿಗೆ ಕೃಷ್ಣಪಾಲ್ ಸಿಂಗ್ ರಾಜ್ಯಪಾಲರಾಗಿ ಬಂದರು. ಅವರು ನೂತನ ಸರಕಾರ ರಚಿಸುವಂತೆ 1996, ಅಕ್ಟೋಬರ್ 22ರಂದು ವಾಘೇಲಾ ಅವರಿಗೆ ಆಹ್ವಾನ ನೀಡಿದರು. ಆ ವೇಳೆಗಾಗಲೇ ಕಾಂಗ್ರೆಸ್‌ನ ಬೆಂಬಲ ಪಡೆದುಕೊಂಡಿದ್ದ ವಾಘೇಲಾ, 182 ಸದಸ್ಯರ ಅಸೆಂಬ್ಲಿಯಲ್ಲಿ 102 ಶಾಸಕರ ಬೆಂಬಲ ಹೊಂದಿದ್ದರು. 102ರಲ್ಲಿ ವಾಘೇಲಾ ಅವರ ಶಾಸಕರ ಸಂಖ್ಯೆ 42, ಕಾಂಗ್ರೆಸ್ 45 ಶಾಸಕರನ್ನು ಹೊಂದಿತ್ತು. ಉಳಿದವರು ಪಕ್ಷೇತರ ಶಾಸಕರು. ಹಾಗಾಗಿ ವಾಘೇಲಾ ಬಲ ಕಾಂಗ್ರೆಸ್ಸಿನ ಬೆಂಬಲವನ್ನು ಅವಲಂಬಿಸಿತ್ತು. ಈ ದೌರ್ಬಲ್ಯ ಉಪ ಚುನಾವಣೆಯ ವೇಳೆ ಬಯಲಾಯಿತು. ಸರ್ಖೇಜ್ ವಿಧಾನಸಭೆ ಉಪಚುನಾವಣೆಯಲ್ಲಿ ಬಿಜೆಪಿ ಅಭ್ಯರ್ಥಿ ಅಮಿತ್ ಶಾ 24 ಸಾವಿರ ಮತಗಳ ಅಂತರದಿಂದ ಕಾಂಗ್ರೆಸ್ಸನ್ನು ಸೋಲಿಸಿದರು. ಮುಖ್ಯಮಂತ್ರಿ ವಾಘೇಲಾ ಪಕ್ಷದ ಅಭ್ಯರ್ಥಿ ಠೇವಣಿ ಕಳೆದುಕೊಂಡರು!

ಆಗ ಕಾಂಗ್ರೆಸ್ ಡೋಲಾಯಮಾನ ಸ್ಥಿತಿಗೆ ಬಂದು ತಲುಪಿತು.

ಅಷ್ಟಕ್ಕೂ ಸರ್ಖೇಜ್ ಚುನಾವಣೆಯ ಫಲಿತಾಂಶ ವಾಘೇಲಾ ಅವರು ಗ್ರಾಮಮಟ್ಟದಲ್ಲಿ ಎಂತಹ ದುರ್ಬಲ ವ್ಯಕ್ತಿ ಎಂಬುದನ್ನು ಸಾಬೀತು ಮಾಡಿತು. ಹಾಗಾಗಿ ವಾಘೇಲಾ ಸರಕಾರಕ್ಕೆ ನೀಡಿದ್ದ ಬೆಂಬಲವನ್ನು ವಾಪಸ್ ತೆಗೆದುಕೊಳ್ಳಬೇಕೇ ಅಥವಾ ಮುಂದುವರಿಸಬೇಕೇ ಎಂಬ ಪ್ರಶ್ನೆ ಎದುರಾಯಿತು. ಕಾಂಗ್ರೆಸ್ ಪಾಳಯದಲ್ಲಿ ಹೊಯ್ದಾಟ ಆರಂಭವಾಯಿತು. ವಾಘೇಲಾ ವಿರುದ್ಧವೂ ಭ್ರಷ್ಟಾಚಾರದ ಆರೋಪಗಳು ಕೇಳಿಬರಲಾರಂಭಿಸಿದವು. ಆದರೆ ಆರೋಪ ಮಾಡಿದ್ದು ಮಾತ್ರ ಕಾಂಗ್ರೆಸ್! ಅನಿವಾರ್ಯವಾಗಿ ವಾಘೇಲಾ ರಾಜೀನಾಮೆ ನೀಡಬೇಕಾಯಿತು. ಕೇವಲ ಒಂದು ವರ್ಷ ಕಾಲ ಅಧಿಕಾರದಲ್ಲಿದ್ದ ವಾಘೇಲಾರನ್ನು

ಅಧಿಕಾರದಿಂದ ಕೆಳಗಿಳಿಸಲಾಯಿತು. 1997, ಅಕ್ಟೋಬರ್ 27ರಂದು ದಿಲೀಪ್‌ಭಾಯಿ ಪಾರೀಖ್ ಮುಖ್ಯಮಂತ್ರಿಯಾದರು. ಪಾರೀಖ್ ಕೂಡ ಹೆಚ್ಚು ಕಾಲ ಅಧಿಕಾರದಲ್ಲಿ ಉಳಿಯಲಿಲ್ಲ. ಎಪ್ಪತ್ತು ದಿನಗಳಲ್ಲಿಯೇ ಅಧಿಕಾರ ಕಳೆದುಕೊಂಡರು. ಕೇಶುಭಾಯಿ ಪಟೇಲ್ ಮತ್ತೆ ಮುಖ್ಯಮಂತ್ರಿಯಾದರು.

ಈ ಮಧ್ಯೆ 1995, ನವೆಂಬರ್ 20ರಂದು ನರೇಂದ್ರ ಮೋದಿಯವರನ್ನು ಬಿಜೆಪಿಯ ರಾಷ್ಟ್ರೀಯ ಕಾರ್ಯದರ್ಶಿಯನ್ನಾಗಿ ನೇಮಕ ಮಾಡಲಾಯಿತು. ರಾಜಧಾನಿ ದಿಲ್ಲಿ ಅವರ ಕಾರ್ಯಕ್ಷೇತ್ರವಾಯಿತು. 1996ರಲ್ಲಿ ಪಕ್ಷಾಧ್ಯಕ್ಷ ಅಡ್ವಾಣಿಯವರ ನೇತೃತ್ವದಲ್ಲಿ ರಾಷ್ಟ್ರಮಟ್ಟದ ತಂಡವೊಂದನ್ನು ರಚಿಸಲಾಯಿತು. ಅದರಲ್ಲಿ ಹರ್ಯಾಣ, ಹಿಮಾಚಲ ಪ್ರದೇಶ, ಚಂಡೀಗಢ, ಪಂಜಾಬ್ ಮತ್ತು ಜಮ್ಮು-ಕಾಶ್ಮೀರದಲ್ಲಿ ಬಿಜೆಪಿಯನ್ನು ಸಂಘಟಿಸುವ ಜವಾಬ್ದಾರಿಯನ್ನು ಮೋದಿಯವರಿಗೆ ನೀಡಲಾಯಿತು.

ಅದು ಅವರಿಗೆ ದೊರೆತ ನಾಲ್ಕನೇ ಜವಾಬ್ದಾರಿಯಾಗಿತ್ತು. ಅದನ್ನು ಖುಷಿಯಿಂದ ಸ್ವೀಕರಿಸಿದರು ಕಾರ್ಯಮಗ್ನ ಮೋದಿ. ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಚಲಿಸುತ್ತಲೇ ಇರಬೇಕಾದ ಜವಾಬ್ದಾರಿಯದು. ಭಯೋತ್ಪಾದನೆಯ ಸುಳಿಗೆ ಸಿಲುಕಿದ್ದ ಪಂಜಾಬ್, ಜಮ್ಮು-ಕಾಶ್ಮೀರದಲ್ಲಿ ಜನರೊಂದಿಗೆ ಬೆರೆತು ಕಾರ್ಯನಿರ್ವಹಿಸುವ ಅವಕಾಶ ದೊರೆಯಿತು. ಆ ಬಗ್ಗೆ ಹೇಳುವಾಗ "ನನಗೆ ಅದುವರೆಗೂ ಅರ್ಥವಾಗದ ಎಷ್ಟೋ ವಿಷಯಗಳನ್ನು ತಿಳಿದುಕೊಳ್ಳುವಂತಾಯಿತು" ಎನ್ನುತ್ತಾರೆ ಮೋದಿ. ಅವರಿಗೆ ಜವಾಬ್ದಾರಿ ನೀಡಲಾಗಿದ್ದ ಎಲ್ಲ ರಾಜ್ಯಗಳಲ್ಲೂ ವಿಧಾನಸಭೆ ಚುನಾವಣೆ ಸಮೀಪಿಸುತ್ತಿತ್ತು. ಅಲ್ಲೆಲ್ಲ ಬಿಜೆಪಿ ನಿರೀಕ್ಷೆಗೂ ಮೀರಿದ ಸಾಧನೆ ತೋರಿತು. ಅಂದು ಗುಜರಾತ್‌ನಲ್ಲಿ ಪ್ರಭಾವಿ ಸ್ಥಾನವನ್ನು ಬಿಟ್ಟು ದಿಲ್ಲಿಗೆ ಬರುವಂತೆ ಸೂಚನೆ ಬಂದಾಗ ಮೋದಿ ಮನಸ್ಸಿನಲ್ಲಿ ಕಿಂಚಿತ್ತೂ ಅಳುಕು ಇರಲಿಲ್ಲ. ಒಂದು ವಿಷಯದ ಬಗ್ಗೆ ಅವರಲ್ಲಿ ಸ್ಪಷ್ಟ ತಿಳುವಳಿಕೆ ಹಾಗೂ ನಿಲುವಿತ್ತು-ಎಂದಿಗೂ ಶಿಸ್ತನ್ನು ಮೀರಬಾರದು. ಗುಜರಾತ್‌ನಿಂದ ದಿಲ್ಲಿಗೆ ಬಂದಾಗ ಮೋದಿ ಬಳಿಯಲ್ಲಿದ್ದುದು ಒಂದು ಸೂಟ್‌ಕೇಸ್ ಮಾತ್ರ. ದಿಲ್ಲಿಗೆ ಬಂದ ಮೇಲೂ ಸಹೋದ್ಯೋಗಿಯೊಬ್ಬರ ಜತೆ ಕೊಠಡಿಯನ್ನು ಹಂಚಿಕೊಂಡಿದ್ದರು. ಜವಾಬ್ದಾರಿ ಹೆಚ್ಚಾದರೂ ಸವಲತ್ತುಗಳನ್ನು ಹೆಚ್ಚು ಮಾಡುವಂತೆ ಎಂದೂ ಕೇಳಲಿಲ್ಲ. ಗುಜರಾತನ್ನು ತೊರೆದು ಬಂದ ಬಗ್ಗೆ ಅವರೆಂದೂ ಪಶ್ಚಾತ್ತಾಪ ಪಡಲಿಲ್ಲ. ಮೋದಿಯವರನ್ನು ಬಲಿಪಶುವಾಗಿಸಲು ಪ್ರಯತ್ನಿಸಿದ್ದ ವ್ಯಕ್ತಿಗಳೇ ವಾಘೇಲಾ ಅವರ ವಿರುದ್ಧ ತಿರುಗಿ ಬಿದ್ದರು. ಅಧಿಕಾರದಿಂದಲೂ ಕೆಳಗಿಳಿಸಿದರು. ಮೋದಿ ನಿರ್ಧಾರ ಸರಿಯಾಗಿಯೇ ಇತ್ತು! "ಅಲ್ಲಿ ಯಾವ ತತ್ತ್ವಗಳೂ ಇರಲಿಲ್ಲ, ಇದ್ದದ್ದು ಅಧಿಕಾರ ದಾಹ ಮಾತ್ರ ಎನ್ನುತ್ತಾರೆ"





ಮೋದಿ. ಇದನ್ನು ಮನಗಂಡ ಜನರು ಅಧಿಕಾರದಾಹಿಗಳನ್ನು ಕಿತ್ತೊಗೆದರು. ಮೋದಿಯವರಿಗೆ ಮುಖ್ಯವೆನಿಸಿದ್ದೂ ಅದೇ. ಮೋದಿಯವರ ಕಾರ್ಯತ್ರಿದ್ಧೆ ಕೇವಲ ಎರಡು ವರ್ಷಗಳಲ್ಲಿಯೇ ಅವರಿಗೆ ಒಳ್ಳೆಯ ಫಲವನ್ನೂ ನೀಡಿತು. 1998, ಮೇ 19ರಂದು ಅವರನ್ನು ಭಾರತೀಯ ಜನತಾ ಪಕ್ಷದ ಅಖಿಲ ಭಾರತ ಪ್ರಧಾನ ಕಾರ್ಯದರ್ಶಿಯನ್ನಾಗಿ ನೇಮಕ ಮಾಡಲಾಯಿತು. ಆ ವಿಶಿಷ್ಟ ಸ್ಥಾನವನ್ನು ಅಲಂಕರಿಸಿದ್ದ ಇತರ ವ್ಯಕ್ತಿಗಳೆಂದರೆ ಪಂಡಿತ್ ದೀನದಯಾಳ್ ಉಪಾಧ್ಯಾಯ, ಸುಂದರ್‌ಸಿಂಗ್ ಭಂಡಾರಿ, ಕುಶಭಾವು ಠಾಕ್ರೆ ಮತ್ತು ಗೋವಿಂದಾಚಾರ್ಯ ಮಾತ್ರ. ನರೇಂದ್ರ ಮೋದಿ ಐದನೆಯವರು.





# 21
# ಅವರು ಟೀಕಾಕಾರರಿಗೇಕೆ ಉತ್ತರ ನೀಡುವುದಿಲ್ಲ?

ನರೇಂದ್ರ ಮೋದಿಯವರಲ್ಲಿ ಕಾಣಬಹುದಾಗಿದ್ದ ಒಂದು ಒಳ್ಳೆಯ ಗುಣವೆಂದರೆ ಭಿನ್ನಮತೀಯರ ವಿರುದ್ಧ ಅವರೆಂದೂ ಸಾರ್ವಜನಿಕವಾಗಿ ತಮ್ಮ ಅಸಮಾಧಾನ, ಕೋಪ ವ್ಯಕ್ತಪಡಿಸಿದವರಲ್ಲ, ಏನೇ ಬಂದರೂ ಸ್ವೀಕರಿಸುತ್ತಿದ್ದರು. "1995ರಲ್ಲಿ ಪಕ್ಷದೊಳಗೆ ಸಮಸ್ಯೆಯಿತ್ತು. ಯಾರೂ ನನ್ನನ್ನು ರಾಜೀನಾಮೆ ನೀಡುವಂತೆ ಕೇಳಲಿಲ್ಲ, ಆದರೆ ನನ್ನಿಂದ ಸಮಸ್ಯೆ ಸೃಷ್ಟಿಯಾಗಿದೆ ಎನ್ನುವುದಾದರೆ ನಾನು ರಾಜೀನಾಮೆ ನೀಡುತ್ತೇನೆ" ಎಂಬುದಾಗಿ ಹೇಳಿದ್ದೆ ಎಂದು 2003ರಲ್ಲಿ ನಡೆದ ಸಂದರ್ಶನವೊಂದರಲ್ಲಿ ತಮ್ಮ ರಾಜೀನಾಮೆಯ ಬಗ್ಗೆ ಮೋದಿ ವಿವರಿಸಿದ್ದಾರೆ. ಹಾಗಾದರೆ ತಮ್ಮ ರಾಜೀನಾಮೆಗೆ ಕಾರಣರಾದ ಶಂಕರ್‌ಸಿನ್ಹ ವಾಘೇಲಾ ಅವರ ಬಗ್ಗೆ ಮೋದಿ ಕುಪಿತರಾಗಿದ್ದರೆ? ಅವರೇ ಹೇಳುವಂತೆ ಮೋದಿಯವರಲ್ಲಿ ಕಿಂಚಿತ್ತೂ ಬೇಸರವಿರಲಿಲ್ಲ. "ಅಂದಿನಿಂದ ಇದುವರೆಗೂ ವಾಘೇಲಾ ವಿರುದ್ಧ ಒಂದೇ ಒಂದು ಮಾತನ್ನೂ ಆಡದ ವ್ಯಕ್ತಿ ನಾನು. ವಾಘೇಲಾ ಕಾಂಗ್ರೆಸ್ ಸೇರಿ ಬಿಜೆಪಿ ವಿರುದ್ಧ ಹೋರಾಟಕ್ಕಿಳಿದಾಗಲೂ ಅವರ ವಿರುದ್ಧ ನಾನು ಮಾತನಾಡಲಿಲ್ಲ" ಎನ್ನುತ್ತಾರೆ ಮೋದಿ.

ಚುನಾವಣೆಯಲ್ಲಿ ಬಿಜೆಪಿ ಅಭೂತಪೂರ್ವ ಜಯಗಳಿಸಿತು. ಆದರೆ ಜಯಕ್ಕೆ ತಾನೇ ಕಾರಣ ಎಂದು ಮೋದಿ ಎಂದಾದರೂ ಪ್ರತಿಪಾದಿಸಿದರೆ? ಮತ್ತೆ ಅವರನ್ನೇ ಉಲ್ಲೇಖಿಸಿ ಹೇಳುವುದಾದರೆ "ಖಂಡಿತ ಇಲ್ಲ, ನಾನು ಏನೇ ಮಾಡಿರಬಹುದು. ಆದರೆ ಹೆಗ್ಗಳಿಕೆಯನ್ನು ಪಕ್ಷಕ್ಕೆ ನೀಡಿದ್ದೇನೆ. ಏಕೆಂದರೆ ಪಕ್ಷ ಯಾವತ್ತೂ ಮೊದಲು. ನಾನು ಕೇವಲ ಒಬ್ಬ ಕಾರ್ಯಕರ್ತನಷ್ಟೆ. ಪಕ್ಷ ಏನೇ ಹೇಳಲಿ ಆ ಜವಾಬ್ದಾರಿಯನ್ನು ನಿರ್ವಹಿಸಲು ನಾನು ಸದಾ ಸಿದ್ಧ. ಈ ನಿಟ್ಟಿನಲ್ಲಿ ನಾನು ಯಾವುದೇ ಸಾಧನೆ ಮಾಡಿದ್ದರೂ ಅದನ್ನು ನನ್ನ ವೈಯಕ್ತಿಕ ಖಾತೆಗೆ ಜಮಾ ಮಾಡಿಕೊಂಡಿಲ್ಲ, ಪಕ್ಷದ ಪ್ರಯತ್ನವೇ ಯಶಸ್ಸಿಗೆ ಕಾರಣ" ಎಂದು ಉತ್ತರಿಸುತ್ತಾರೆ

ನರೇಂದ್ರ ಮೋದಿ.

ಇತ್ತ ಶಂಕರ್‌ಸಿನ್ಹ ವಾಘೇಲಾ ಹೇಳಿಕೊಳ್ಳುವಂತಹ ಯಾವ ಸಾಧನೆಯನ್ನೂ ಮಾಡಿಲ್ಲ.

ಮೆಹ್‌ಸಾನಾ ವಿಧಾನಸಭೆ ಕ್ಷೇತ್ರಕ್ಕೆ ನಡೆದ ಉಪಚುನಾವಣೆಯಲ್ಲಿ ಮೊಟ್ಟ ಮೊದಲ ಬಾರಿಗೆ ಕಣಕ್ಕಿಳಿದ ವಾಘೇಲಾ ಠೇವಣಿ ಕಳೆದುಕೊಂಡಿದ್ದರು. ವಾಘೇಲಾ ಅವರ ಜಾತಿಗೆ ಸೇರಿದ್ದ ಕಾಂಗ್ರೆಸ್ ಅಭ್ಯರ್ಥಿ ಜಯಗಳಿಸಿದ್ದರು. ತುರ್ತುಪರಿಸ್ಥಿತಿ ನಂತರ ಕಪಡವಂಜ್ ಸಂಸದೀಯ ಕ್ಷೇತ್ರದಿಂದ ಬಿಜೆಪಿ ಟಿಕೆಟ್‌ನಲ್ಲಿ ಲೋಕಸಭೆಗೆ ಆರಿಸಿ ಬಂದರು. ಆಗ ಕೂಡ ವಾಘೇಲಾ ಗೆಲುವಿಗೆ ಕಾರಣವಾಗಿದ್ದು ಜೆಪಿ ಅಲೆ. ಕೊನೆಗೆ ಗೋಧ್ರಾ ಕ್ಷೇತ್ರದಿಂದ ಸ್ಪರ್ಧಿಸಿದ ವಾಘೇಲಾ ಗೆಲುವು ಸಾಧಿಸುವಲ್ಲಿ ಯಶಸ್ವಿಯಾದರು. ಈ ಬಾರಿ ಅಯೋಧ್ಯೆ ಚಳವಳಿಯ ಕಾವು ಗೆಲುವಿಗೆ ಕಾರಣವಾಗಿತ್ತು. ಅನಂತರ ಬಿಜೆಪಿ ಅಭ್ಯರ್ಥಿಯಾಗಿ ಎಷ್ಟೋ ಬಾರಿ ಕಣಕ್ಕಿಳಿದರೂ ವಾಘೇಲಾ ಗೆಲ್ಲಲಿಲ್ಲ. ಅವರು ಒಂದೇ ಕ್ಷೇತ್ರದಿಂದ ಎರಡು ಬಾರಿ ಗೆದ್ದ ಉದಾಹರಣೆಯೂ ಇಲ್ಲ. ಇಷ್ಟಾಗಿಯೂ ವಾಘೇಲಾ ವಿರುದ್ಧ ನರೇಂದ್ರ ಮೋದಿಯವರೆಂದೂ ಟೀಕಾಪ್ರಹಾರ ಮಾಡಲಿಲ್ಲ. ಬದಲಾಗಿ ವಾಘೇಲಾ ಅವರ ಸಾರ್ವಜನಿಕ ಸಂಪರ್ಕ ಕಲೆಯನ್ನು ಮುಕ್ತ ಕಂಠದಿಂದ ಶ್ಲಾಘಿಸುತ್ತಿದ್ದರು. ಮೋದಿಯವರ ಪ್ರಕಾರ ಜನಸಂಪರ್ಕದಲ್ಲಿ ವಾಘೇಲಾ ನಿಸ್ಸೀಮರು.

ಚಿಮಣ್‌ಭಾಯಿ ಪಟೇಲ್ ಬಗ್ಗೆ ಮೋದಿ ಯಾವ ಅಭಿಪ್ರಾಯ ಹೊಂದಿದ್ದರು?

ನವನಿರ್ಮಾಣ ಚಳವಳಿಯ ಕಾಲದಿಂದಲೂ ಮೋದಿಯವರಿಗೆ ಚಿಮಣ್‌ಭಾಯಿ ಪಟೇಲ್ ಅವರ ಪರಿಚಯವಿತ್ತು. ಆ ಕಾಲದಲ್ಲಿ ಚಿಮಣ್‌ಭಾಯಿ ಬಗ್ಗೆ ಪ್ರಧಾನಿ ಇಂದಿರಾ ಗಾಂಧಿಯವರಲ್ಲಿ ಒಳ್ಳೆಯ ಅಭಿಪ್ರಾಯವಿರಲಿಲ್ಲ. 13 ವರ್ಷಗಳ ಕಾಲ ಕಾಂಗ್ರೆಸ್‌ನಿಂದ ದೂರವಿಟ್ಟಿದ್ದರು. ಈ ಎಲ್ಲ ಕಾಲಾವಧಿಯಲ್ಲೂ ನರೇಂದ್ರ ಮೋದಿ ಚಿಮಣ್‌ಭಾಯಿ ಜತೆ ಸಂಪರ್ಕ ಇಟ್ಟುಕೊಂಡಿದ್ದರು. ತುರ್ತುಪರಿಸ್ಥಿತಿಯ ವೇಳೆಯಲ್ಲೂ ಆಪ್ತ ಸಂಪರ್ಕದಲ್ಲಿದ್ದರು. ಚಿಮಣ್‌ಭಾಯಿಯವರು ಎಂದೂ ಮೋದಿಗೆ ಮೋಸ ಮಾಡಲಿಲ್ಲ. ಆ ಕಾಲದಲ್ಲಿ ಮೋದಿ ಪೊಲೀಸರಿಗೆ ಬೇಕಾದ ವ್ಯಕ್ತಿಯಾಗಿದ್ದರು. ತುರ್ತುಪರಿಸ್ಥಿತಿಯ ನಂತರ ಘೋಷಣೆಯಾದ ಸಾರ್ವತ್ರಿಕ ಚುನಾವಣೆ ವೇಳೆ ಸೀಟು ಹಂಚಿಕೆ ವಿಚಾರ ಬಂದಾಗ ಚಿಮಣ್‌ಭಾಯಿ ಜತೆ ಮೋದಿ ತುಂಬಾ ದೃಢವಾಗಿ ವರ್ತಿಸಿದ್ದರು. ಒಂದು ವೇಳೆ ನಿಮಗೆ 14 ಕ್ಷೇತ್ರಗಳು ಬೇಕೆಂದಾದರೆ ಇಟ್ಟುಕೊಳ್ಳಿ. ಬಿಜೆಪಿಗೆ 12 ಸ್ಥಾನಗಳೇ ಸಾಕು ಎಂದಿದ್ದರು. ಮೋದಿಯವರಿಗೆ ಜನರ ನಾಡಿಮಿಡಿತ ಅರ್ಥವಾಗಿತ್ತು. ''ಚುನಾವಣೆಯ ನಂತರ ಬಿಜೆಪಿಗೆ ಮೊದಲ ಸ್ಥಾನ ಹಾಗೂ ಕಾಂಗ್ರೆಸ್‌ಗೆ ಎರಡನೇ ಸ್ಥಾನ ಲಭ್ಯವಾಗುತ್ತದೆ. ನೀವು ಮೂರನೇ ಸ್ಥಾನಕ್ಕೆ ತೃಪ್ತಿಪಟ್ಟು





ಕೊಳ್ಳಬೇಕಾಗುತ್ತದೆ'' ಎಂದು ಚಿಮಣ್‌ಭಾಯಿಗೆ ಮುಖಕ್ಕೆ ಹೊಡೆದಂತೆ ಹೇಳಿದ್ದರು. ಫಲಿತಾಂಶ ಹೊರಬಿದ್ದಾಗ ಮೋದಿ ಹೇಳಿದ್ದ ಮಾತು ಸರಿಯಾಗಿತ್ತು. ಬಿಜೆಪಿ ತಾನು ಸ್ಪರ್ಧಿಸಿದ್ದ ಎಲ್ಲ 12 ಸ್ಥಾನಗಳಲ್ಲೂ ಜಯಗಳಿಸಿ ಮೊದಲ ಸ್ಥಾನ ಪಡೆದುಕೊಂಡಿತ್ತು.

ಕೇಶುಭಾಯಿ ಪಟೇಲ್ ಅವರ ವಿಷಯ ಬಂದಾಗ ''ಅವರೊಬ್ಬ ಅತ್ಯಂತ ಪ್ರಬುದ್ಧ ನಾಯಕ'' ಎನ್ನುತ್ತಿದ್ದರು ಮೋದಿ. ''ಇಂದು ಗುಜರಾತ್ ಬಿಜೆಪಿ ಈ ಸ್ಥಾನಕ್ಕೆ ಏರಿದ್ದರೆ ಅದಕ್ಕೆ ಕೇಶುಭಾಯಿಯವರೇ ಕಾರಣ. ಅವರೊಬ್ಬ ಸಮಚಿತ್ತವುಳ್ಳ ವ್ಯಕ್ತಿ. ಅವರು ಎಲ್ಲರನ್ನೂ ಒಟ್ಟಿಗೆ ಕರೆದೊಯ್ಯುವ ವ್ಯಕ್ತಿ. ಕೇಶುಭಾಯಿ ಅವರಲ್ಲಿರುವ ದೌರ್ಬಲ್ಯವೆಂದರೆ ಅವರ ಆರೋಗ್ಯ ಮತ್ತು ಶಿಕ್ಷಣ. ಆದರೆ ಐದನೇ ತರಗತಿಯವರೆಗೂ ಮಾತ್ರ ಓದಿದ್ದಾರೆಂಬ ಕಾರಣಕ್ಕೆ ಕೇಶುಭಾಯಿಯವರನ್ನು ನಾನು ಟೀಕಿಸಲಾರೆ. ಏಕೆಂದರೆ ಅವರು ದೂರದೃಷ್ಟಿಹೊಂದಿರುವ ವ್ಯಕ್ತಿ'' ಎಂದು ಸಂದರ್ಶನವೊಂದರಲ್ಲಿ ಮೋದಿ ಹೇಳಿದ್ದರು. ಮೋದಿಯವರಿಗೆ ಕೇಶುಭಾಯಿಯವರೇ ಪ್ರೇರಣೆಯಾಗಿದ್ದರು. ಮಾರ್ಗದರ್ಶಕ ಕೂಡ ಅವರೇ. ಒಮ್ಮೆ ಮೋದಿ ಹಾಸಿಗೆ ಹಿಡಿದು ಆಸ್ಪತ್ರೆ ಸೇರಿದಾಗ 24 ಗಂಟೆಗಳೂ ಮೋದಿ ಜತೆಗಿದ್ದರು ಕೇಶುಭಾಯಿ. ''ಅವರು ಪಿತೃಸಮಾನ. ಅವರ ಬಗ್ಗೆ ನನ್ನಲ್ಲಿ ಅಗಾಧ ಗೌರವವಿದೆ. ಪಕ್ಷಕ್ಕಾಗಿ 50 ವರ್ಷಗಳ ಕಾಲ ದುಡಿದ ವ್ಯಕ್ತಿ ಅವರು. ಅದು ಕಡಿಮೆ ಸಮಯವೇನಲ್ಲ'' ಎನ್ನುತ್ತಾರೆ ಮೋದಿ.

ಒಬ್ಬ ಕಟ್ಟಾ ಹಾಗೂ ಶಿಸ್ತುಬದ್ಧ ಬಿಜೆಪಿ ಕಾರ್ಯಕರ್ತರಾದ ಮೋದಿಯವರು ತಾಳ್ಮೆಯ ಸಾಕಾರಮೂರ್ತಿ. ವಾಘೇಲಾ ಅವರ ವರ್ತನೆ ಬಗ್ಗೆ ಕೇಳಿದಾಗ ''ಪಕ್ಷದೊಳಗೆ ನಾವು ಯಾರನ್ನೂ ಅನುಮಾನಿಸುವುದಿಲ್ಲ. ಸಂಘಟನೆಯೊಳಗೆ ನಾವು ಕೆಲವು ತಪ್ಪುಗಳನ್ನು ಎಸಗಿರಬಹುದು. ಆದರೆ ನಾಳೆ ಅವುಗಳನ್ನು ಸರಿಪಡಿಸಿಕೊಳ್ಳುತ್ತೇವೆ'' ಎಂದು ಹೇಳಿದ್ದರು. ತಮ್ಮ ವಿಷಯದಲ್ಲಿ ಕಟುವಾಗಿ ನಡೆದುಕೊಳ್ಳುವ ಮಾಧ್ಯಮಗಳನ್ನೂ ಅವರು ಟೀಕಿಸುವುದಿಲ್ಲ. ''ನಾನು ಮುಸ್ಲಿಂ ವಿರೋಧಿ ಎಂಬ ಭಾವನೆಯಿದೆ. ಆದರೆ ನನಗೆ ಬೆದರಿಕೆ ಪತ್ರ ಬರೆದಿದ್ದ ಮುಸ್ಲಿಂ ಹುಡುಗನನ್ನು ನಾನು ಕ್ಷಮಿಸಿದ್ದೇನೆ. ಹಾಗಂತ ಒಂದು ಪ್ರಕರಣದಿಂದ ಒಬ್ಬ ವ್ಯಕ್ತಿಯನ್ನು ಅಳೆಯಲು ಸಾಧ್ಯವಿಲ್ಲ. ಹಲವು ದಿಕ್ಕು, ಮಜಲುಗಳಿಂದ ಒಬ್ಬ ವ್ಯಕ್ತಿಯನ್ನು ನೋಡಬೇಕಾಗುತ್ತದೆ. ಅವರ ನಡತೆಯನ್ನು ಗಮನಿಸಬೇಕಾಗುತ್ತದೆ. ಅನಂತರವಷ್ಟೇ ಒಂದು ನಿರ್ಧಾರಕ್ಕೆ ಬರಲು ಸಾಧ್ಯ. ಪತ್ರಿಕೆಗಳ ನಿಲುವು ದಿನದಿಂದ ದಿನಕ್ಕೆ ಬದಲಾಗುತ್ತಲೇ ಇರುತ್ತದೆ. ಇಂದು ಒಬ್ಬ ವ್ಯಕ್ತಿಯನ್ನು ಪತ್ರಿಕೆಗಳು ಹೀರೊ ಎಂಬಂತೆ ಪ್ರತಿಬಿಂಬಿಸಿದರೆ, ಮರುದಿನ ಆತನನ್ನೇ ಪಾತಾಳಕ್ಕೆ ತಳ್ಳಿಬಿಡುತ್ತವೆ. ಕೆಟ್ಟ ವ್ಯಕ್ತಿಯೆಂದು ತೀರ್ಪು ಕೊಟ್ಟುಬಿಡುತ್ತಾರೆ. ಆದರೆ ಅಂತಹ ವರದಿಗಳನ್ನು ನಾನು ಲೆಕ್ಕಕ್ಕೆ ತೆಗೆದುಕೊಳ್ಳಲಾಗದು.

ಮುಸ್ಲಿಮರ ಮನಸ್ಥಿತಿಯನ್ನು ಅರ್ಥಮಾಡಿಕೊಂಡಿದ್ದೀರಾ?

ಈ ಪ್ರಶ್ನೆಗೆ ಮೋದಿ ಇನ್ನೂ ಸ್ಪಷ್ಟವಾಗಿ ಉತ್ತರಿಸಿದರು, "ಹೌದು, ಖಂಡಿತ ಹೌದು. ನಾನು ಮುಸ್ಲಿಮರೊಂದಿಗೆ ಮುಖಾಮುಖಿ ಸಂಪರ್ಕ ಹೊಂದಿದ್ದೇನೆ. ಇಸ್ಲಾಂನಲ್ಲಿನ ತತ್ವಗಳ ಬಗ್ಗೆಯೂ ಓದಿಕೊಂಡಿದ್ದೇನೆ. ನೀವು ನನ್ನನ್ನು ಉಲ್ಲೇಖಿಸಿ ಹೇಳಬಹುದು–ಅಮೆರಿಕ 500 ಅಲ್‌ಖೈದಾ ಭಯೋತ್ಪಾದಕರನ್ನು ಬಂಧಿಸಿದೆ. ಅವರಲ್ಲಿ ಪಾಕಿಸ್ತಾನ ಸೇರಿದಂತೆ ಹಲವಾರು ದೇಶಗಳ ಮುಸ್ಲಿಮರಿದ್ದಾರೆ. ಆದರೆ ಒಬ್ಬನೇ ಒಬ್ಬ ಭಾರತೀಯ ಮುಸ್ಲಿಮನೂ ಇಲ್ಲ. ಹಿಂದೂ ಜೀವನಪದ್ಧತಿಯ ಪ್ರಭಾವ ಭಾರತೀಯ ಮುಸ್ಲಿಮರ ಮೇಲೂ ಆಗಿದೆ. ಹಾಗಾಗಿ ಅಪ್ಪ-ಅಮ್ಮಂದಿರು ತಮ್ಮ ಮಕ್ಕಳು ಅಡ್ಡದಾರಿ ಹಿಡಿಯದಂತೆ ತಡೆಯುತ್ತಾರೆ" ಎಂದು ಹೇಳುತ್ತಾರೆ ಮೋದಿ. "ಮುಸ್ಲಿಮರು ಈ ದೇಶದಲ್ಲಿ ಎರಡನೇ ಅತಿದೊಡ್ಡ ಸಮುದಾಯ. ಕೆಲವು ಕಡೆ ಮುಸ್ಲಿಮರು ಮತ್ತು ಹಿಂದೂಗಳ ನಡುವಿನ ಅನುಪಾತ 80:20. 60:40 ಅಥವಾ 50:50 ಇದ್ದರೂ ಸೌಹಾರ್ದಯುತವಾಗಿ ಜೀವನ ನಡೆಸುತ್ತಿದ್ದಾರೆ" ಎನ್ನುವ ಅವರನ್ನು ಹೇಗೆ ತಾನೇ ಮುಸ್ಲಿಂ ವಿರೋಧಿ ಎಂದು ದೂರುತ್ತೀರಿ?

ನರೇಂದ್ರ ಮೋದಿ ಎಂದೂ ಮುಸ್ಲಿಂ ಭಯೋತ್ಪಾದಕರಿಗೆ ಹೆದರಿ ಬದುಕಿದವರಲ್ಲ. ಅಮೆರಿಕದ ಅಧ್ಯಕ್ಷ ಬಿಲ್ ಕ್ಲಿಂಟನ್ ಭಾರತಕ್ಕೆ ಭೇಟಿ ಕೊಟ್ಟಿದ್ದಾಗ ಜಮ್ಮು-ಕಾಶ್ಮೀರದ ಛಾಟಿಸಿಂಗ್‌ಪುರದಲ್ಲಿ 36 ಸಿಖ್ಖರನ್ನು ಹತ್ಯೆಗೈಯಲಾಯಿತು. ಆ ಸಂದರ್ಭದಲ್ಲಿ ನರೇಂದ್ರ ಮೋದಿ ಜಮ್ಮು-ಕಾಶ್ಮೀರದ ಜವಾಬ್ದಾರಿ ಹೊಂದಿದ್ದರು. ಹಾಗಾಗಿ ದುರ್ಘಟನೆ ನಡೆದ ಸ್ಥಳಕ್ಕೆ ಧಾವಿಸಿದ ಮೋದಿ ದುಃಖತಪ್ತ ಕುಟುಂಬಗಳಿಗೆ ಸಾಂತ್ವನ ಹೇಳಲು ಮುಂದಾದರು. ಅವರು ಛಾಟಿಸಿಂಗ್‌ಪುರಕ್ಕೆ ತೆರಳಿರುವುದು ಮುಖ್ಯಮಂತ್ರಿ ಫಾರೂಕ್ ಅಬ್ದುಲ್ಲಾ ಅವರಿಗೆ ತಿಳಿದುಬಂತು. "ನನಗೆ ಕರೆ ಮಾಡಿದ ಫಾರೂಕ್ ಅಬ್ದುಲ್ಲಾ, ನೀವು ಛಾಟಿಸಿಂಗ್‌ಪುರಕ್ಕೆ ಹೋಗಿದ್ದಾದರೂ ಹೇಗೆ?" ಎಂದು ಪ್ರಶ್ನಿಸಿದರು. ನಾನು ರಸ್ತೆ ಮೂಲಕ ಎಂದಾಗ, "ಒಂದಲ್ಲಾ ಒಂದು ದಿನ ನೀವು ನನ್ನನ್ನು ಸಮಸ್ಯೆಗೀಡುಮಾಡುತ್ತೀರಿ. ಭಯೋತ್ಪಾದಕರು ನೆಲಬಾಂಬ್ ಇಟ್ಟಿರುತ್ತಾರೆ. ಅವರಿಂದ ತಪ್ಪಿಸಿಕೊಳ್ಳಲು ಯಾರಿಗೂ ಸಾಧ್ಯವಿಲ್ಲ" ಎಂದ ಫಾರೂಕ್ ಅಬ್ದುಲ್ಲಾ, ವಾಪಸ್ ಬರುವಾಗ ಹೆಲಿಕಾಪ್ಟರ್ ಮೂಲಕ ಬನ್ನಿ ಎಂದರು. ಅಷ್ಟೇ ಅಲ್ಲ, ಆಡ್ವಾಣಿಯವರಿಗೆ ಕರೆ ಮಾಡಿ, ನನ್ನ ವಿರುದ್ಧ ದೂರು ನೀಡಿದರು! ಮೋದಿ ಯಾವ ಸಮಯದಲ್ಲೂ ಎಲ್ಲಿಗೆ ಬೇಕಾದರೂ ಭದ್ರತೆಯ ಪರಿವೇ ಇಲ್ಲದೆ ಹೋಗುತ್ತಾರೆ ಎಂದು ದೂರಿದರು. ಕೂಡಲೇ ಮೋದಿಗೆ ಕರೆ ಮಾಡಿದ ಆಡ್ವಾಣಿಯವರು, ಎಲ್ಲಿದ್ದೀರಿ ಎಂದು ಪ್ರಶ್ನಿಸಿದರು. ಈಗಾಗಲೇ ಛಾಟಿಸಿಂಗ್‌ಪುರವನ್ನು ತಲುಪಿದ್ದೇನೆ. ಮೃತರ ಅಂತ್ಯಕ್ರಿಯೆಯ





ನಂತರ ಹಿಂದಿರುಗುತ್ತೇನೆ ಎಂದು ಹೇಳಿದಾಗ, "ಹೆಲಿಕಾಪ್ಟರ್ ಮೂಲಕ ಹಿಂದಿರುಗಿ ಬನ್ನಿ" ಎಂದು ಆಡ್ವಾಣಿಯವರು ಸಲಹೆ ನೀಡಿದರು.

ಕಾಶ್ಮೀರದ ಮುಸ್ಲಿಮರ ಮೇಲೆ ಒಳ್ಳೆಯ ಭಾವನೆಯಿದ್ದ ಕಾರಣ ಮೋದಿ ಹೀಗೆ ನಡೆದು ಕೊಳ್ಳುತ್ತಿದ್ದರೋ ಅಥವಾ ಕರ್ತವ್ಯ ಪಾಲನೆಯ ವಿಷಯ ಬಂದಾಗ ತಮ್ಮ ಜೀವದ ಬಗ್ಗೆಯೇ ಆಸಡ್ಡೆ ತೋರುತ್ತಿದ್ದರೋ ಎಂಬ ಅನುಮಾನಗಳುಂಟಾಗುತ್ತವೆ. ನರೇಂದ್ರ ಮೋದಿಯವರೇ ಹೇಳುವಂತೆ ಅವರು ಜಮ್ಮು-ಕಾಶ್ಮೀರದಲ್ಲಿ ಮುಕ್ತವಾಗಿ ಸಂಚರಿಸುತ್ತಿದ್ದರು. ಎಚ್ಚರದಿಂದಿರಿ, ನಿಮ್ಮ ಜೀವಕ್ಕೆ ಅಪಾಯವಿದೆ ಎಂದು ಜನ ಹೇಳುತ್ತಿದ್ದರು. ಆದರೆ ನನ್ನ ಕರ್ತವ್ಯವನ್ನು ನಾನು ಮಾಡುತ್ತಿದ್ದೇನೆ. ಜೀವ ಉಳಿಯುತ್ತೋ, ಹೋಗುತ್ತೋ ನನಗೆ ಯಾವ ಬೇಸರವೂ ಇಲ್ಲ ಎನ್ನುತ್ತಿದ್ದರು ಮೋದಿ. ಕರ್ತವ್ಯ ಪಾಲನೆಯ ವಿಷಯ ಬಂದಾಗ ಅವರು ಯಾರಿಗೂ ಬೆರಳು ತೋರಲು ಅವಕಾಶ ನೀಡುತ್ತಿರಲಿಲ್ಲ, ಹರಿಯಾಣ, ಹಿಮಾಚಲಪ್ರದೇಶದ ಉಸ್ತುವಾರಿ ವಹಿಸಿದ್ದಾಗ ಪಂಜಾಬ್ ಮೇಲೆಯೂ ನಿಗಾ ಇಟ್ಟಿದ್ದರು. ಚಂಡೀಗಢದ ನಗರಸಭೆ ಚುನಾವಣೆ ಘೋಷಣೆಯಾಗಿತ್ತು. ಅದರಲ್ಲಿ 20 ಸ್ಥಾನಗಳಿದ್ದವು. ಮೋದಿಯವರ ಪೂರ್ವ ತಯಾರಿ ಹಾಗೂ ಜಾಣ್ಮೆಯ ಫಲವಾಗಿ ಬಿಜೆಪಿ 17 ಸ್ಥಾನಗಳನ್ನು ಗೆದ್ದುಕೊಂಡಿತು. ಮೋದಿಯವರನ್ನು ಭೇಟಿಯಾದ ಚಂಡೀಗಢದ ಸಂಸದ ಪವನ್‌ಕುಮಾರ್, "ನೀವು ಪವಾಡವನ್ನೇ ಮಾಡಿದ್ದೀರಿ" ಎಂದು ಹೇಳಿದ್ದರು. ಈ ಘಟನೆಗೂ ಮೊದಲು ಚಂಡೀಗಢದಲ್ಲಿ ಬಿಜೆಪಿ ಸಣ್ಣ ನೆಲೆಯನ್ನೂ ಹೊಂದಿರಲಿಲ್ಲ.

ಕರ್ತವ್ಯ ಪಾಲನೆಯ ವ್ಯಸನ ಮೋದಿಯವರನ್ನು ಎಷ್ಟರಮಟ್ಟಿಗೆ ಕಾಡುತ್ತಿತ್ತೆಂದರೆ ಅಸಹಜವಾದ ಕೆಲಸಗಳಿಗೆ ಮುಂದಾಗುತ್ತಿದ್ದರು. ಯುದ್ಧ ಪ್ರಾರಂಭವಾದಾಗ ಕಾರ್ಗಿಲ್‌ಗೆ ತೆರಳಿದ್ದರು. ಅಷ್ಟಕ್ಕೂ ಜಮ್ಮು-ಕಾಶ್ಮೀರದ ಉಸ್ತುವಾರಿಯಲ್ಲಿದ್ದ ಮೋದಿಯವರ ವ್ಯಾಪ್ತಿಯಲ್ಲೇ ಕಾರ್ಗಿಲ್ ಬರುತ್ತಿತ್ತು. ಅದು ಮೋದಿಯವರ ಬದ್ಧತೆ ಮತ್ತು ಸಮಗ್ರತೆಯನ್ನು ತೋರಿಸುತ್ತದೆ. ಆದರೆ ಅವರೆಂದೂ ಸ್ವಾರ್ಥಿಯಾಗಿರಲಿಲ್ಲ, ಹಿಮಾಚಲ ಪ್ರದೇಶದ ಆಗಿನ ಮುಖ್ಯಮಂತ್ರಿಯಾಗಿದ್ದ ಪ್ರೇಮ್‌ಕುಮಾರ್ ಧುಮಾಲ್ ಅವರನ್ನು ಸೈನಿಕರಿಗೆ ಉಡುಗೊರೆಗಳನ್ನು ವಿತರಿಸುವ ಸಲುವಾಗಿ ಕಾರ್ಗಿಲ್‌ಗೆ ಆಹ್ವಾನಿಸಿದ್ದರು. ಧುಮಾಲ್ ಜತೆಯಲ್ಲಿ ಹಿಮಾಚಲ ಪ್ರದೇಶ ವಿಧಾನಸಭೆಯ ಸ್ಪೀಕರ್ ಕೂಡ ಆಗಮಿಸಿದ್ದರು. ಆಶ್ಚರ್ಯವೆಂದರೆ ಕಾರ್ಗಿಲ್‌ನಲ್ಲಿದ್ದ ಪ್ರತಿ ಮೂವರು ಸೈನಿಕರಲ್ಲಿ ಒಬ್ಬ ಹಿಮಾಚಲದವನಾಗಿದ್ದ. ಒಂದೇ ಕುಟುಂಬದ ಇಬ್ಬರು, ಮೂವರು ಸೇನೆಯಲ್ಲಿದ್ದ ಉದಾಹರಣೆಗಳಿದ್ದವು. ತಮ್ಮ ರಾಜ್ಯದ ಮುಖ್ಯಮಂತ್ರಿಯನ್ನು ಕಂಡು ಅವರ ಉಲ್ಲಾಸಕ್ಕೆ ಪಾರವೇ ಇರಲಿಲ್ಲ, ಇತ್ತ ಕಾರ್ಗಿಲ್ ಯುದ್ಧ ನಡೆಯುತ್ತಿದ್ದಾಗಲೇ

ಮೋದಿ ವಿಶ್ವದ ಅತ್ಯಂತ ಎತ್ತರದ ಸ್ಥಳಗಳಲ್ಲಿ ಒಂದಾದ ಲೇಹ್ ಹಾಗೂ 14 ಸಾವಿರ ಅಡಿ ಎತ್ತರದಲ್ಲಿರುವ ಮಾನಸ ಸರೋವರಕ್ಕೂ ಭೇಟಿ ನೀಡಿದ್ದರು. ಅಷ್ಟೇ ಅಲ್ಲ, 24 ಸಾವಿರ ಅಡಿ ಎತ್ತರ ಹೊಂದಿರುವ ಶಿವಲಿಂಗ ಆಕಾರದ ಕೈಲಾಸ ಪರ್ವತಕ್ಕೆ ಪ್ರದಕ್ಷಿಣೆ ಹಾಕಿ ಬಂದಿದ್ದರು.

ಅವರ ಜೀವನತತ್ವ ಬಹಳ ಸರಳವಾದುದು.

ಒಬ್ಬ ನಾಯಕ ಪ್ರೇರಣೆ ನೀಡಬಹುದು, ಹುರಿದುಂಬಿಸಬಹುದು, ಪ್ರಭಾವ ಬೀರ ಬಹುದು. ಆದರೆ ತಳಮಟ್ಟದಲ್ಲಿ ಇರುವ ಸಂಘಟನಾತ್ಮಕ ಕಾರ್ಯದಿಂದ ಮಾತ್ರ ಜಯ ಪ್ರಾಪ್ತಿಯಾಗಲು ಸಾಧ್ಯ ಎನ್ನುತ್ತಿದ್ದರು ಮೋದಿ. ದಿಲ್ಲಿಗೆ ವಾಪಸ್ ಆದ ನರೇಂದ್ರ ಮೋದಿ ಯವರಿಗೆ ಎನ್‌ಡಿಎ ಸರಕಾರ ಪ್ರಮಾಣವಚನ ಸ್ವೀಕರಿಸುವ ಸಂದರ್ಭದಲ್ಲಿ ಎಲ್ಲ ಬಿಜೆಪಿ ರಾಜ್ಯಸರಕಾರಗಳ ಮುಖ್ಯಮಂತ್ರಿಗಳನ್ನು ಆಹ್ವಾನಿಸುವ ಹಾಗೂ ಯೋಗಕ್ಷೇಮ ನೋಡಿ ಕೊಳ್ಳುವ ಜವಾಬ್ದಾರಿ ನೀಡಲಾಗಿತ್ತು. ರಾಜಕೀಯ ವಲಯದಲ್ಲಿ ಮೋದಿಯವರ ಬೇಡಿಕೆ ಇದ್ದಕ್ಕಿದ್ದಂತೆ ಹೆಚ್ಚಾಗತೊಡಗಿತು. ವಿದೇಶಿ ಅಧಿಕಾರಿಗಳು, ರಾಜತಾಂತ್ರಿಕರು ಮೋದಿಯ ವರನ್ನು ಭೇಟಿಯಾಗಲು ಉತ್ಸಾಹ ತೋರುತ್ತಿದ್ದರು. ಏಕೆ ಗೊತ್ತೇ? ಬಿಜೆಪಿ ಮತ್ತು ಆರೆಸ್ಸೆಸ್ ನಡುವಿನ ಸಂಬಂಧ ಹೇಗಿದೆ? ಹೇಗೆ ನಿರ್ಧಾರಗಳನ್ನು ಕೈಗೊಳ್ಳಲಾಗುತ್ತದೆ? ಯಾವ ಪ್ರಕ್ರಿಯೆಯನ್ನು ಅನುಸರಿಸಲಾಗುತ್ತಿದೆ? ಎಂಬುದನ್ನು ತಿಳಿದುಕೊಳ್ಳುವ ಉದ್ದೇಶ ಅವರದಾಗಿತ್ತು. ಕಾಂಗ್ರೆಸ್ಸಿಗಾದರೆ ಈ ವಿಚಾರಗಳು ತಿಳಿದಿದ್ದವು. ಅಧಿಕಾರ ನಡೆಸಿದ ಅನುಭವ ಅದಕ್ಕಿತ್ತು. ಆದರೆ ಬಿಜೆಪಿಗೆ ಅದು ಹೊಸ ವಿಚಾರ.

"ಒಮ್ಮೆ ಎಲ್ಲ ಮುಸ್ಲಿಂ ಹಾಗೂ ಅರಬ್ ರಾಷ್ಟ್ರಗಳ ಪ್ರತಿನಿಧಿಗಳನ್ನು ಪಕ್ಷದ ಕಚೇರಿಗೆ ಆಹ್ವಾನಿಸಿದ್ದೆವು. ಅವರಲ್ಲಿ ಸುಮಾರು 25ರಿಂದ 30 ಜನ ಆಗಮಿಸಿದ್ದರು. ಅದೊಂದು ಒಳ್ಳೆಯ ಸಂದರ್ಭ. ಒಟ್ಟಿಗೆ ಭೋಜನವನ್ನೂ ಮಾಡಿದರು. ಇಂಗ್ಲಿಷ್‌ನಲ್ಲಿ ಮಾತನಾಡಿದರು. ಇರಾಕಿ ಪ್ರತಿನಿಧಿಗಳಂತೂ ನನ್ನನ್ನು ಇರಾಕ್‌ಗೆ ಆಹ್ವಾನಿಸಲು ಉತ್ಸುಕರಾಗಿದ್ದರು" ಎಂದು ನೆನಪು ಮಾಡಿಕೊಳ್ಳುತ್ತಾರೆ ಮೋದಿ. ಅಲ್ಲದೆ ಆಲ್ವಿನ್ ಟಾಫ್ಲರ್ ಅವರನ್ನು ಭೇಟಿಯಾಗುವ ಸಂದರ್ಭವೂ ಒದಗಿ ಬಂದಿತ್ತು. ನ್ಯೂಸ್‌ವೀಕ್ ಮ್ಯಾಗಜಿನ್‌ನಲ್ಲಿ ನನ್ನ ಬಗ್ಗೆ ಬಂದಿದ್ದ ಲೇಖನವೊಂದನ್ನು ಓದಿದ ಟಾಫ್ಲರ್ ಭೇಟಿ ಮಾಡಲು ಬಂದಿದ್ದರು.

**ಆಸ್ಟ್ರೇಲಿಯಾದಿಂದ ಬಂದಿತ್ತು ಆಹ್ವಾನ:**

ಚುನಾವಣೆಯಲ್ಲಿ ಅಭೂತಪೂರ್ವ ಜಯ ಗಳಿಸಿದ ಬಿಜೆಪಿ ವಿದೇಶಿಯರ ಕಣ್ಣು ಕೋರೈಸಿತು. ಹಲವಾರು ರಾಷ್ಟ್ರಗಳು ಮೋದಿಯವರನ್ನು ಆಹ್ವಾನಿಸಲು ಮುಂದಾದವು.





ಹಾಗೆ ಆಹ್ವಾನಿಸಿದವರಲ್ಲಿ ಆಸ್ಟ್ರೇಲಿಯಾದ ಆಗಿನ ವಿದೇಶಾಂಗ ಸಚಿವ ಅಲೆಗ್ಸಾಂಡರ್ ಡೋನರ್ ಮೊದಲಿಗರು. ಡೋನರ್‌ಗೆ ಭಾರತದ ಮೇಲೆ ಪ್ರೀತಿ. ಭಾರತದಲ್ಲಿ ಬಂಡವಾಳ ಹೂಡಿದ್ದ ಅಥವಾ ಇನ್ನಿತರ ಹಿತಾಸಕ್ತಿಗಳನ್ನು ಹೊಂದಿದ್ದ ವಿದೇಶಿ ಸರಕಾರಗಳು ಬಿಜೆಪಿ, ಕಾಂಗ್ರೆಸ್‌ಗಿಂತ ಹೇಗೆ ಭಿನ್ನವಾಗಿದೆ, ಚುನಾವಣಾ ವ್ಯವಸ್ಥೆ ಹೇಗಿದೆ ಮತ್ತು ಭಾರತದಂತಹ ಅತಿ ದೊಡ್ಡ ಪ್ರಜಾತಂತ್ರವನ್ನು ರಾಜಕೀಯ ಪಕ್ಷಗಳು ಹೇಗೆ ನಿಭಾಯಿಸುತ್ತವೆ ಎಂಬುದನ್ನು ತಿಳಿದುಕೊಳ್ಳುವ ಉತ್ಸಾಹ ಹೊಂದಿದ್ದವು. ಭಾರತ ಆ ರಾಷ್ಟ್ರಗಳನ್ನು ಬಹುವಾಗಿ ಆಶ್ಚರ್ಯ ಚಕಿತಗೊಳಿಸಿತು.

ಬಿಜೆಪಿಯ ಪ್ರಧಾನ ಕಾರ್ಯದರ್ಶಿಯೊಬ್ಬರನ್ನು ಕಾಮನ್‌ವೆಲ್ತ್ ರಾಷ್ಟ್ರವೊಂದರ ವಿದೇಶಾಂಗ ಸಚಿವರೊಬ್ಬರು ತಮ್ಮ ದೇಶಕ್ಕೆ ಭೇಟಿ ನೀಡುವಂತೆ ಆಹ್ವಾನಿಸಿದ್ದೇ ಗೌರವದ ವಿಷಯವಾಗಿತ್ತು. 2001, ಜುಲೈನಲ್ಲಿ ಆಸ್ಟ್ರೇಲಿಯಾ, ನ್ಯೂಜಿಲೆಂಡ್ ಹಾಗೂ ಮಲೇಷ್ಯಾಕ್ಕೆ ಭೇಟಿ ನೀಡಿದ ನರೇಂದ್ರ ಮೋದಿ, ದೊರೆತ ಅವಕಾಶವನ್ನು ಸದುಪಯೋಗಪಡಿಸಿ ಕೊಂಡರು. ಮಲೇಷ್ಯಾಕ್ಕೆ ಭೇಟಿ ನೀಡುವಂತೆ ಅಲ್ಲಿನ ಪ್ರಧಾನಿ ಡಾ. ಮಹಾತೀರ್ ಮೊಹಮದ್ ಹಾಗೂ ಆಳುವ ಪಕ್ಷವಾದ ಯುನೈಟೆಡ್ ಮಲೈಸ್ ನ್ಯಾಷನಲ್ ಆರ್ಗನೈಜೇಶನ್‌ನ ಅಧ್ಯಕ್ಷರು ಆಹ್ವಾನ ನೀಡಿದ್ದರು. ಮಲೇಷ್ಯಾದ ರಾಷ್ಟ್ರೀಯ ಅಸೆಂಬ್ಲಿಗೆ ಆಹ್ವಾನಿತರಾದ ಮೊದಲ ಭಾರತೀಯ ರಾಜಕೀಯ ನಾಯಕ ನರೇಂದ್ರ ಮೋದಿಯಾಗಿದ್ದರು.

ಮಲೇಷ್ಯಾ ಭೇಟಿಯಂತೂ ನೆನಪಿನಲ್ಲಿಟ್ಟುಕೊಳ್ಳಬೇಕಾದ ಅನುಭವವಾಗಿತ್ತು. ನರೇಂದ್ರ ಮೋದಿಯವರ ಗೌರವಾರ್ಥ ಪ್ರಧಾನಿ ಮೊಹಾತೀರ್ ಮೊಹಮದ್ ಔತಣ ಕೂಟವೊಂದನ್ನು ಏರ್ಪಡಿಸಿದ್ದರು. ಅಭಿವೃದ್ಧಿ ಹೊಂದುತ್ತಿರುವ ಹಾಗೂ ದಕ್ಷಿಣ ಏಷ್ಯಾದ ರಾಷ್ಟ್ರಗಳು ಎದುರಿಸುತ್ತಿರುವ ಸಮಸ್ಯೆಗಳ ಬಗ್ಗೆ ಉಭಯ ನಾಯಕರು ಚರ್ಚೆ ನಡೆಸಿ ದರು. ಅದಕ್ಕೂ ಮೊದಲು ನಮ್ಮ ಪ್ರಧಾನಿ ಮಲೇಷ್ಯಾಕ್ಕೆ ಭೇಟಿ ನೀಡಿದ್ದಾಗ ಅಲ್ಲಿನ ರೈಲ್ವೆ ಕಾಮಗಾರಿಯೊಂದರ ಗುತ್ತಿಗೆಯನ್ನು ಭಾರತಕ್ಕೆ ನೀಡುವ ವಿಚಾರದಲ್ಲಿ ತಿಳುವಳಿಕೆ ಪತ್ರ ವೊಂದಕ್ಕೆ ಸಹಿ ಹಾಕಲಾಗಿತ್ತು. ಮೋದಿಯವರ ಭೇಟಿಯ ವೇಳೆ 1.8 ಶತಕೋಟಿ ಡಾಲರ್ ಮೌಲ್ಯದ ಆ ಯೋಜನೆಯ ಆದೇಶವನ್ನು ಕೈಗೇ ನೀಡಲಾಯಿತು.





# 22

## ನನ್ನ ದೇಶವನ್ನು ಹರಮಾರಿ ಎನ್ನಲು ನಿನಗೆ ಅಧಿಕಾರ ಕೊಟ್ಟವರಾರು?

1999ರಲ್ಲಿ ಎನ್‌ಡಿಎ ಮತ್ತೆ ಅಧಿಕಾರಕ್ಕೇರಿತು. ಆ ವೇಳೆಗಾಗಲೇ ಪ್ರಧಾನಿ ವಾಜಪೇಯಿ ಅವರ ವಿಶ್ವಾಸಕ್ಕೆ ಪಾತ್ರರಾಗಿದ್ದ ಮೋದಿ ಪಕ್ಷದ ವಕ್ತಾರನಾಗಿ ನೇಮಕಗೊಂಡಿದ್ದರು. ಆಗ ಮೋದಿಯವರಿಗೆ ಎಲ್ಲಿಲ್ಲದ ಬೇಡಿಕೆಯಿತ್ತು. ವಾಜಪೇಯಿ ಮತ್ತು ಪಾಕಿಸ್ತಾನದ ಅಧ್ಯಕ್ಷ ಪರ್ವೇಜ್ ಮುಷರ್ರಫ್ ನಡುವೆ ನಡೆದ ಆಗ್ರಾ ಶೃಂಗಸಭೆಯ ವಿಷಯದಲ್ಲಿ ಬಿಜೆಪಿ ಹಾಗೂ ಮುಷರ್ರಫ್ ಅವರ ನಿಲುವಿನ ಬಗ್ಗೆ ಮಾಧ್ಯಮಗಳಿಗೆ ಟಿಪ್ಪಣಿ ನೀಡುವ ಜವಾಬ್ದಾರಿಯನ್ನು ಮೋದಿಯವರಿಗೇ ನೀಡಲಾಗಿತ್ತು.

"ರೀಡಿಫ್ ಡಾಟ್‌ಕಾಮ್"ನ ಹಿರಿಯ ವರದಿಗಾರ ಓಂಕಾರ್ ಸಿಂಗ್ ಜತೆಗಿನ ಸಂದರ್ಶನದ ವೇಳೆ ಮೋದಿ ಅದ್ಭುತವಾಗಿ ಮಾತನಾಡಿದ್ದರು. 2001, ಜುಲೈ 19ರಂದು ಪ್ರಕಟವಾದ ಆ ಸಂದರ್ಶನದಲ್ಲಿ ಯಾವ ಪ್ರಶ್ನೆಗಳಿಗೂ ಉತ್ತರಿಸದೇ ಬಿಟ್ಟಿರಲಿಲ್ಲ, ಹಾಗಂತ ಏನನ್ನೂ ಬಿಟ್ಟುಕೊಟ್ಟಿರಲೂ ಇಲ್ಲ! 'ಅಧ್ಯಕ್ಷ ಮುಷರ್ರಫ್ ಜತೆ ಮಾತನಾಡುವಾಗ ವಾಜಪೇಯಿಯವರ ಮೂಡ್ ಹೇಗಿತ್ತು?' ಎಂಬ ಪ್ರಶ್ನೆಯೊಂದಿಗೆ ಓಂಕಾರ್ ಸಿಂಗ್ ಸಂದರ್ಶನವನ್ನು ಆರಂಭಿಸಿದರು. ಅಷ್ಟಕ್ಕೂ ಶೃಂಗಸಭೆ ಮುಕ್ತಾಯಗೊಂಡ ಕೂಡಲೇ ವಾಜಪೇಯಿಯವರನ್ನು ಮೊದಲು ಭೇಟಿಯಾಗಿದ್ದೇ ಮೋದಿ. ಇಬ್ಬರೂ ನಾಯಕರ ನಡುವೆ ಏನು ನಡೆಯಿತು? ಎಂಬ ಪ್ರಶ್ನೆಗೆ "ಅದು ಉಭಯ ನಾಯಕರ ನಡುವಿನ ಅತ್ಯಂತ ಗೌಪ್ಯ ವಿಷಯವಾದ್ದರಿಂದ ಅದರ ಬಗ್ಗೆ ನಾನೇನನ್ನೂ ಮಾತನಾಡಲು ಸಾಧ್ಯವಿಲ್ಲ" ಎಂದರು ಮೋದಿ. "ವಾಜಪೇಯಿಯವರ ಮೂಡ್ ಹೇಗಿತ್ತು?" ಎಂಬ ಪ್ರಶ್ನೆಗೆ "ಆ ವಿಷಯದ ಬಗ್ಗೆ ಯಾರೂ ತಲೆಕೆಡಿಸಿಕೊಳ್ಳಬೇಕಾದ ಅಗತ್ಯವಿಲ್ಲ" ಎಂದರು. "ಮಾತುಕತೆಯ ನಂತರ ವಾಜಪೇಯಿಯವರು 'ಡಿಫೆನ್ಸಿವ್' ಆಗಿದ್ದರೆ?" ಎಂದು ಕೇಳಿದಾಗ "ಡಿಫೆನ್ಸಿವ್" ಮತ್ತು

''ಆಫೆನ್ಸಿವ್'' ಎಂಬ ಪದಗಳು ತೀರಾ ವಿಷಯನಿಷ್ಠ ಶಬ್ದಗಳು. ಅಟಲ್‌ಜಿಯವರು ಕೇವಲ ಒಬ್ಬ ರಾಜಕಾರಣಿ ಮಾತ್ರವಲ್ಲ, ಮುತ್ಸದ್ದಿಯೂ ಹೌದು. ಪಾಕಿಸ್ತಾನದ ಅಧ್ಯಕ್ಷರಿಗೆ ಆಹ್ವಾನ ನೀಡುವ ಮೊದಲೇ ತಾನೇನು ಮಾಡುತ್ತಿದ್ದೇನೆ ಎಂಬುದರ ಅರಿವು ಅವರಿಗಿತ್ತು. ಆಗ್ರಾಕ್ಕೆ ಬಂದು ಯಾವುದೇ ಒಪ್ಪಂದಕ್ಕೆ ಸಹಿ ಹಾಕದೆ ಮುಷರ್ರಫ್ ಹಿಂದಿರುಗುತ್ತಿದ್ದಾರೆಂದರೆ ವಾಜಪೇಯಿಯವರು ಡಿಫೆನ್ಸಿವ್ ಆಗಿರಲಿಲ್ಲ, ಆಫೆನ್ಸಿವ್ ಆಗಿದ್ದರು ಎಂದೇ ಅರ್ಥ!

ಮೋದಿ ನೀಡಿದ ಇಂತಹ ಉತ್ತರ ಛಾಟಿಯೇಟಿನಂತಿತ್ತು.

''ನೀವು ಹಾಗೆ ಯೋಚಿಸಲು ಕಾರಣವೇನು?'' ಎಂದು ಓಂಕಾರ್ ಸಿಂಗ್ ಮತ್ತೆ ಕೇಳಿದಾಗ, ''ಕಾರ್ಗಿಲ್ ಯುದ್ಧದ ಶಿಲ್ಪಿಯೇ ಮುಷರ್ರಫ್. ಪಾಕಿಸ್ತಾನದ ಬೆಂಬಲದ ಹೊರತಾಗಿಯೂ ಭಯೋತ್ಪಾದನೆಯನ್ನು ಹತ್ತಿಕ್ಕುವ ತಾಕತ್ತು ಭಾರತಕ್ಕಿದೆ ಎಂದು ಮುಷರ್ರಫ್ ಅವರ ಮುಖಕ್ಕೆ ಹೊಡೆದಂತೆ ಹೇಳಿದ್ದರು ವಾಜಪೇಯಿ. ಉಗ್ರ ಕ್ರಮದ ಮೂಲಕ ನಿಮ್ಮನ್ನು ಹತ್ತಿಕ್ಕಲಾಗುವುದು ಎಂಬ ಸಂದೇಶವನ್ನು ಪಾಕಿಸ್ತಾನದಲ್ಲಿರುವ ಭಯೋತ್ಪಾದಕ ಸಂಘಟನೆಗಳಿಗೆ ತಲುಪಿಸುವುದೇ ವಾಜಪೇಯಿಯವರ ಮಾತಿನ ಉದ್ದೇಶವಾಗಿತ್ತು'' ಎಂದರು ಮೋದಿ. ಭಾರತ ಸರಕಾರವಾಗಲಿ, ಬಿಜೆಪಿಯಾಗಲಿ ಆಗ್ರಾಶೃಂಗ ವಿಫಲವಾಯಿತು ಎಂದು ಹೇಳಿಲ್ಲ ಎಂದು ಸ್ಪಷ್ಟಪಡಿಸಿದರು. ಅಂದರೆ ಇದು ಸಂಧಾನದ ನಿಟ್ಟಿನಲ್ಲಿ ಒಂದು ಪುಟ್ಟ ಹೆಜ್ಜೆಯಷ್ಟೆ ಎಂಬುದು ಅದರ ಅರ್ಥ ಎಂದರು. ''ಆದರೆ ಲಾಹೋರ್ ಬಸ್ ಯಾತ್ರೆ ಕಾರ್ಗಿಲ್ ಯುದ್ಧದಲ್ಲಿ ಕೊನೆಗೊಂಡಿತಲ್ಲವೆ?'' ಎಂದು ಓಂಕಾರ್ ಸಿಂಗ್ ಕಾಲೆಳೆದಾಗ, ''ಪಾಕಿಸ್ತಾನ ಸೃಷ್ಟಿಯಾಗಿದ್ದೇ ವೈಷಮ್ಯದ ಪ್ರಚಾರಾಂದೋಲನದ ಆಧಾರದ ಮೇಲೆ ಎಂಬುದನ್ನು ನಾವು ಮರೆಯಬಾರದು. ಪಾಕಿಸ್ತಾನದ ರಾಜಕಾರಣಿಗಳು ಇಂದಿಗೂ ವೈಷಮ್ಯವನ್ನೇ ಅಸ್ತ್ರವಾಗಿಟ್ಟುಕೊಂಡು ಆಡಳಿತ ನಡೆಸುತ್ತಿದ್ದಾರೆ. ಆದರೆ ನಾವು ಪಾಕಿಸ್ತಾನದ ನಾಗರಿಕರಲ್ಲಿ ಶಾಂತಿ ಮತ್ತು ಅಭಿವೃದ್ಧಿಯ ಆಶಾಭಾವನೆಯನ್ನು ಮೂಡಿಸುವ ಇಚ್ಛೆ ಹೊಂದಿದ್ದೇವೆ. ಭಾರತದೊಂದಿಗೆ ಸಂಘರ್ಷಕ್ಕಿಳಿಯುವುದಕ್ಕಿಂತ ಸ್ನೇಹದಿಂದಿರುವುದರಲ್ಲೇ ಪಾಕಿಸ್ತಾನಕ್ಕೆ ಲಾಭವಿದೆ ಎಂಬುದನ್ನು ಮನವರಿಕೆ ಮಾಡಿಕೊಡಬೇಕಾದ ಅಗತ್ಯವಿದೆ. ಈ ಪ್ರಕ್ರಿಯೆಯಲ್ಲಿ ಹಿನ್ನಡೆಯುಂಟಾಗುವುದು ಸಹಜ. ಆದರೆ ಒಳ್ಳೆಯ ಕೆಲಸವನ್ನು ನಾವು ಮುಂದುವರಿಸಬೇಕು'' ಎಂದರು ಮೋದಿ!

ಆದರೂ ಓಂಕಾರ್ ಸಿಂಗ್ ಸುಮ್ಮನೆ ಬಿಡಲಿಲ್ಲ.

ಸಿಂಗ್: ಸರಕಾರ ಎಡವಿತು. ಮಾತುಕತೆಗೆ ಮುನ್ನ ಸರಿಯಾದ ಪೂರ್ವತಯಾರಿಯನ್ನೇ ಮಾಡಿಕೊಂಡಿರಲಿಲ್ಲ ಎಂದು ಪ್ರತಿಪಕ್ಷಗಳು ಆರೋಪಿಸುತ್ತಿವೆ?





ಮೋದಿ: ಪ್ರತಿಪಕ್ಷಗಳ ಆರೋಪ ಸತ್ಯಕ್ಕೆ ದೂರವಾದುದು.

ಸಿಂಗ್: ಯಾವುದೇ ಕರಡು ಒಪ್ಪಂದಕ್ಕೆ ಸಹಿ ಹಾಕುವುದಕ್ಕೆ ಕೇಂದ್ರ ಸಂಪುಟ ಒಪ್ಪಿಗೆ ನೀಡಿರಲಿಲ್ಲ ಎಂಬ ಪರೋಕ್ಷ ಸಂಕೇತಗಳನ್ನು ನೀಡಿದ್ದೇ ನಿರ್ಧಾರಕ್ಕೆ ಬರಲು ದೊಡ್ಡ ಅಡಚಣೆಯಾಯಿತಲ್ಲವೆ?

ಮೋದಿ: ಸರಕಾರದಲ್ಲಿರುವ ಯಾವುದೇ ಮಂತ್ರಿಗಳು ಅಂತಹ ಇಬ್ಬಂದಿ ನಿಲುವನ್ನು ತಳೆದಿರಲಿಲ್ಲ, ಭಾರತೀಯ ಮಾಧ್ಯಮಗಳಿಗೆ ಇಂತಹ ಕಪೋಲಕಲ್ಪಿತ ವಿಚಾರವನ್ನು ಹರಿಬಿಡುವ ಮೂಲಕ ಪಾಕಿಸ್ತಾನವೇ ಒಪ್ಪಂದಕ್ಕೆ ಕೆಡುಕು ಬಯಸಿತು.

ಸಿಂಗ್: ಆಗ್ರಾ ಶೃಂಗದಲ್ಲಿ ಭಾಗಿಯಾಗಿದ್ದ ಮುಖ್ಯ ತಂಡದಲ್ಲಿ ವಾರ್ತಾ ಮತ್ತು ಪ್ರಸಾರ ಖಾತೆ ಸಚಿವೆ ಸುಷ್ಮಾ ಸ್ವರಾಜ್ ಭಾಗಿಯಾಗಿರಲಿಲ್ಲ, ಆದರೂ ಆಕೆ ಆಗ್ರಾಕ್ಕೆ ಬಂದಿದ್ದೇಕೆ?

ಮೋದಿ: ಆಕೆ ಸಂಪುಟ ಸಚಿವೆ. ಒಬ್ಬ ಸಂಪುಟ ಸಚಿವೆಯಾಗಿ ಮಾಧ್ಯಮಗಳನ್ನುದ್ದೇಶಿಸಿ ಮಾತನಾಡುವ ಹಕ್ಕು ಆಕೆಗಿದೆ. ಬ್ರೇಕ್‌ಫಾಸ್ಟ್ ನೆಪದಲ್ಲಿ ಭಾರತೀಯ ಪತ್ರಿಕೆಗಳ ಸಂಪಾದಕರ ಜತೆ ಮುಷರ್ರಫ್ ಒಂದೂವರೆ ಗಂಟೆ ಮಾತನಾಡಬಹುದಾದರೆ ಭಾರತ ಸರಕಾರದ ನಿಲುವನ್ನು ಮಾಧ್ಯಮಗಳ ಜತೆ ಹಂಚಿಕೊಳ್ಳುವ ಹಕ್ಕು ಸುಷ್ಮಾ ಸ್ವರಾಜ್‌ಗಿಲ್ಲವೆ? ಮಾಹಿತಿ ತಂತ್ರಜ್ಞಾನದ ಈ ಯುಗದಲ್ಲಿ ರಾಜಕೀಯವನ್ನು ಮಾಧ್ಯಮಗಳಿಂದ ಬೇರ್ಪಡಿಸಲು ಸಾಧ್ಯವಿಲ್ಲ ಎಂದು ಪಾಕಿಸ್ತಾನದ ವಿದೇಶಾಂಗ ಸಚಿವರೇ ಹೇಳಿದ್ದಾರೆ. ಅದೇ ತತ್ವ ಸುಷ್ಮಾಜಿ ಅವರಿಗೂ ಅನ್ವಯವಾಗುತ್ತದೆ!

ಸಿಂಗ್: ಹಾಗಾದರೆ ಉಪಾಹಾರದ ನೆಪದಲ್ಲಿ ಭಾರತೀಯ ಪತ್ರಿಕೆಗಳ ಸಂಪಾದಕರ ಜತೆ ಮುಷರ್ರಫ್ ಮಾತುಕತೆ ನಡೆಸಿದ್ದು ಭಾರತ ಸರಕಾರಕ್ಕೆ ಕೋಪ ತಂದಿದೆಯೇ?

ಮೋದಿ: ಇಬ್ಬರು ರಾಷ್ಟ್ರ ನಾಯಕರು ಗಂಭೀರವಾದ ಚರ್ಚೆಯಲ್ಲಿ ತೊಡಗಿರುವಾಗ ಜಾಣತನದಲ್ಲಿ ಮೀರಿಸುವ ಸಲುವಾಗಿ ಮಾಧ್ಯಮಗಳ ಬಳಿ ಹೋಗುವುದು, ಅದನ್ನು ಅರಿವಿಗೆ ಬಾರದಂತೆ ಪಾಕ್ ಚಾನೆಲ್‌ಗಳಲ್ಲಿ ನೇರಪ್ರಸಾರ ಮಾಡುವುದು ಸರಿಯಲ್ಲ. ಒಂದು ವೇಳೆ ಪತ್ರಿಕಾಗೋಷ್ಠಿಗಳ ಮೂಲಕ ಕಾಶ್ಮೀರ ಸಮಸ್ಯೆಯನ್ನು ಪರಿಹರಿಸುವ ಯೋಚನೆ ಜನರಲ್ ಮುಷರ್ರಫ್ ಅವರಲ್ಲಿದ್ದರೆ ಅವರು ಒಂದು ಸಾವಿರ ಪತ್ರಿಕಾಗೋಷ್ಠಿಗಳನ್ನು ನಡೆಸಲಿ. ಅದಕ್ಕೆ ಸ್ವಾಗತ!

ನರೇಂದ್ರ ಮೋದಿ ಮಾಧ್ಯಮಗಳನ್ನು ನಿಭಾಯಿಸುತ್ತಿದ್ದುದು ಇದೇ ರೀತಿ.

ಎಲ್ಲ ಪ್ರಶ್ನೆಗಳಿಗೂ ಉತ್ತರಿಸಿದರು. ಆದರೆ ಯಾವ ಕ್ಷಣದಲ್ಲೂ ಡಿಫೆನ್ಸಿವ್ ಆಗಿರಲಿಲ್ಲ, ಅಗತ್ಯ ಬಂದಾಗ ಕಠಿಣವಾಗಿಯೂ ನಡೆದುಕೊಳ್ಳುತ್ತಿದ್ದರು. ಯಾವ ಟಿವಿ ವರದಿಗಾರರೂ

ಹುಸಿ ಅಂದಾಜು ಮಾಡುವುದಕ್ಕಾಗಲಿ, ವೈಭವೀಕರಿಸುವುದಕ್ಕಾಗಲಿ ಅವಕಾಶ ನೀಡುತ್ತಿರಲಿಲ್ಲ. ಆಗ್ರಾ ಶೃಂಗಕ್ಕೆ ಸಂಬಂಧಪಟ್ಟಂತೆ ನಡೆಯಲಿದ್ದ ಸಂದರ್ಶನವೊಂದಕ್ಕೆ ಸಿದ್ಧರಾಗುತ್ತಿದ್ದ ನರೇಂದ್ರ ಮೋದಿಯವರನ್ನುದ್ದೇಶಿಸಿ, ಭಾರತದ "ಅಡಿಯಲ್ ರವಯ್ಯಾ" (ಹಠಮಾರಿತನ)ದಿಂದಾಗಿಯೇ ಆಗ್ರಾ ಶೃಂಗ ವಿಫಲವಾಯಿತಲ್ಲವೆ ಎಂದು ವರದಿಗಾರರೊಬ್ಬರು ಪ್ರಚೋದಿಸಲು ಯತ್ನಿಸಿದಾಗ, ಒಂದಿಷ್ಟೂ ವಿಚಲಿತರಾಗದ ಮೋದಿ, "ನನ್ನನ್ನು ಬೇಕಾದರೆ ಹಠಮಾರಿ ಎಂದು ಕರೆಯಿರಿ, ನನ್ನ ಪಕ್ಷವನ್ನು ಬೇಕಾದರೆ ಹಠಮಾರಿ ಎನ್ನಿ, ಆದರೆ ನನ್ನ ದೇಶವನ್ನು ಹಠಮಾರಿ ಎಂದು ಕರೆಯಲು ನಿನಗೆ ಅಧಿಕಾರ ಕೊಟ್ಟವರಾರು?" ಎಂದು ಪ್ರತಿದಾಳಿ ಮಾಡಿದ್ದರು.

ಆ ವರದಿಗಾರ ಬಾಯಿ ಮುಚ್ಚಿಕೊಳ್ಳಲು ಅಷ್ಟು ಸಾಕಿತ್ತು.

'ಬಿಜೆಪಿ ಟುಡೇ' ಪತ್ರಿಕೆಗೆ ಸಂದರ್ಶನವೊಂದನ್ನು ನೀಡಿದ ಮೋದಿ, ಆಗ್ರಾ ಶೃಂಗದ ಬಗ್ಗೆ ದೀರ್ಘ ವಿವರಣೆ ನೀಡಿದರು. "ಭಾರತ ಮತ್ತೊಮ್ಮೆ ಪಾಕಿಸ್ತಾನಕ್ಕೆ ಸ್ನೇಹ ಹಸ್ತ ಚಾಚಿದೆ. ಶಿಮ್ಲಾ ಒಪ್ಪಂದ ಹಾಗೂ ಲಾಹೋರ್ ಘೋಷಣೆಯ ಮುಂದುವರಿದ ಭಾಗವಾಗಿ ಉಭಯ ರಾಷ್ಟ್ರಗಳ ನಡುವೆ ಶಾಂತಿಯುತ ಸಂಬಂಧವನ್ನು ಸ್ಥಾಪಿಸಲು ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿ ಪ್ರಯತ್ನಿಸುತ್ತಲೇ ಇದ್ದಾರೆ. ಈ ಹಿನ್ನೆಲೆಯಲ್ಲಿ ಆಗ್ರಾ ಶೃಂಗ ಮಹತ್ವ ಪಡೆಯುತ್ತದೆ. ಅದು ತಾಷ್ಕೆಂಟ್, ಶಿಮ್ಲಾ ಒಪ್ಪಂದವಿರಬಹುದು ಅಥವಾ ಲಾಹೋರ್ ಘೋಷಣೆಯಿರಬಹುದು, ತಾನೊಂದು ಶಾಂತಿಪ್ರಿಯ ರಾಷ್ಟ್ರವೆಂದು ಪ್ರತಿಬಿಂಬಿಸಿಕೊಳ್ಳಲು ಕಳೆದ 50 ವರ್ಷಗಳಲ್ಲಿ ಪಾಕಿಸ್ತಾನಕ್ಕೆ ಸಾಕಷ್ಟು ಅವಕಾಶಗಳು ದೊರೆತಿವೆ. ಆದರೆ ಈ ಎಲ್ಲ ಅವಕಾಶಗಳನ್ನೂ ಪಾಕಿಸ್ತಾನ ಹಾಳುಗೆಡವಿದೆ. ಆದರೆ ಇಂದು ಜಗತ್ತಿನಾದ್ಯಂತ ಭಯೋತ್ಪಾದನೆ ವಿರೋಧಿ ಭಾವನೆ ನೆಲೆಗೊಳ್ಳುತ್ತಿರುವುದರಿಂದ ಪಾಕಿಸ್ತಾನ ಮೂಲೆಗುಂಪಾಗುವ ಸಾಧ್ಯತೆ ಇದೆ. ಇನ್ನೊಂದೆಡೆ ಪಾಕಿಸ್ತಾನ ಕೂಡ ತಾಲಿಬಾನೀಕರಣದಿಂದ ತನ್ನನ್ನು ರಕ್ಷಿಸಿಕೊಳ್ಳಬೇಕಾದ ಅನಿವಾರ್ಯತೆಯಲ್ಲಿದೆ. ಚೆಂಡು ಮುಷರ್ರಫ್ ಅಂಗಳದಲ್ಲಿದೆ. ಇದು ಪಾಕಿಸ್ತಾನವನ್ನು ಶಾಂತಿಪ್ರಿಯ ರಾಷ್ಟ್ರವೆಂದು ಪ್ರತಿಬಿಂಬಿಸಿಕೊಳ್ಳಲು ಸಕಾಲ. ಪಾಕಿಸ್ತಾನದ ಬಗ್ಗೆ ಈಗಿರುವ ಅಭಿಪ್ರಾಯವನ್ನು ಬದಲಾಯಿಸಿಕೊಳ್ಳಬೇಕಾದರೆ ಈ ಅವಕಾಶವನ್ನು ಸದುಪಯೋಗಪಡಿಸಿಕೊಳ್ಳಬೇಕು. ಇನ್ನು ಮುಂದೆ ಜಾಗತಿಕ ಚರ್ಚೆಗಳಲ್ಲಿ ಭಯೋತ್ಪಾದನೆಯೇ ಮುಖ್ಯ ವಿಷಯವಾಗಲಿದೆ. ಮಾತುಕತೆಗಳ ಮೂಲಕ ಸಮಸ್ಯೆಯನ್ನು ಬಗೆಹರಿಸಿಕೊಳ್ಳಬೇಕೆಂಬ ಭಾರತದ ದೃಢ ನಿಲುವು ದೇಶದ ಪ್ರತಿಷ್ಠೆಯ ವಿಷಯದಲ್ಲಿ ಬಹುಮುಖ್ಯವೆನಿಸುತ್ತದೆ. ಒಂದು ವೇಳೆ ಪಾಕಿಸ್ತಾನ ಸಕಾರಾತ್ಮಕವಾಗಿ ಸ್ಪಂದಿಸಿದರೆ ಉಭಯ ದೇಶಗಳಿಗೂ ಅನುಕೂಲ





ಆಗುತ್ತದೆ. ಅಕಸ್ಮಾತ್ ನಕಾರಾತ್ಮಕವಾಗಿ ಸ್ಪಂದಿಸಿದರೆ ನಷ್ಟ ಪಾಕಿಸ್ತಾನಕ್ಕೆ".

"ಅಟಲ್ ಬಿಹಾರಿ ವಾಜಪೇಯಿ ಸರಕಾರದ ಕಾರ್ಯಸೂಚಿ ಶಾಂತಿಯುತ ಸಹಬಾಳ್ವೆಯಾಗಿದೆ. ಪೊಖ್ರಾನ್ ಅಣುಪರೀಕ್ಷೆಯ ಸಂದರ್ಭದಲ್ಲಿಯೂ ಶಾಂತಿಯೇ ನಮ್ಮ ಕಾರ್ಯಸೂಚಿಯಾಗಿತ್ತು. ಲಾಹೋರ್‌ಗೆ ಬಸ್ ಯಾತ್ರೆ ಕೈಗೊಂಡಾಗಲೂ ಶಾಂತಿಯೇ ನಮ್ಮ ಮುಖ್ಯ ಉದ್ದೇಶವಾಗಿತ್ತು. ಕಾರ್ಗಿಲ್ ಯುದ್ಧ ತುತ್ತ ತುದಿಗೇರಿದ್ದಾಗಲೂ ಗಡಿನಿಯಂತ್ರಣ ರೇಖೆಯನ್ನು ದಾಟದೆ ಇರಲು ಶಾಂತಿಯುತ ಸಹಬಾಳ್ವೆಯ ಆಶಯವೇ ಕಾರಣವಾಗಿತ್ತು. ರಮ್ಜಾನ್ ವೇಳೆಯಲ್ಲಿ ಏಕಪಕ್ಷೀಯವಾಗಿ ನಾವು ಕದನವಿರಾಮ ಘೋಷಿಸಿದಾಗಲೂ ಅದರ ಹಿಂದಿರುವ ಉದ್ದೇಶ ಶಾಂತಿ ಸ್ಥಾಪನೆಯೇ ಆಗಿತ್ತು. ಮುಷರ್ರಫ್ ಅವರ ಜತೆ ಮಾತುಕತೆಗೆ ಮುಂದಾಗಲು ಕಾರಣವೂ ಶಾಂತಿಯೇ. ಅಂದರೆ ಪಾಕಿಸ್ತಾನದ ಜತೆ ಸಂಧಾನಕ್ಕೆ ನಾವು ಸದಾ ಸಿದ್ಧ. ರಮ್ಜಾನ್ ವೇಳೆಯಲ್ಲಿ ನಾವು ಘೋಷಿಸಿದ ಏಕಪಕ್ಷೀಯ ಕದನವಿರಾಮ ವಿಫಲಗೊಂಡಿರಬಹುದು. ಭಯೋತ್ಪಾದಕರು ಶಸ್ತ್ರಾಸ್ತ್ರಗಳನ್ನು ಕೆಳಗಿಡದೇ ಇರಬಹುದು. ಆದರೆ ನಮ್ಮ ನಿರ್ಧಾರ ಕಾಶ್ಮೀರಿ ಮುಸ್ಲಿಮರ ಮನಸ್ಸಿನ ಮೇಲೆ ಖಂಡಿತ ಪರಿಣಾಮ ಬೀರಿದೆ. ಕದನವಿರಾಮ ಪಾಕಿಸ್ತಾನವನ್ನು ಇಸ್ಲಾಮಿಕ್ ಜಗತ್ತಿನಲ್ಲಿಯೇ ಮೂಲೆಗುಂಪು ಮಾಡಿದೆ. ಭಯೋತ್ಪಾದಕರು ಕಾಶ್ಮೀರಿಯರ ವಿಶ್ವಾಸ ಕಳೆದುಕೊಂಡಿದ್ದಾರೆ. ಭಾರತೀಯ ಹಾಗೂ ಪಾಕಿಸ್ತಾನಿ ಭಯೋತ್ಪಾದಕರ ನಡುವಿನ ಒಡಕು ಎದ್ದು ಕಾಣುತ್ತಿದೆ. ಒಂದು ವೇಳೆ ಲಾಹೋರ್ ಬಸ್ ಯಾತ್ರೆ ನಡೆಯದೆ ಕಾರ್ಗಿಲ್ ಯುದ್ಧ ಸಂಭವಿಸಿದ್ದರೆ ಕತೆಯೇ ಬದಲಾಗುತ್ತಿತ್ತು. ಈಗ ಕದನವಿರಾಮವನ್ನು ತೆಗೆದುಹಾಕಿದ್ದರೂ ನಮ್ಮ ಉದ್ದೇಶ ಶಾಂತಿ ಮಾತುಕತೆಯೇ ಆಗಿದೆ".

ಇಂತಹ ಮಾತುಗಳು ನರೇಂದ್ರ ಮೋದಿಯವರಲ್ಲೂ ಒಬ್ಬ ಮುತ್ಸದ್ದಿಯಿದ್ದಾನೆ ಎಂಬುದರ ದ್ಯೋತಕವಾಗಿದ್ದವು.





# 23

## ಮೋದಿ-ಆಡ್ವಾಣಿ ಹೋಲಿಕೆಯಲ್ಲೂ ಹುರುಳಿತ್ತು!

ಕೆಲವು ಪತ್ರಿಕೆಗಳು ಅಳೆದು-ತೂಗಿ ಮಾತನಾಡುವ, ಕೆಲವೊಮ್ಮೆ ಮೌನಕ್ಕೆ ಶರಣಾಗುವ ನರೇಂದ್ರ ಮೋದಿಯವರನ್ನು ಲಾಲ್‌ಕೃಷ್ಣ ಆಡ್ವಾಣಿಯವರೊಂದಿಗೆ ಹೋಲಿಸತೊಡಗಿದವು. 'ಆಡ್ವಾಣಿಯವರ ಹಾದಿಯಲ್ಲಿದ್ದಾರೆ ಮೋದಿ' ಎಂದು 'ದಿ ಪಯೊನೀರ್' ಪತ್ರಿಕೆ ಬರೆಯಿತು. "ಸಹೋದ್ಯೋಗಿಗಳು ಟೀಕಿಸಿದಾಗ ಆಡ್ವಾಣಿಯವರಂತೆಯೇ ಮೋದಿ ಮೌನಕ್ಕೆ ಶರಣಾಗುತ್ತಾರೆ ಎಂದು ಪಕ್ಷದ ನಾಯಕರೇ ಹೇಳುತ್ತಾರೆ" ಎಂದೂ ವರ್ಣಿಸಿತು. ಅಂತಹ ಹೋಲಿಕೆಗಳಲ್ಲೂ ಹುರುಳಿತ್ತು. ಮೋದಿಯವರು ಹಿಮಾಚಲ ಪ್ರದೇಶದ ಉಸ್ತುವಾರಿ ಹೊಂದಿದ್ದಾಗ ಅಲ್ಲಿನ ಪಕ್ಷದ ನಾಯಕ ಶಾಂತಕುಮಾರ್ ಮೋದಿ ವಿರುದ್ಧ ದೊಡ್ಡ ಬಂಡಾಯವನ್ನೇ ಎಬ್ಬಿಸಿದ್ದರು. ಪಕ್ಷದೊಳಗಿನ ಆಂತರಿಕ ಕಚ್ಚಾಟಕ್ಕೆ ಮೋದಿಯವರೇ ಕಾರಣ ಎಂದು ಗಂಭೀರವಾದ ಟೀಕೆ ಮಾಡಿದ್ದರು. ಆದರೆ ಮೋದಿ ಮಾತನಾಡಲಿಲ್ಲ. ಗುಜರಾತ್‌ನಲ್ಲಿ ಶಂಕರ್‌ಸಿನ್ಹ ವಾಘೇಲಾ ತಮ್ಮನ್ನು ಗುರಿಯಾಗಿಸಿಕೊಂಡಿದ್ದಾಗಲೂ ಮೋದಿ ಮಾತನಾಡಿರಲಿಲ್ಲ. ಕೊನೆಗೊಂದು ದಿನ ತಮಗೆ ತೊಂದರೆ ನೀಡಿದ್ದು ಮೋದಿಯವರಲ್ಲ ಎಂದು ಸ್ವತಃ ವಾಘೇಲಾ ಅವರೇ ಹೇಳಿಕೆ ನೀಡಿದರು. ಮೌನಕ್ಕೆ ಖಂಡಿತ ಬೆಲೆ ಸಿಗುತ್ತದೆ. ಮಾತಿಗಿಂತ ಮೌನವೇ ಕೆಲವೊಮ್ಮೆ ಉತ್ತಮ ಎಂಬುದು ಮೋದಿಯವರಿಗೆ ಚೆನ್ನಾಗಿ ಗೊತ್ತಿದೆ.

ಮಾಧ್ಯಮಗಳಿಗೂ ಮೋಡಿ ಮಾಡಿದ್ದರು ಮೋದಿ.

ಐವತ್ತೈದನೇ ಸ್ವಾತಂತ್ರ್ಯೋತ್ಸವ ಆಚರಣೆಯ ಸಂದರ್ಭದಲ್ಲಿ ದೇಶದ ಮುಂದಿನ ಹಾದಿಯ ಬಗ್ಗೆ ತಮ್ಮ ಅನಿಸಿಕೆಗಳನ್ನು ಹಂಚಿಕೊಳ್ಳಲು "ಸಿಫಿ ಡಾಟ್‌ಕಾಮ್" ಆಹ್ವಾನ ನೀಡಿತು. ಆಗ ಮೋದಿ ಮಾಡಿದ ಕೆಲವು ಟಿಪ್ಪಣಿಗಳೂ ನಿಜಕ್ಕೂ ಗಮನಾರ್ಹವಾಗಿದ್ದವು.

1. ನಮ್ಮ ದೇಶದ ವಿಭಜನೆಗೆ ಕಾರಣವಾದ ಶಕ್ತಿಗಳು ಇಂದಿಗೂ ಉಳಿದುಕೊಂಡಿರುವುದು ದೇಶದ ದುರಂತ. ನಮ್ಮ ರಾಜಕೀಯ ವ್ಯವಸ್ಥೆ ಅಂತಹ ಶಕ್ತಿಗಳು ಉಳಿದುಕೊಳ್ಳಲು ಅವಕಾಶ ಮಾಡಿಕೊಟ್ಟಿದೆ. 2. ನಾವು ಅದ್ಭುತವಾದ ಸಂವಿಧಾನವನ್ನು ಹೊಂದಿದ್ದು, ಒಬ್ಬ ಸಾಮಾನ್ಯ ವ್ಯಕ್ತಿ ಹಾಗೂ ಬಡಬಗ್ಗರಿಗೂ ನ್ಯಾಯ ಒದಗಿಸಲು ಕಳೆದ 50 ವರ್ಷಗಳಲ್ಲಿ ಪ್ರಯತ್ನಿಸಿದ್ದೇವೆ. 3. ದುರದೃಷ್ಟವಶಾತ್ ಸ್ವಾತಂತ್ರ್ಯ ಚಳವಳಿಯಲ್ಲಿ ಎದ್ದು ಕಾಣುತ್ತಿದ್ದ ಸೇವಾ ಮನೋಭಾವನೆ ಹಾಗೂ ಕರ್ತವ್ಯಪ್ರಜ್ಞೆಗಳು ಇತ್ತೀಚಿನ ದಿನಗಳಲ್ಲಿ ಅರ್ಥ ಕಳೆದುಕೊಳ್ಳುತ್ತಿವೆ. ಈಗೀಗ ಜನರು ತಮ್ಮ ಹಕ್ಕುಗಳ ಬಗ್ಗೆ ಕಾಳಜಿ ಹೊಂದಿದ್ದಾರೆಯೇ ಹೊರತು ದೇಶಸೇವೆ ಮತ್ತು ಕರ್ತವ್ಯಗಳನ್ನು ನಿರ್ಲಕ್ಷಿಸುತ್ತಿದ್ದಾರೆ. 4. ಒಂದು ವೇಳೆ ನಾವು ಪ್ರಗತಿಯನ್ನು ಕಾಣಬೇಕಾದರೆ ಸಮಾಜ ಮತ್ತು ರಾಷ್ಟ್ರಕ್ಕೆ ನಾವು ಮಾಡಬೇಕಾದ ಸೇವೆ ಮತ್ತು ಕರ್ತವ್ಯಕ್ಕೆ ಮೊದಲ ಆದ್ಯತೆ ದೊರೆಯಬೇಕು. 5. ನಾನು ಇಲ್ಲಿ ಒತ್ತಿ ಹೇಳಲು ಇಷ್ಟಪಡುವುದೇನೆಂದರೆ, ರಾಜಕಾರಣಿಗಳಿಗೆ ಅತಿಯಾದ ಮಹತ್ವ ನೀಡಿದ್ದೇವೆ. ಅವರಿಗೆ ಕೊಟ್ಟಿರುವ ಆದ್ಯತೆ ಅವರ ಯೋಗ್ಯತೆಗಿಂತ ಹೆಚ್ಚಾಗಿದೆ. 6. ಹಲವು ಸಹಸ್ರಮಾನಗಳ ನಮ್ಮ ದೇಶದ ಇತಿಹಾಸವನ್ನು ಗಮನಿಸಿದಾಗ ಈ ದೇಶ ಕಟ್ಟಿದ್ದು ರಾಜಕೀಯ ನಾಯಕರು ಮಾತ್ರವಲ್ಲ, ಒಬ್ಬ ರೈತ, ಧಾರ್ಮಿಕ ನಾಯಕರು, ವಿಜ್ಞಾನಿಗಳು, ಬುದ್ಧಿಜೀವಿಗಳು ಹೀಗೆ ಸಮಾಜದ ಎಲ್ಲ ವರ್ಗಗಳೂ ದೇಶ ನಿರ್ಮಾಣ ಕಾರ್ಯಕ್ಕೆ ತಮ್ಮ ಕೊಡುಗೆ ನೀಡಿದ್ದಾರೆ. ಭಾರತೀಯ ಸಮಾಜ ಈ ಎಲ್ಲ ಕೊಡುಗೆಗಳ ಒಟ್ಟು ಮೊತ್ತವಾಗಿದೆ. 7. ಆದರೆ ನಾವು ಬೇರಾರಿಗೋ ನೀಡುತ್ತಿರುವ ಆದ್ಯತೆಯಿಂದಾಗಿ ಶತಕೋಟಿ ಭಾರತೀಯರು ಈ ದೇಶದ ಪ್ರಗತಿಗೆ ಯಾವ ಕೊಡುಗೆಯನ್ನೂ ನೀಡಲು ಶಕ್ತರಲ್ಲ, ದೇಶದ ಪ್ರಗತಿ ರಾಜಕಾರಣಿಗಳನ್ನು ಅವಲಂಬಿಸಿದೆ ಎಂಬ ತಪ್ಪು ಕಲ್ಪನೆ ಮೂಡುತ್ತಿದೆ. 8. ಹಾಗಾಗಿ ನಾನು ಮಾಧ್ಯಮ ಸ್ನೇಹಿತರಲ್ಲಿ ಮನವಿ ಮಾಡಿಕೊಳ್ಳುವುದಿಷ್ಟೆ- ವಾರದಲ್ಲಿ ಕನಿಷ್ಠ ಎರಡು ದಿನಗಳಾದರೂ ರಾಜಕಾರಣಿಗಳ ಕಾರ್ಯಚಟುವಟಿಕೆಗಳ ಬಗ್ಗೆ ವರದಿ ಮಾಡುವುದನ್ನು ಬಿಟ್ಟು ಇತರ ವಿಷಯಗಳಿಗೆ ಆದ್ಯತೆ ನೀಡಿ. 9. ಇನ್ನು ಕನಿಷ್ಠ ಹತ್ತು ವರ್ಷಗಳಾದರೂ ಸರಕಾರಿ ಕಟ್ಟಡ ಹಾಗೂ ರಸ್ತೆಗಳಿಗೆ ಸತ್ತ ರಾಜಕಾರಣಿಗಳ ಹೆಸರಿಡುವುದನ್ನು ನಿಲ್ಲಿಸಿ ಎಂದು ಕೇಳಿಕೊಳ್ಳುತ್ತೇನೆ. 10. ನಾವು ಮಾಹಿತಿ ತಂತ್ರಜ್ಞಾನ(ಐಟಿ) ಯುಗದಲ್ಲಿದ್ದೇವೆ. ನನ್ನ ಮಟ್ಟಿಗೆ ಐಟಿ ಎಂದರೆ ಇನ್‌ಫರ್ಮೇಶನ್ ಟೆಕ್ನಾಲಜಿ ಮಾತ್ರವಲ್ಲ, 'ಇಂಡಿಯಾ ಟುಮಾರೋ!' 11. ಭಾರತೀಯ ಚಿಂತನೆಗಳು ಭಾವನಾತ್ಮಕ ಸಂಬಂಧದ ಜತೆ ಹೆಣೆದುಕೊಂಡಿವೆ. ಇಡಿ ಜಗತ್ತೇ ಒಂದು ಗ್ರಾಮ (ಗ್ಲೋಬಲ್ ವಿಲೇಜ್), ಒಂದು ದೊಡ್ಡ ಕುಟುಂಬ ಎಂಬ ಚಿಂತನೆ ಮೊದಲಿನಿಂದಲೂ ನಮ್ಮಲ್ಲಿದೆ. ಒಂದು ವೇಳೆ ಇಂತಹ ಚಿಂತನೆಯನ್ನು ಜಗತ್ತು ಒಪ್ಪಿಕೊಳ್ಳಬೇಕಾದರೆ ನಮ್ಮಲ್ಲಿ





ಒಗ್ಗಟ್ಟಿರಬೇಕು. ಒಗ್ಗಟ್ಟಿನಲ್ಲಿ ಬಲವಿದೆ, ಪ್ರಗತಿಯೂ ಇದೆ. ಔದಾರ್ಯ ಮನೆಯಿಂದಲೇ ಪ್ರಾರಂಭವಾಗಬೇಕು ಎಂಬ ಮಾತಿದೆ. ದೇಶದ ಸಾಮರ್ಥ್ಯ, ಗಟ್ಟಿತನ ಮತ್ತು ಪ್ರಗತಿಯೂ ಕುಟುಂಬದಲ್ಲಿಯೇ ಇದೆ. 12. ಸ್ವ- ಶಿಸ್ತು ಬೆಳೆಸಿಕೊಳ್ಳುವ ಸಾಮರ್ಥ್ಯ ಭಾರತಕ್ಕಿದೆ. ಪ್ರತಿ ವರ್ಷ ಅಲಹಾಬಾದ್‌ನಲ್ಲಿ ನಡೆಯುವ ಮಹಾಕುಂಭವೇ ಅದಕ್ಕೆ ಸಾಕ್ಷಿ. ಭಾರತ ಮನಸ್ಸು ಮಾಡಿದರೆ ಏನೂ ಮಾಡಬಲ್ಲದು ಎಂಬುದಕ್ಕೆ ಮಹಾಕುಂಭವೇ ಒಂದು ಉದಾಹರಣೆ. ಅದು ಪವಾಡವೆನಿಸುವ ಜನಸಂಘಟನೆ. ಪ್ರತಿ ದಿನ ಗಂಗಾನದಿಯ ದಡದಲ್ಲಿ ಸೇರುವ ಜನರ ಸಂಖ್ಯೆ ಒಂದು ಆಸ್ಟ್ರೇಲಿಯಾವನ್ನು ಮೀರಿಸುತ್ತದೆ. ಆದರೆ ಮಹಾಕುಂಭದ ವೇಳೆ ಯಾವುದೇ ಅಹಿತಕರ ಘಟನೆಗಳೂ ಸಂಭವಿಸುವುದಿಲ್ಲ, ಯಾವ ಗೊಂದಲವೂ ಇರುವುದಿಲ್ಲ, ಇದು ಜನ ನಿರ್ವಹಣೆಗೆ ಒಂದು ಅತಿ ದೊಡ್ಡ ನಿದರ್ಶನ. ನಾನು ಹೇಳಲು ಬಯಸುವುದಿಷ್ಟೆ- ಇದು ಭಾರತದ ಜನರ ಶಕ್ತಿಯನ್ನು ತೋರಿಸುತ್ತದೆ. ಮಹಾಕುಂಭದಲ್ಲಿ ಕಾಣಬಹುದಾದ ಶಕ್ತಿ ಮತ್ತು ಒಗ್ಗಟ್ಟನ್ನು ಬದುಕಿನ ಇತರ ಕ್ಷೇತ್ರಗಳಿಗೂ ಏಕೆ ವಿಸ್ತರಿಸಬಾರದು? ಮನಸ್ಸಿದ್ದರೆ ನಾವು ಏನನ್ನು ಕೂಡ ಸಾಧಿಸಬಲ್ಲೆವು ಅಲ್ಲವೆ?

ನನಗೆ, ನನ್ನ ಮಟ್ಟಿಗೆ ಯಾವುದೂ ಅಸಾಧ್ಯವಲ್ಲ, ಅಷ್ಟಕ್ಕೂ Impossible ಪದದಲ್ಲೇ I' m possible ಎಂಬ ಅರ್ಥವೂ ಇದೆ ಎಂದರು ಮೋದಿ!!

ದೇಶದ ಮುಂದಿನ ಹಾದಿಯ ಬಗ್ಗೆ ಮೋದಿ ನೀಡಿದ ರೂಪುರೇಷೆ ಹುಬ್ಬೇರಿಸುವಂತಿತ್ತು. ಆದರೆ ಈ ದೇಶದ ರಾಜಕಾರಣಿಗಳಲ್ಲಿ ಎಷ್ಟು ಜನ ತಮ್ಮನ್ನು ವಾರದಲ್ಲಿ ಕನಿಷ್ಠ ಎರಡು ದಿನವಾದರೂ ಮರೆಯಿರಿ ಎಂದು ಮಾಧ್ಯಮಗಳಿಗೆ ಹೇಳಬಲ್ಲರು?

ಇದೇನೇ ಇರಲಿ, 2000, ನವೆಂಬರ್ 3ರಂದು ಮೋದಿಯವರನ್ನು ಪಕ್ಷದ ಸಂಘಟನಾ ಪ್ರಧಾನ ಕಾರ್ಯದರ್ಶಿಯನ್ನಾಗಿ ನೇಮಕ ಮಾಡಲಾಯಿತು. ಆಗ ಕುಶಭಾವು ಠಾಕ್ರೆ ಪಕ್ಷದ ಅಧ್ಯಕ್ಷರಾಗಿದ್ದರು. ಮೋದಿ ನೇಮಕ ಗುಜರಾತ್‌ನಲ್ಲಿದ್ದ ಅವರ ಬೆಂಬಲಿಗರಿಗೆ ಸಂತೋಷ ತಂದಿತು. ಆದರೆ ಗುಜರಾತ್ ಮಾತ್ರ ರಾಜಕೀಯವಾಗಿ ಡೋಲಾಯಮಾನ ಸ್ಥಿತಿಯಲ್ಲಿತ್ತು. ರಾಜ್ಯ ಸರಕಾರ ಮತ್ತು ಪಕ್ಷದ ರಾಜ್ಯ ಘಟಕ ಪ್ರತ್ಯೇಕ ವ್ಯವಸ್ಥೆಗಳಂತೆ ವರ್ತಿಸುತ್ತಿದ್ದವು. ಪರಸ್ಪರ ದೋಷಾರೋಪದಲ್ಲಿ ತೊಡಗಿದ್ದವು. ಚುನಾವಣೆಯಲ್ಲಿ ಬಿಜೆಪಿಗೆ ಸಂಪೂರ್ಣ ಬಹುಮತ ನೀಡಿದ್ದ ಗುಜರಾತ್ ಮತದಾರರಿಗೆ ಮೋಸಹೋದಂತಾಗಿತ್ತು. 'ಉತ್ತಮವಾಗಿ ಆಡಳಿತ ನಡೆಸಿ' ಎಂದು ಕೇಶುಭಾಯಿಯವರಿಗೆ ಕಿವಿಹಿಂಡಿ ಹೇಳುವ ಸಾಮರ್ಥ್ಯ ಯಾರಿಗೂ ಇರಲಿಲ್ಲ, ಅಲ್ಲದೆ ಶಿಸ್ತು ಮತ್ತು ಒಗ್ಗಟ್ಟಿನಿಂದಿರುವಂತೆ ಪಕ್ಷಕ್ಕೆ ಹೇಳುವಂಥ ನಾಯಕರೂ ಇರಲಿಲ್ಲ.





# 24

## Impossible ಪದದಲ್ಲೇ I' m possible ಎಂಬರ್ಥ ಇದೆ ಎಂದಾತನೇ ಮುಖ್ಯಮಂತ್ರಿಯಾದ!

ನರೇಂದ್ರ ಮೋದಿಯವರು ಗುಜರಾತ್ ಮತ್ತು ಅಲ್ಲಿನ ರಾಜಕೀಯದಿಂದ ದೂರವಾಗಿ ಆರು ವರ್ಷಗಳೇ ಕಳೆದಿದ್ದವು. ಒಂದು ಕಾಲದಲ್ಲಿ ಮೋದಿಯವರ ಸಹೋದ್ಯೋಗಿಗಳಾಗಿದ್ದವರಿಗೆ ಗುಜರಾತ್ ರಾಜಕೀಯ ರಂಗ ಆಟದ ಮೈದಾನವಾಗಿತ್ತು. ಒಳಜಗಳವೇ ಅವರ ಅತಿದೊಡ್ಡ ಆಟವಾಗಿತ್ತು. 1999ರ ಚುನಾವಣೆಯನ್ನು ಬಿಟ್ಟರೆ 1995ರಿಂದ 2001ರವರೆಗೂ ಮೋದಿ ಗುಜರಾತ್‌ನಿಂದ ಸಂಪೂರ್ಣವಾಗಿ ಹೊರಗುಳಿದಿದ್ದರು. ಪ್ರಧಾನ ಕಾರ್ಯದರ್ಶಿ ಸ್ಥಾನ ಅವರು ದಿಲ್ಲಿಯಲ್ಲಿಯೇ ತಳವೂರುವಂತೆ ಮಾಡಿತ್ತು. ಸಂಘಟನಾ ಕಾರ್ಯದಿಂದಾಗಿ ಹೆಚ್ಚಿನ ಕಾಲ ದೇಶ ಪ್ರವಾಸದಲ್ಲೇ ಕಳೆದುಹೋಗುತ್ತಿತ್ತು. ಈ ನಡುವೆ 2001, ಆಗಸ್ಟ್ 23ರಂದು ಸಂಸ್ಕಾರಧಾಮದಲ್ಲಿ 'ತಪವಂದನ' ಎಂಬ ವಿಶೇಷ ಕಾರ್ಯಕ್ರಮವೊಂದನ್ನು ಆಯೋಜಿಸಲಾಯಿತು.

ಅದು ಮೋದಿಯವರ ಆರಾಧ್ಯದೈವ ಲಕ್ಷ್ಮಣ್‌ರಾವ್ ಇನಾಂದಾರ್ ಅಂದರೆ ವಕೀಲ್ ಸಾಹೇಬರ ಪುಣ್ಯತಿಥಿಯ ದಿನ.

ವಕೀಲ್ ಸಾಹೇಬರ ಜತೆ ಸೇವೆ ಸಲ್ಲಿಸಿದ ಹಾಗೂ 75 ವರ್ಷ ಮೀರಿದ ಸ್ವಯಂ ಸೇವಕರಿಗೆ ಸನ್ಮಾನ ಮಾಡುವ ಆ ಕಾರ್ಯಕ್ರಮಕ್ಕೆ ಆರೆಸ್ಸೆಸ್ ಮುಖಂಡ ಹೊ.ವೆ. ಶೇಷಾದ್ರಿ ಅವರು ಆಗಮಿಸಿದ್ದರು. ಆ ಸಂದರ್ಭದಲ್ಲಿ ವಕೀಲ್ ಸಾಹೇಬರ ನೆನಪಿಗಾಗಿ ಬರೆದ ಹಾಡುಗಳ ಕ್ಯಾಸೆಟ್ಟೊಂದನ್ನು ಬಿಡುಗಡೆ ಮಾಡಲಾಯಿತು. ಆ ಕ್ಯಾಸೆಟ್‌ನಲ್ಲಿ ಮೋದಿ ಬರೆದ ಗೀತೆಗಳೂ ಇದ್ದವು. ಅಂತಹ ಭಾವನಾತ್ಮಕ ಕ್ಷಣದಲ್ಲೂ ಗುಜರಾತ್ ಬಿಜೆಪಿ ಆತಂಕದಲ್ಲಿತ್ತು. ಬಿಜೆಪಿ ಪಾಲಿಗೆ ಎಲ್ಲವೂ ತಿರುಗುಬಾಣಗಳಾಗುತ್ತಿದ್ದವು. 2000-2001ರಲ್ಲಿ ಪಕ್ಷ ಎಂತಹ ಹೀನಾಯ ಸ್ಥಿತಿಗೆ ಬಂದು ತಲುಪಿತೆಂದರೆ ಪ್ರತಿಷ್ಠಿತ ಸಾಬರ್‌ಮತಿ ವಿಧಾನಸಭೆ ಹಾಗೂ

ಸಬರ್‌ಕಾಂತಾ ಲೋಕಸಭೆ ಕ್ಷೇತ್ರಕ್ಕೆ ನಡೆದ ಉಪಚುನಾವಣೆಯಲ್ಲಿ ಹೀನಾಯವಾಗಿ ಸೋತ ಬಿಜೆಪಿ, ಕಾಂಗ್ರೆಸ್‌ಗೆ ಶರಣಾಯಿತು. ಎಚ್ಚರಿಕೆಯ ಗಂಟೆ ಬಾರಿಸಲು ಅಷ್ಟು ಸಾಕಿತ್ತು. ಇಂತಹ ಸಂದರ್ಭದಲ್ಲಿ ಪಕ್ಷವನ್ನು ಸರಿಪಡಿಸಬಲ್ಲ ಏಕೈಕ ವ್ಯಕ್ತಿಯೆಂದರೆ ನರೇಂದ್ರ ಮೋದಿ ಎಂಬುದು ದಿಲ್ಲಿಯಲ್ಲಿದ್ದ ಪಕ್ಷದ ಬಾಸ್‌ಗಳಿಗೆ ತಿಳಿದಿತ್ತು.

ನನ್ನ ಮಟ್ಟಿಗೆ ಯಾವುದೂ ಅಸಾಧ್ಯವಲ್ಲ ಎಂದಿದ್ದ ಮೋದಿ ಮುಖ್ಯಮಂತ್ರಿಯಾಗಿದ್ದೂ ಒಂದು ಕುತೂಹಲಕಾರಿ ಘಟನೆಯೇ ಆಗಿತ್ತು.

2001, ಅಕ್ಟೋಬರ್‌ನಲ್ಲಿ ಸಂಭವಿಸಿದ ಹೆಲಿಕಾಪ್ಟರ್ ದುರಂತದಲ್ಲಿ ಕಾಂಗ್ರೆಸ್‌ನ ಖ್ಯಾತ ನಾಯಕ ಮಾಧವರಾವ್ ಸಿಂಧಿಯಾ ಮೃತರಾದರು. ಅವರ ಜತೆಯಲ್ಲಿದ್ದ 'ಆಜ್‌ತಕ್' ಟಿವಿಯ ಕ್ಯಾಮರಾಮನ್ ಗೋಪಾಲ್ ಕೂಡ ಪ್ರಾಣ ಕಳೆದುಕೊಂಡಿದ್ದರು. ಅವರನ್ನು ಬಹಳ ಹತ್ತಿರದಿಂದ ಬಲ್ಲವರಾಗಿದ್ದ, ಸ್ನೇಹಸಂಬಂಧವನ್ನೂ ಹೊಂದಿದ್ದ ಮೋದಿಯವರಿಗೂ ಅತೀವ ವಾಗಿ ನೋವುಂಟಾಗಿತ್ತು. ಗೋಪಾಲ್ ಅಂತ್ಯಕ್ರಿಯೆ ದಿಲ್ಲಿಯಲ್ಲಿಯೇ ನಡೆಯಲಿದೆ ಎಂಬ ಸುದ್ದಿ ಗೊತ್ತಾಗಿ ಮೋದಿ ಕೂಡ ಅಂತ್ಯಕ್ರಿಯೆಗೆ ಹೋಗಿದ್ದರು. ಅದೇ ಸಂದರ್ಭದಲ್ಲಿ ಪ್ರಧಾನಿ ಕಚೇರಿಯಿಂದ ಫೋನ್ ಬಂತು. ಇನ್ನೊಂದು ಬದಿಯಲ್ಲಿ ಪ್ರಧಾನಿ ಮಾತನಾಡುತ್ತಿದ್ದರು.

ವಾಜಪೇಯಿ: ಎಲ್ಲಿದ್ದೀಯಾ?

ಮೋದಿ: ಶವಾಗಾರದಲ್ಲಿದ್ದೇನೆ.

ವಾಜಪೇಯಿ: ಅಲ್ಲೇನು ಮಾಡುತ್ತಿದ್ದೀಯಾ?

ಮೋದಿ: ಸ್ನೇಹಿತ ಗೋಪಾಲ್ ಅವರ ಅಂತ್ಯಸಂಸ್ಕಾರಕ್ಕೆ ಆಗಮಿಸಿದ್ದೇನೆ.

ವಾಜಪೇಯಿ: ಸರಿ, ಸಾಯಂಕಾಲ ಬಂದು ನನ್ನನ್ನು ಕಾಣು.

ಹಾಗೆಂದು ವಾಜಪೇಯಿ ಫೋನಿಟ್ಟರು. ಸಂಜೆ ವೇಳೆಗೆ ಪ್ರಧಾನಿ ನಿವಾಸಕ್ಕೆ ಆಗಮಿಸಿದ ಮೋದಿಯವರನ್ನು ನೋಡಿದ ವಾಜಪೇಯಿ, "ದಿಲ್ಲಿಯಲ್ಲಿ ಪಂಜಾಬಿ ತಿನಿಸುಗಳನ್ನು ತಿಂದೂ ತಿಂದು ಊದಿದ್ದೀಯಾ. ನೀನು ಸ್ಲಿಮ್ ಆಗಬೇಕು. ಬೇಗ ಹೋಗು" ಎಂದರು!

ಮೋದಿ: ಹೋಗುವುದಾದರೂ ಎಲ್ಲಿಗೆ?

ವಾಜಪೇಯಿ: ಗುಜರಾತ್‌ಗೆ ಹೋಗು.

ಮೋದಿ: ನನಗೆ ಕೇವಲ ಗುಜರಾತ್‌ನ ಉಸ್ತುವಾರಿ ಇರುತ್ತದೆಯೋ ಅಥವಾ ಇತರ ರಾಜ್ಯಗಳ ಜವಾಬ್ದಾರಿಯೂ ಇದೆಯೇ?

ಗುಜರಾತ್‌ಗೆ ಹೋಗು ಅಂತ ವಾಜಪೇಯಿ ಹೇಳಿದ ಮಾತಿನ ಹಿಂದೆ "ಗುಜರಾತ್‌ನ ಮುಖ್ಯಮಂತ್ರಿಯಾಗು" ಎಂಬ ಅರ್ಥವಿದೆಯೆಂಬುದು ಮೋದಿಯವರಿಗೆ ತಿಳಿದಿರಲಿಲ್ಲ.





ಹಾಗಾಗಿ ಪಕ್ಷದ ಸಂಘಟನಾ ಜವಾಬ್ದಾರಿಯನ್ನು ನೀಡಲಾಗುತ್ತಿದೆ ಎಂದು ಭಾವಿಸಿ, ಕೇವಲ ಒಂದೇ ರಾಜ್ಯದ ಜವಾಬ್ದಾರಿಯಾಗಿದ್ದರೆ ಗತಿಯೇನು ಎಂಬ ಆತಂಕಕ್ಕೊಳಗಾಗಿದ್ದರು ಮೋದಿ. ಅವರ ಮುಗ್ಧತೆಯ ಅರಿವಾಗಿ ವಾಜಪೇಯಿ ಮಾತು ಮುಂದುವರಿಸಿದರು. ಆಗ ಮೋದಿಗೂ ಅರಿವಾಯಿತು.

ವಾಜಪೇಯಿ: ಇಲ್ಲ, ಇಲ್ಲ, ನೀನು ಚುನಾವಣೆಯಲ್ಲಿ ಸ್ಪರ್ಧಿಸಬೇಕು. ಇದುವರೆಗೂ ಇತರರ ಗೆಲುವಿಗಾಗಿ ಶ್ರಮಿಸುತ್ತಿದ್ದೆ. ಇನ್ನು ಮುಂದೆ ನಿನಗಾಗಿ ಹೋರಾಡು!

ಮೋದಿ: ನನ್ನಿಂದ ಸಾಧ್ಯವಿಲ್ಲ, ಬೇಕಾದರೆ ತಿಂಗಳಲ್ಲಿ 10 ದಿನ ಗುಜರಾತ್‌ಗೆ ಹೋಗಿ ಪಕ್ಷದ ಸಂಘಟನಾ ಜವಾಬ್ದಾರಿಯನ್ನು ನೋಡಿಕೊಳ್ಳುತ್ತೇನೆ. ಆದರೆ ರಾಜಕೀಯ ಬೇಡ. ಅದು ನನ್ನಿಂದಾಗದ ಕೆಲಸ. ಕಳೆದ ಆರು ವರ್ಷಗಳಿಂದ ನಾನು ಗುಜರಾತ್‌ನಿಂದ ದೂರವಿದ್ದೇನೆ. ಮೊದಲನೆಯದಾಗಿ ಅಲ್ಲಿನ ಬೆಳವಣಿಗೆಗಳ ಬಗ್ಗೆ ನನಗೇನೂ ತಿಳಿದಿಲ್ಲ, ಎರಡನೆಯದಾಗಿ, ರಾಜ್ಯವಿಧಾನಸಭೆಯನ್ನಾಗಲಿ, ಮುಖ್ಯಮಂತ್ರಿಯ ಚೇಂಬರನ್ನಾಗಲಿ ನಾನೆಂದೂ ನೋಡಿದವನಲ್ಲ, ಅಲ್ಲಿ ನಾನೇನು ಮಾಡಲಿ?

ವಾಜಪೇಯಿ: ನಾನು ದಿಲ್ಲಿಗೆ ಬಂದಾಗ ನನಗೆ ಯಾರು ಗೊತ್ತಿದ್ದರು?

ಹಾಗಂತ ವಾಜಪೇಯಿ ಮಾರುತ್ತರ ನೀಡಿದರೂ ಮೋದಿ ಮಾತ್ರ "ಇಲ್ಲ, ಇಲ್ಲ" ಎನ್ನುತ್ತಲೇ ಇದ್ದರು.

ರಾತ್ರಿ ಲಾಲ್‌ಕೃಷ್ಣ ಆಡ್ವಾಣಿಯವರ ಕರೆ ಬಂತು. ಬಂದು ಭೇಟಿಯಾಗು ಎಂದು ಆಡ್ವಾಣಿಯವರೂ ಹೇಳಿದರು.

ಆಡ್ವಾಣಿ: ಅಟಲ್‌ಜಿಗೆ ಏನು ಹೇಳಿದೆ?

ಮೋದಿ: ಏಕೆ?

ಆಡ್ವಾಣಿ: ನೋಡು, ಎಲ್ಲರೂ ಸೇರಿ ನಿನ್ನ ಬಗ್ಗೆ ನಿರ್ಧಾರ ಕೈಗೊಂಡಿದ್ದಾರೆ.

ಮೋದಿ: ನಾನು ಆ ಕೆಲಸಕ್ಕೆ ಅರ್ಹನಲ್ಲ.

ಹೀಗೆ ಜಂಜಾಟದಲ್ಲಿಯೇ ಐದಾರು ದಿನಗಳು ಕಳೆದವು. ಕೊನೆಗೂ ಸಂಘದ ಆದೇಶಕ್ಕೆ ತಲೆಬಾಗಲೇಬೇಕಾಯಿತು. ಅಂದಿನಿಂದ ಗುಜರಾತ್‌ನಲ್ಲಿದ್ದೇನೆ ಎಂದು ಅನುಭವವನ್ನು ತೋಡಿಕೊಳ್ಳುತ್ತಾರೆ ಮೋದಿ.

ಇತ್ತ ಮೋದಿಯವರನ್ನೇ ಗುಜರಾತ್ ಮುಖ್ಯಮಂತ್ರಿಯನ್ನಾಗಿ ಮಾಡಬೇಕೆಂಬುದು ಪಕ್ಷದ ಕಾರ್ಯಕರ್ತರ ಒತ್ತಾಸೆ, ಒತ್ತಡವೂ ಆಗಿತ್ತು. ಅದು ಮೋದಿಯವರಿಗೂ ತಿಳಿದಿತ್ತು. ಆದರೆ ಮುಖ್ಯಮಂತ್ರಿ ಗಾದಿಗೇರುವ ವಿಷಯದಲ್ಲಿ ಮಾತ್ರ ಅವರ ಮನಸ್ಸು

ಗಟ್ಟಿಯಾಗಿರಲಿಲ್ಲ, ಬೇರೆ ದಾರಿಯೂ ಇರಲಿಲ್ಲ, ಮೋದಿ ಗುಜರಾತ್‌ಗೆ ತೆರಳಿದರು. ಮುಖ್ಯಮಂತ್ರಿಯಾಗಿದ್ದ ಕೇಶುಭಾಯಿ ಕೂಡ ತಮ್ಮನ್ನು ಕೆಳಗಿಳಿಸಿದ್ದನ್ನು ಒಪ್ಪಿಕೊಂಡು, "ಒಬ್ಬ ಶಾಸಕ ಹಾಗೂ ಪಕ್ಷದ ಕಾರ್ಯಕರ್ತನಾಗಿ ನನ್ನ ಪಯಣ ಮುಂದುವರಿಯಲಿದೆ" ಎಂದು ಸ್ನೇಹಿತರ ಬಳಿ ಮಾರ್ಮಿಕವಾಗಿ ಹೇಳಿದರು. ಮುಖ್ಯಮಂತ್ರಿ ಸ್ಥಾನಕ್ಕೆ ಮೋದಿಯವರನ್ನೇ ಏಕೆ ಆಯ್ಕೆ ಮಾಡಲಾಯಿತು ಎಂಬುದು ಮಾತ್ರ ಯಾರಿಗೂ ತಿಳಿಯಲಿಲ್ಲ. ಆದರೆ ಉತ್ತರ ಪ್ರದೇಶದಲ್ಲಿ ರಾಜನಾಥ್‌ಸಿಂಗ್ ಅವರನ್ನು ಅಧ್ಯಕ್ಷ ಸ್ಥಾನಕ್ಕೆ ನೇಮಿಸಿದ ಹಾಗೆ ಮೋದಿಯವರನ್ನೂ ಕೂಡ ಪಕ್ಷವನ್ನು ಸರಿಪಡಿಸುವ ಸಲುವಾಗಿ ಆಯ್ಕೆ ಮಾಡಲಾಗಿತ್ತು. ಪಕ್ಷದ ಹಿಡಿತದಿಂದ ಜಾರಿಹೋಗುತ್ತಿದ್ದ ಉತ್ತರ ಪ್ರದೇಶದಲ್ಲಿ ಸಂಘಟನೆಗೆ ರಾಜನಾಥ್ ಮರುಚೈತನ್ಯ ತುಂಬಿದಂತೆ ಮೋದಿ ಕೂಡ ಮಾಡಬೇಕು ಎಂಬ ಬಯಕೆಯಿತ್ತು. ಗಾಂಧಿ ನಗರಕ್ಕೆ ಆಗಮಿಸಿದ ಕೂಡಲೇ ನೇರವಾಗಿ ಕೇಶುಭಾಯಿ ಪಟೇಲರ ಮನೆಗೆ ತೆರಳಿದ ಮೋದಿ ವೈಯಕ್ತಿಕವಾಗಿ ಮಾತುಕತೆ ನಡೆಸಿದರು. ಮರುದಿನವೇ ಕೇಶುಭಾಯಿ ಪಟೇಲ್ ರಾಜ್ಯಪಾಲ ಎಸ್.ಎಸ್. ಭಂಡಾರಿಯವರಿಗೆ ರಾಜೀನಾಮೆ ಪತ್ರ ಸಲ್ಲಿಸಿದರು. 2001, ಅಕ್ಟೋಬರ್ 4 ಮೋದಿಯವರ ಜೀವನದಲ್ಲಿ ಅತ್ಯಂತ ಮಹತ್ವದ ದಿನ. ಅಂದು ಪಕ್ಷದ ರಾಷ್ಟ್ರೀಯ ಅಧ್ಯಕ್ಷರ ಸಮ್ಮುಖದಲ್ಲಿ ಗಾಂಧಿನಗರದಲ್ಲಿ ಬಿಜೆಪಿ ಶಾಸಕರ ಸಭೆ ನಡೆಯಿತು. ನರೇಂದ್ರ ಮೋದಿಯವರನ್ನು ಬಿಜೆಪಿ ಶಾಸಕಾಂಗ ಪಕ್ಷದ ನಾಯಕರನ್ನಾಗಿ ಆಯ್ಕೆ ಮಾಡಲಾಯಿತು. ಸ್ವತಃ ಕೇಶುಭಾಯಿಯವರೇ ಮೋದಿ ಹೆಸರನ್ನು ಪ್ರಸ್ತಾಪಿಸಿದರು. ಸುರೇಶ್ ಮೆಹ್ತಾ ಅನುಮೋದಿಸಿದರು. ಕೇಂದ್ರ ನಾಯಕರಾಗಿದ್ದ ಮದನ್ ಲಾಲ್ ಖುರಾನಾ, ರಾಜ್ಯ ಬಿಜೆಪಿ ಅಧ್ಯಕ್ಷ ಕಾಶೀರಾಂ ರಾಣಾ ಕೂಡ ಉಪಸ್ಥಿತರಿದ್ದರು.

"**ಗಾಂಧಿನಗರ:** ಬಿಜೆಪಿ ರಾಷ್ಟ್ರೀಯ ಪ್ರಧಾನ ಕಾರ್ಯದರ್ಶಿ ಹಾಗೂ ಆರೆಸ್ಸೆಸ್‌ನ ಪ್ರಭಾವಿ ವ್ಯಕ್ತಿ ನರೇಂದ್ರ ಮೋದಿ ಭಾನುವಾರ ಗುಜರಾತ್‌ನ ಮುಖ್ಯಮಂತ್ರಿಯಾಗಿ ಪ್ರಮಾಣ ವಚನ ಸ್ವೀಕರಿಸಲಿದ್ದಾರೆ. ಗುಜರಾತ್‌ನಲ್ಲಿ ಪಕ್ಷದ ಪ್ರತಿಷ್ಠೆಯನ್ನು ಹೆಚ್ಚಿಸುವ ಸಲುವಾಗಿ ಅವರು ಭಾರೀ ಬದಲಾವಣೆ ತರಲು ಸಿದ್ಧರಾಗಿದ್ದಾರೆ. ಇತ್ತೀಚೆಗೆ ನಡೆದ ಸ್ಥಳೀಯ ಚುನಾವಣೆಯಲ್ಲಿ ನೆಲಕಚ್ಚಿರುವ ಪಕ್ಷವನ್ನು ಜೌಗಿನಿಂದ ಹೊರತೆಗೆಯಲು ಮೋದಿಯವರಿಗೆ ಪಕ್ಷದ ಹೈಕಮಾಂಡ್ ಎಲ್ಲ ಅಧಿಕಾರವನ್ನೂ ನೀಡಿದೆ. ಬುಧವಾರ ದಿಲ್ಲಿಯಿಂದ ಗುಜರಾತ್‌ಗೆ ಆಗಮಿಸಿದ ಕೂಡಲೇ ಮೋದಿ ತಮ್ಮ ಆದ್ಯತೆಯನ್ನೂ ಸ್ಪಷ್ಟಪಡಿಸಿದ್ದಾರೆ. 'ನನಗೆ ನಿಗದಿತ ಓವರ್‌ಗಳ ಪಂದ್ಯದಲ್ಲಿ ಬೇಗ ಸ್ಕೋರ್ ಮಾಡಲು ವೇಗದ ಹಾಗೂ ಸಮರ್ಥ ಬ್ಯಾಟ್ಸ್‌ಮನ್‌ಗಳು ಬೇಕು' ಎಂದು ಮೋದಿ ಹೇಳಿದ್ದಾರೆ. ಮೋದಿ ಮೂರು ಅಂಶಗಳ





ಕಾರ್ಯಸೂಚಿಯನ್ನು ಹೊಂದಿದ್ದಾರೆ ಎಂದು ಮೂಲಗಳು ತಿಳಿಸಿವೆ. ಕಾರ್ಯಕ್ಷಮತೆ, ಶಿಸ್ತು ಮತ್ತು ಸಮಗ್ರತೆಗೆ ಅವರ ಆದ್ಯತೆ. ಅಸಮರ್ಥ ಮಂತ್ರಿಗಳನ್ನು ಸಂಪುಟದಿಂದ ಹೊರಹಾಕುವ ಸಾಧ್ಯತೆ ಇದೆ".

ಹಾಗೆಂದು 2001, ಅಕ್ಟೋಬರ್ 5ರ ವರದಿಯಲ್ಲಿ 'ದಿ ಇಂಡಿಯನ್ ಎಕ್ಸ್‌ಪ್ರೆಸ್' ತಿಳಿಸಿತು.

ಅದು ಮೋದಿಯವರ ಜೀವನದ ಒಂದು ಭಾವನಾತ್ಮಕ ಕ್ಷಣ. ಕೇಶುಭಾಯಿ ಪಟೇಲ್, ಕುಶಭಾವು ಠಾಕ್ರೆಯವರ ಪಾದವನ್ನು ಮುಟ್ಟಿ ನಮಸ್ಕರಿಸಿದರು. ಸರಾಸರಿ ರನ್ ಗತಿಯನ್ನು ವೇಗದಲ್ಲಿಟ್ಟಿರಬೇಕು ಎಂದು ಪಕ್ಷದ ಕಾರ್ಯಕರ್ತರಿಗೆ ಕರೆ ನೀಡಿದ ಮೋದಿ, ಮುಂದಿನ ಚುನಾವಣೆಗೂ ಮುನ್ನ ನಮ್ಮ ಬಳಿ ಕೇವಲ 500 ದಿನಗಳು, ಅಂದರೆ 12 ಸಾವಿರ ಗಂಟೆಗಳಿವೆ ಎಂದರು! ಈ ಅವಧಿಯಲ್ಲಿ ಜನರ ಆಶೋತ್ತರಗಳನ್ನು ಈಡೇರಿಸಬೇಕು ಹಾಗೂ ಮುಂದಿನ ಚುನಾವಣೆಯಲ್ಲಿ ಪಕ್ಷದ ಗೆಲುವನ್ನು ಖಾತ್ರಿಗೊಳಿಸಬೇಕು ಎಂದ ಮೋದಿ, "ನಮ್ಮ ಗುಜರಾತ್, ವಿಶಿಷ್ಟ ಗುಜರಾತ್" ಎಂಬ ಘೋಷಣಾ ವಾಕ್ಯವನ್ನು ನೀಡಿದರು. ಇದಾಗಿ ಮೂರು ದಿನಗಳ ನಂತರ ಗುಜರಾತ್‌ನ 14ನೇ ಮುಖ್ಯಮಂತ್ರಿಯಾಗಿ ಪ್ರಮಾಣ ವಚನ ಸ್ವೀಕರಿಸಿದರು.

**ಪ್ರಚಾರಕರೊಬ್ಬರು ಮುಖ್ಯಮಂತ್ರಿಯಾದರು:**

ಆರೆಸ್ಸೆಸ್‌ನ ಸಕ್ರಿಯ ಪ್ರಚಾರಕರಾಗಿದ್ದವರೊಬ್ಬರು ಮುಖ್ಯಮಂತ್ರಿಯಾಗಿದ್ದು ಅದೇ ಮೊದಲು. ಹಾಗೆ ಮುಖ್ಯಮಂತ್ರಿಯಾಗಿ ಒಂದೇ ತಿಂಗಳಲ್ಲಿ ಪ್ರಧಾನಿ ವಾಜಪೇಯಿಯವರ ಜತೆ ರಷ್ಯಾಕ್ಕೆ ಭೇಟಿ ನೀಡುವ ಅವಕಾಶ ಮೋದಿಗೆ ದೊರೆಯಿತು. ಪ್ರಧಾನಿಯವರ ಸಮ್ಮುಖದಲ್ಲೇ ರಷ್ಯಾದ ಅರಕ್ಯಾನ್ ಪ್ರದೇಶ ಗುಜರಾತ್ ನಡುವೆ ಸಹಕಾರ ಒಪ್ಪಂದವೊಂದಕ್ಕೆ ಸಹಿ ಹಾಕಲಾಯಿತು. ಆ ಒಪ್ಪಂದ ವ್ಯಾಪಾರ, ವಾಣಿಜ್ಯ, ಸೇವಾ ಕ್ಷೇತ್ರ, ಸಾಂಸ್ಕೃತಿಕ ಕ್ಷೇತ್ರದಲ್ಲಿನ ಸಹಕಾರವನ್ನೂ ಒಳಗೊಂಡಿತ್ತು. 16ನೇ ಶತಮಾನದಲ್ಲಿಯೇ ಗುಜರಾತ್ ಮತ್ತು ಅರಕ್ಯಾನ್ ವಾಣಿಜ್ಯ ಸಂಬಂಧ, ಸಂಪರ್ಕ ಹೊಂದಿದ್ದವು ಎಂಬುದು ಆಗ ಬೆಳಕಿಗೆ ಬಂತು. ಗುಜರಾತ್‌ನ ಕಾಂಡ್ಲಾ ಹಾಗೂ ಓಖಾ ಬಂದರುಗಳನ್ನು ಸಹಕಾರಕ್ಕೆ ವಿನಿಯೋಗಿಸಿಕೊಳ್ಳಲು ನಿರ್ಧರಿಸಲಾಯಿತು. ಭಾರತಕ್ಕೆ ಭೇಟಿ ನೀಡಿದಾಗ ಗುಜರಾತ್‌ಗೂ ಆಗಮಿಸುವಂತೆ ರಷ್ಯಾ ಅಧ್ಯಕ್ಷ ವ್ಲಾದಿಮಿರ್ ಪುಟಿನ್‌ಗೆ ಮೋದಿ ಆಮಂತ್ರಣ ನೀಡಿದರು.

ಅಲ್ಲದೆ ಮುಖ್ಯಮಂತ್ರಿಯಾಗಿ ಒಂದು ತಿಂಗಳೊಳಗೆ ಮೋದಿಯವರಿಗೆ 134 ಅಮೂಲ್ಯ

ಉಡುಗೊರೆಗಳು ದೊರೆತವು. ಅವುಗಳನ್ನು ರಾಜ್ಯ ಖಜಾನೆಯಲ್ಲಿ ದಾಸ್ತಾನು ಮಾಡಿದ ಮೋದಿ, ಗುಜರಾತ್ ಚೇಂಬರ್ ಆಫ್ ಕಾಮರ್ಸ್ ಮೂಲಕ ಹರಾಜು ಹಾಕಿಸಿದರು. ಅದರಿಂದ ಬಂದ 17 ಲಕ್ಷ ರೂ.ಗಳನ್ನು ಹೆಣ್ಣುಮಕ್ಕಳ ಶಿಕ್ಷಣಕ್ಕೆ ವಿನಿಯೋಗಿಸುವುದಾಗಿ ಘೋಷಣೆ ಮಾಡಿದರು. ಮತ್ತೊಂದು ಹರಾಜಿನಲ್ಲಿ 8 ಲಕ್ಷ ರೂ. ಸಂಗ್ರಹವಾಯಿತು. ಅದನ್ನೂ ಹೆಣ್ಣುಮಕ್ಕಳ ಶಿಕ್ಷಣಕ್ಕೆ ನೀಡಿದರು. ಹೆಣ್ಣುಮಕ್ಕಳಿಗೆ ಶಿಕ್ಷಣ ನೀಡುವ ವಿಷಯ ಬಂದಾಗ ನಾನು ಯಾವ ಕ್ರಮಕ್ಕೂ ಸಿದ್ಧ ಎಂದರು. ಮೋದಿಯವರ ನಡೆ-ನುಡಿಗಳೆರಡೂ ಮಾದರಿಯಾಗಿದ್ದವು. ಅದುವರೆಗೂ ಯಾವ ಮುಖ್ಯಮಂತ್ರಿಯೂ ತಮಗೆ ದೊರೆತಿದ್ದ ಅಮೂಲ್ಯ ಉಡುಗೊರೆಗಳನ್ನು ಉದಾತ್ತ ಕಾರ್ಯವೊಂದಕ್ಕೆ ನೀಡಿರಲಿಲ್ಲ.

"ಬ್ರಹ್ಮಚಾರಿಯೊಬ್ಬ ಮುಖ್ಯಮಂತ್ರಿಯಾಗುವುದರ ಒಂದು ದೊಡ್ಡ ಅನುಕೂಲ ಇದೇ!" ಎಂದು ವರದಿಗಾರನೊಬ್ಬ ಆ ಬಗ್ಗೆ ಕಾಮೆಂಟ್ ಮಾಡಿದ್ದರು!

ಮುಖ್ಯಮಂತ್ರಿಯಾದ ಕೂಡಲೇ ಮೋದಿ ಮಾಡಿದ ಮೊದಲ ಕೆಲಸವೆಂದರೆ ತಮ್ಮ ತಾಯಿಯನ್ನು ಭೇಟಿಯಾಗಲು ಬಂದರು. ಪಾದ ಮುಟ್ಟಿ ಆಶೀರ್ವಾದ ಪಡೆದುಕೊಳ್ಳುವಾಗ 'ಮಗನೇ, ಯಾವತ್ತೂ ಲಂಚ ತೆಗೆದುಕೊಳ್ಳಬೇಡ!' ಎಂಬ ಕಿವಿಮಾತು ಬಂತು ಅಮ್ಮನಿಂದ. ನರೇಂದ್ರ ಮೋದಿಯವರ ಪ್ರಮಾಣ ವಚನ ಸ್ವೀಕಾರ ಸಮಾರಂಭ ಮರುದಿನದ ಪತ್ರಿಕೆಗಳಲ್ಲಿ ಮುಖಪುಟದ ಪ್ರಮುಖ ಸುದ್ದಿಯಾಗಬೇಕಿತ್ತು. ಆದರೆ ಅದೇ ರಾತ್ರಿ ಅಫ್ಘಾನಿಸ್ತಾನದ ರಾಜಧಾನಿ ಕಾಬೂಲ್ ಸಮೀಪದ ಭಯೋತ್ಪಾದಕ ಶಿಬಿರಗಳ ಮೇಲೆ ಅಮೆರಿಕ ದಾಳಿ ಮಾಡಿತು. ಎಲ್ಲ ಪತ್ರಿಕೆಗಳಲ್ಲೂ ಅದೇ ಪ್ರಮುಖ ಸುದ್ದಿಯಾಗಿ ಪ್ರಕಟವಾಯಿತು. ಮೋದಿ ಮುಖ್ಯಮಂತ್ರಿಯಾದ ಸುದ್ದಿ ಅಮೆರಿಕದ ದಾಳಿಯ ಅಬ್ಬರದಲ್ಲಿ ಒಳಪುಟ ಸೇರಿ ಕಳೆದು ಹೋಯಿತು! ಅಷ್ಟೇ ಅಲ್ಲ, ಸೆಕ್ಯುಲರ್ ಮಾಧ್ಯಮಗಳು ಪ್ರಾರಂಭದಲ್ಲಿಯೇ ಮೋದಿ ಬಗ್ಗೆ ಪೂರ್ವಗ್ರಹಪೀಡಿತವಾಗಿ ಬರೆಯ ತೊಡಗಿದವು. ಅದರಲ್ಲೂ ಒಂದು ಪತ್ರಿಕೆಯಂತೂ ತನ್ನ ಸಂಪಾದಕೀಯದಲ್ಲಿ, "ಸ್ಥಾನ ಬಿಟ್ಟುಕೊಡುತ್ತಿರುವ ಮುಖ್ಯಮಂತ್ರಿ ಕೇಶುಭಾಯಿಯವರ ಬಗ್ಗೆ ಕಣ್ಣೀರು ಸುರಿಸುವುದಕ್ಕಿಂತ ಅವರ ಉತ್ತರಾಧಿಕಾರಿಯಾಗುತ್ತಿರುವ ವ್ಯಕ್ತಿಯ ಬಗ್ಗೆ ಹುಬ್ಬೇರಿಸುತ್ತಿವವರ ಸಂಖ್ಯೆಯೇ ಹೆಚ್ಚಾಗಿದೆ. ಮೊದಲನೆಯದಾಗಿ, ಮೋದಿಯವರು ಹೆಚ್ಚಿನ ಶಾಸಕರಿಗೆ ಸ್ವೀಕಾರಾರ್ಹ ಅಭ್ಯರ್ಥಿಯಲ್ಲ. ಪಕ್ಷದ ಪ್ರಧಾನ ಕಾರ್ಯದರ್ಶಿಯಾಗಿದ್ದಾಗ ಹಾಗೂ ಗುಜರಾತ್ ರಾಜ್ಯ ಘಟಕದ ಉಸ್ತುವಾರಿ ಹೊಂದಿದ್ದಾಗ ಮೋದಿ ನಡೆದುಕೊಂಡ ರೀತಿಯ ಬಗ್ಗೆ ಇಂದಿಗೂ ಅಸಮಾಧಾನಗಳಿವೆ. ಈಗಾಗಲೇ ಆಂತರಿಕ ಕಚ್ಚಾಟದಿಂದಾಗಿ ಒಡೆದು ಚೂರಾಗಿರುವ ಪಕ್ಷಕ್ಕೆ ಮೋದಿ ಆಯ್ಕೆಯಿಂದ ಅಷ್ಟೇನು ಲಾಭವಿಲ್ಲ. ಅವರ





ರಾಜೀಮಾಡಿಕೊಳ್ಳದ ಸ್ವಭಾವಕ್ಕಿಂತ ಆರೆಸ್ಸೆಸ್ ಪ್ರಚಾರಕರಾಗಿದ್ದಾಗ ಅವರು ಕೋಮು ವಿಚಾರದಲ್ಲಿ ತಳೆದಿದ್ದ ಕಟ್ಟಾವಾದಿ ನಿಲುವುಗಳೇ ಆಯ್ಕೆಗೆ ಪ್ರಮುಖ ಕಾರಣ. ಈ ಹಿನ್ನೆಲೆಯಲ್ಲಿ, ಗುಜರಾತ್‌ಗೆ ಒಳ್ಳೆಯ ಆಡಳಿತ ನೀಡುವುದಕ್ಕಿಂತ ಹಿಂದುತ್ವದ ಬಗ್ಗೆಯೇ ಹೆಚ್ಚು ಕಾಳಜಿ ಹೊಂದಲಾಗಿದೆ..." ಎಂದು ಬರೆದಿತ್ತು.

ಇಂತಹ ಟೀಕೆಗಳಿಗೆ ಕಿವಿಗೊಡುವ ಸ್ಥಿತಿಯಲ್ಲಿರಲಿಲ್ಲ ಮೋದಿ. ಮುಖ್ಯಮಂತ್ರಿಯಾಗಿ ಪ್ರಮಾಣವಚನ ಸ್ವೀಕರಿಸಿದ ಅವರು ಯಾವುದಾದರೊಂದು ಕ್ಷೇತ್ರದಿಂದ ವಿಧಾನಸಭೆಗೆ ಆಯ್ಕೆಯಾಗಬೇಕಾಗಿತ್ತು. ರಾಜ್‌ಕೋಟ್ ವಿಧಾನಸಭೆ ಕ್ಷೇತ್ರವನ್ನು ಪ್ರತಿನಿಧಿಸುತ್ತಿದ್ದ ವಜೂಭಾಯಿ ವಾಲಾ ರಾಜೀನಾಮೆ ನೀಡುವ ಮೂಲಕ ತಮ್ಮ ಸ್ಥಾನವನ್ನು ಬಿಟ್ಟುಕೊಟ್ಟರು. ಫೆಬ್ರವರಿ 19ರಂದು ಚುನಾವಣೆಯೂ ನಡೆಯಿತು. ಐದು ದಿನಗಳ ನಂತರ ಅಂದರೆ, ಫೆಬ್ರವರಿ 24ರಂದು ಫಲಿತಾಂಶ ಪ್ರಕಟವಾದಾಗ ಮೋದಿ ವಿಜಯಿಯಾಗಿದ್ದರು. ವಾಜಪೇಯಿಯವರು ಹೇಳಿದಂತೆ, ಬೇರೆಯವರ ಗೆಲುವಿಗಾಗಿ ಶ್ರಮಿಸುತ್ತಿದ್ದ ಮೋದಿ ಸ್ವತಃ ಚುನಾವಣೆಯಲ್ಲಿ ಸ್ಪರ್ಧಿಸಿ ಗೆದ್ದು ಬಂದರು. ಅವರನ್ನು ಗೆಲ್ಲಿಸುವಂತೆ ರಾಜ್‌ಕೋಟ್‌ನ ಪಕ್ಷದ ಕಾರ್ಯಕರ್ತರಿಗೆ ಪತ್ರ ಬರೆದಿದ್ದ ವಾಜಪೇಯಿ "ಕಳೆದ ಹಲವಾರು ವರ್ಷಗಳಿಂದ ಇತರರಿಗಾಗಿ ನಿಸ್ವಾರ್ಥ ಸೇವೆಯನ್ನು ಮಾಡುತ್ತಾ ಬಂದಿರುವ ನೀವು ಉಳಿದವರಿಗೆ ಮಾದರಿಯಾಗಿದ್ದೀರಿ. ಈ ಬಾರಿಯೂ ಪೂರ್ಣ ಮನಸ್ಸಿನಿಂದ ಪ್ರಯತ್ನಿಸಿ ಮೋದಿಯವರನ್ನು ಗೆಲ್ಲಿಸಿ" ಎಂದು ಮನವಿ ಮಾಡಿದ್ದರು.

"ನನ್ನ ದೀರ್ಘ ಕಾಲದ ಸಾಮಾಜಿಕ ಜೀವನದಲ್ಲಿ ಚುನಾವಣೆ ಎದುರಿಸಬೇಕಾದ ಪ್ರಸಂಗ ಬರುತ್ತದೆಂದು ನಾನೆಂದೂ ಊಹಿಸಿರಲಿಲ್ಲ. ಸಂಘಟನೆಯ ಕಾರ್ಯದಲ್ಲೇ ಮುಳುಗಿ ಹೋಗಿದ್ದೆ. ಚುನಾವಣೆ ಬಂದಾಗ ಅಗತ್ಯ ಬಂದರೆ ಇತರರಿಗೆ ಸಹಾಯ ಮಾಡುತ್ತಿದ್ದೆ. ನಾನೇ ಸ್ಪರ್ಧಿಸುವಂತಹ ಪ್ರಸಂಗ ಬಂದಿರಲಿಲ್ಲ. ಅದನ್ನು ಕಲ್ಪಿಸಿಕೊಳ್ಳಲೂ ಆಗದು. ಆದರೆ ಇಂದು ಒಂದು ರೀತಿಯ ಉತ್ಸಾಹ, ಕುತೂಹಲ ಉಂಟಾಗಿದೆ. ರಾಜ್‌ಕೋಟ್‌ನಿಂದ ನನ್ನ ರಾಜಕೀಯ ಜೀವನವನ್ನು ಆರಂಭಿಸುತ್ತಿದ್ದೇನೆ" ಎಂದು ಚುನಾವಣೆಯಲ್ಲಿ ಗೆದ್ದ ನಂತರ ಮೋದಿ ಪಕ್ಷದ ಕಾರ್ಯಕರ್ತರನ್ನುದ್ದೇಶಿಸಿ ಹೇಳಿದ್ದರು.





# 25
# ನರೇಂದ್ರ ಮೋದಿಯವರ ಒನ್ ಡೇ ಮ್ಯಾಚ್!

ಗುಜರಾತ್ ಬಿಜೆಪಿ ಶಾಸಕಾಂಗ ಪಕ್ಷದ ನಾಯಕನನ್ನಾಗಿ ತಮ್ಮನ್ನು ಆಯ್ಕೆ ಮಾಡಿದ ಸಂದರ್ಭದಲ್ಲಿ "ಒನ್ ಡೇ ಮ್ಯಾಚ್ ಆಡಲು ಬಂದಿದ್ದೇನೆ" ಎಂದು ಮೋದಿ ಹೇಳಿದ್ದ ಮಾತು ಕುತೂಹಲ ಕೆರಳಿಸಿತು. ನಿಮ್ಮ ಮಾತಿನ ಅರ್ಥವೇನೆಂದು ಮಾಧ್ಯಮಗಳು ಪ್ರಶ್ನಿಸಲಾರಂಭಿಸಿದವು. ಒನ್ ಡೇ ಮ್ಯಾಚ್‌ಗಳು "ರನ್-ರೇಟ್" ಮೇಲೆ ಅವಲಂಬಿತವಾಗಿರುತ್ತವೆ, ಚುನಾವಣೆಗೆ ಇನ್ನು ಕೆಲವೇ ತಿಂಗಳುಗಳು ಉಳಿದಿರುವುದರಿಂದ ಜನರ ವಿಶ್ವಾಸ ಗಳಿಸಬೇಕಾದರೆ, ವೇಗವಾಗಿ ಗುರಿ ತಲುಪಬೇಕಾದರೆ ಸರಕಾರದ "ವರ್ಕ್ ರೇಟ್" ಹೆಚ್ಚಿಸಬೇಕು ಎಂದು ಮೋದಿ ವಿವರಣೆ ನೀಡಿದರು. ನನ್ನ ಪ್ರಕಾರ ಉತ್ತಮ ಆಡಳಿತಕ್ಕೆ ಯಾವುದೂ ಪರ್ಯಾಯವಾಗಲು ಸಾಧ್ಯವಿಲ್ಲ, ಉತ್ತಮ ಆಡಳಿತವೆಂದರೆ ಕಾರ್ಯದಕ್ಷ, ಜವಾಬ್ದಾರಿಯುತ ಹಾಗೂ ಫಲಿತಾಂಶ ಕೇಂದ್ರಿತ ವ್ಯವಸ್ಥೆ ಎಂದರ್ಥ ಎಂದು ಬಿಡಿಸಿ ಹೇಳಿದರು.

"ಇಂತಹ ಗುರಿ ಸಾಧನೆಗೆ ಯಾವುದೇ ಅಡ್ಡಮಾರ್ಗಗಳಿಲ್ಲ, ಗ್ರಾಮೀಣ ಜನರ ಕುಂದು ಕೊರತೆಗಳ ನಿವಾರಣೆಗಾಗಿ ನಾನು ಗ್ರಾಮಸಭೆ ನಡೆಸುವ ಯೋಜನೆ ಹಮ್ಮಿಕೊಂಡಿದ್ದೆ. 21 ದಿನಗಳ ಈ ಚಳವಳಿಯಲ್ಲಿ ಜಿಲ್ಲಾ ಅಧಿಕಾರಿಗಳ ಸಮ್ಮುಖದಲ್ಲಿ ಸುಮಾರು 85 ಸಾವಿರ ಸಮಸ್ಯೆಗಳನ್ನು ಆಲಿಸಲಾಯಿತು. ಅವುಗಳಲ್ಲಿ 74 ಸಾವಿರ ಸಮಸ್ಯೆಗಳಿಗೆ ಈಗಾಗಲೇ ಪರಿಹಾರ ಕಂಡುಕೊಳ್ಳಲಾಗಿದೆ. ಒಟ್ಟಾರೆ ಹೇಳುವುದಾದರೆ ಅಭಿವೃದ್ಧಿ ಯೋಜನೆಗಳಿಂದ ಪ್ರಾರಂಭವಾಗಿ ಸೇವೆ-ಸೌಲಭ್ಯಗಳ ಸದುಪಯೋಗ ಮತ್ತು ಮೂಲಭೂತ ಸೌಕರ್ಯಗಳ ಅಭಿವೃದ್ಧಿಯವರೆಗೂ ಎಲ್ಲ ವಿಷಯಗಳ ಬಗೆಗೂ ನಾನು ಗಮನಹರಿಸುತ್ತಿದ್ದೇನೆ. ಸರ್ದಾರ್ ಸರೋವರ ಯೋಜನೆಯ ತ್ವರಿತ ಜಾರಿ, ಕಛ್‌ವರೆಗೂ ಕುಡಿಯುವ ನೀರನ್ನು

ಕೊಂಡೊಯ್ಯುವುದು, ಆಡಳಿತಶಾಹಿಯನ್ನು ಜನಪರಗೊಳಿಸುವುದು ನನ್ನ ಕಾರ್ಯ ಸೂಚಿಯಲ್ಲಿರುವ ಪ್ರಮುಖ ಹಾಗೂ ಶೀಘ್ರವಾಗಿ ಪೂರ್ಣಗೊಳಿಸಬೇಕಾದ ಅಂಶಗಳು" ಎಂದು ಸ್ಪಷ್ಟವಾಗಿ ವಿವರಿಸಿದರು.

ಮೋದಿ ಮುಖ್ಯಮಂತ್ರಿಯಾದಾಗ ಗುಜರಾತ್ ಸರಣಿ ನೈಸರ್ಗಿಕ ವಿಕೋಪಗಳಿಗೆ ತುತ್ತಾಗಿತ್ತು.

ಆದರೆ ಗುಜರಾತಿಗಳ ಉತ್ಸಾಹ ಮಾತ್ರ ಕುಗ್ಗಿರಲಿಲ್ಲ, ಪ್ರತಿ ಬಾರಿ ಹೊಡೆತ ಬಿದ್ದಾಗಲೂ ಮತ್ತಷ್ಟು ಗಟ್ಟಿಯಾಗುತ್ತಾರೆ. ಇಂತಹ ಗುಣದಿಂದಾಗಿಯೇ ವಿಶ್ವಬ್ಯಾಂಕ್, ಏಷ್ಯಾ ಅಭಿವೃದ್ಧಿ ಬ್ಯಾಂಕ್ ಮತ್ತು ಯುಎನ್‌ಡಿಪಿಗಳು ಗುಜರಾತ್‌ನ ಪುನರ್ನಿರ್ಮಾಣಕ್ಕೆ ಹಿಂದೇಟು ಹಾಕದೆ ಸಹಾಯ ನೀಡುತ್ತಿವೆ ಎಂದು ಗುಜರಾತಿಗಳ ಬಗ್ಗೆ ಮೋದಿ ಮೆಚ್ಚುಗೆ ವ್ಯಕ್ತಪಡಿಸಿದರು. ಇತ್ತೀಚೆಗೆ ಭಾರತೀಯ ಅರ್ಥವ್ಯವಸ್ಥೆ ಮೇಲಿನ ಕೇಂದ್ರ ನಡೆಸಿರುವ ಸ್ವತಂತ್ರ ಸಮೀಕ್ಷೆಯ ವೇಳೆ ಬಂಡವಾಳ ಹೂಡಿಕೆ ವಿಷಯದಲ್ಲಿ ಗುಜರಾತ್ ನಂಬರ್-1 ರಾಜ್ಯ ಎಂದು ತಿಳಿದುಬಂದಿದೆ. 2005, ನವೆಂಬರ್ ವೇಳೆಗೆ 1,71,776 ಕೋಟಿ ರೂ. ಬಂಡವಾಳ ಹರಿದುಬಂದಿದೆ. ಅಲ್ಲದೆ ಯೋಜನೆಗಳ ಜಾರಿಯ ವಿಷಯದಲ್ಲೂ ಗುಜರಾತ್ ದೇಶದಲ್ಲಿಯೇ ಮೊದಲ ಸ್ಥಾನದಲ್ಲಿದೆ. ವಿವಿಧ ಅಭಿವೃದ್ಧಿ ಯೋಜನೆಗಳಲ್ಲಿ 84,435 ಕೋಟಿ ರೂ.ಗಳನ್ನು ತೊಡಗಿಸಲಾಗಿದೆ.

**ಕಛ್ ಅನ್ನು ನೆಲಕಚ್ಚಿಸಿದ ಭೂಕಂಪ**

2001, ಜನವರಿ 26ರಂದು ಇಡೀ ದೇಶವೇ ಸಂಭ್ರಮದಿಂದ ಗಣರಾಜ್ಯೋತ್ಸವವನ್ನು ಆಚರಿಸುತ್ತಿದ್ದರೆ, ಗುಜರಾತ್ ಮಾತ್ರ ತೀವ್ರ ಭೂಕಂಪಕ್ಕೆ ತುತ್ತಾಗಿ ತತ್ತರಿಸಿ ಹೋಯಿತು. ಕಛ್ ಮತ್ತು ಭುಜ್ ಜಿಲ್ಲೆಗಳು ನಾಮಾವಶೇಷವಾಗುವಷ್ಟು ಹಾನಿ ಅನುಭವಿಸಿದವು. ಜಾಮ್‌ನಗರ್, ರಾಜ್‌ಕೋಟ್, ಸುರೇಂದ್ರನಗರ್ ಹಾಗೂ ಪಠಾಣ್ ಜಿಲ್ಲೆಗಳಲ್ಲೂ ಮನೆಗಳಿಗೆ ಹಾನಿಯುಂಟಾಗಿತ್ತು. ಅನಿರೀಕ್ಷಿತ ಭೂಕಂಪ ಎಲ್ಲರನ್ನೂ ಆಶ್ಚರ್ಯಚಕಿತಗೊಳಿಸಿತ್ತು. ಓಡಿ ಹೊರಬರುವಷ್ಟರಲ್ಲಿ ಮನೆಗಳು ಕುಸಿದು ನೆಲಸಮವಾದವು. ಶಾಲೆ, ಮನೆ, ಆಸ್ಪತ್ರೆ, ವಾಣಿಜ್ಯ ಕಟ್ಟಡಗಳು ಕ್ಷಣಮಾತ್ರದಲ್ಲಿ ನೆಲಕ್ಕುರುಳಿದವು. 40 ಸಾವಿರಕ್ಕೂ ಹೆಚ್ಚು ಜನರು ಪ್ರಾಣ ಕಳೆದುಕೊಂಡರು. ಆಪತ್ತು ಸಂಭವಿಸಿದ ಹತ್ತು ನಿಮಿಷಗಳಲ್ಲಿ ರಾಜ್ಯ ತತ್ತರಿಸಿ ಹೋಯಿತು. ಆದರೆ ಗುಜರಾತಿಗಳು ಧೃತಿಗೆಡಲಿಲ್ಲ, ಆದರಲ್ಲೂ ಮೋದಿಯವರು ಮುಖ್ಯಮಂತ್ರಿಯಾದ ನಂತರ ತೀವ್ರ ಬದಲಾವಣೆಗಳಾದವು. ಆಪತ್ತಿನಿಂದ ಸೃಷ್ಟಿಯಾದ ಅವಕಾಶವನ್ನು ಸೇವಾ





ಕಾರ್ಯಕ್ಕೆ ಬಳಸಿಕೊಳ್ಳಲಾಯಿತು. ಹಾನಿಗೊಳಗಾಗಿದ್ದ ಜಿಲ್ಲೆಗಳ ಪುನರ್ನಿರ್ಮಾಣ ಕಾರ್ಯ ಆರಂಭವಾಯಿತು. 2002, ಜನವರಿ ವೇಳೆಗೆ 8 ಲಕ್ಷ ಮನೆಗಳನ್ನು ನಿರ್ಮಾಣ ಮಾಡಲಾಯಿತು. ಕೇವಲ ಮೂರು ತಿಂಗಳಲ್ಲಿ 6.6 ಲಕ್ಷ ಬ್ಯಾಂಕ್ ಖಾತೆಗಳನ್ನು ತೆರೆದು 10 ಸಾವಿರ ಫಲಾನುಭವಿಗಳಿಗೆ 1,100 ಕೋಟಿ ರೂ. ಪರಿಹಾರವನ್ನು ವಿತರಿಸಲಾಯಿತು. ಮನೆ ಕಟ್ಟಲು ಸಹಾಯ ನೀಡಲಾಯಿತು. ಒಂದು ಕೋಟಿ ಚೀಲ ಸಿಮೆಂಟನ್ನು ರಿಯಾಯಿತಿ ದರದಲ್ಲಿ ಮಾರಾಟ ಮಾಡಲಾಯಿತು.

ಪರಿಹಾರ ಹಾಗೂ ಪುನರ್ವಸತಿ ಕಾರ್ಯದಲ್ಲಿ ಸ್ಥಳೀಯ ಸಮುದಾಯಗಳನ್ನು ತೊಡಗಿಸಿಕೊಳ್ಳಲಾಯಿತು. ಶಾಲಾ ಕೊಠಡಿಗಳ ರಿಪೇರಿ ಅಥವಾ ನಿರ್ಮಾಣ ಕಾರ್ಯವನ್ನು ಗ್ರಾಮ ಮಟ್ಟದಲ್ಲಿಯ ಗುತ್ತಿಗೆದಾರರಿಗೇ ವಹಿಸಲಾಯಿತು. 42,678 ಶಾಲೆಗಳನ್ನು ದಾಖಲೆಯ ಸಮಯದಲ್ಲಿ ನಿರ್ಮಿಸಲಾಯಿತು. ಅದುವರೆಗೂ ತಾತ್ಕಾಲಿಕ ವ್ಯವಸ್ಥೆ ಮಾಡುವ ಮೂಲಕ ಮಕ್ಕಳ ಶೈಕ್ಷಣಿಕ ವರ್ಷ ಹಾಳಾಗದಂತೆ ನೋಡಿಕೊಳ್ಳಲಾಯಿತು. ನೈಸರ್ಗಿಕ ದುರಂತಗಳು ಸಂಭವಿಸಿದಾಗ ಯಾವ ಮುಂಜಾಗ್ರತೆಗಳನ್ನು ತೆಗೆದುಕೊಳ್ಳಬೇಕು ಎಂಬ ಬಗ್ಗೆ ಜಾಗೃತಿಯನ್ನುಂಟು ಮಾಡುವ ಸಲುವಾಗಿ 8ನೇ ತರಗತಿಯಲ್ಲಿ ವಿಶೇಷ ಅಧ್ಯಾಯಗಳನ್ನು ಅಳವಡಿಸಲಾಯಿತು. 2005ರ ವೇಳೆಗೆ ಹಾನಿಗೊಳಗಾಗಿದ್ದ 9,17,158 ಮನೆಗಳಲ್ಲಿ 9,08,710 ನಿವಾಸಗಳನ್ನು ವಾಸಕ್ಕೆ ಸಂಪೂರ್ಣವಾಗಿ ಸಿದ್ಧಪಡಿಸಲಾಯಿತು. ಹಾಗಂತ ಯಾರನ್ನೂ ಸ್ಥಳಾಂತರ ಮಾಡಿರಲಿಲ್ಲ, 6,500 ಎಂಜಿನಿಯರ್‌ಗಳು ಹಾಗೂ 29,679 ಗೃಹನಿರ್ಮಾಣ ತಜ್ಞರಿಗೆ ತರಬೇತಿಯನ್ನು ನೀಡಲಾಯಿತು.

"ಎಲ್ಲಿ ಆರೋಗ್ಯವಿರುತ್ತದೋ ಅಲ್ಲಿ ಆತ್ಮವಿಶ್ವಾಸವಿರುತ್ತದೆ. ಎಲ್ಲಿ ಆತ್ಮವಿಶ್ವಾಸವಿರುತ್ತದೋ ಅಲ್ಲಿ ಎಲ್ಲವೂ ಇರುತ್ತವೆ" ಎಂಬ ಅರಬ್ ನಾಣ್ಣುಡಿ ಗುಜರಾತ್‌ಗೆ ಹೇಳಿ ಮಾಡಿಸಿದಂತಿತ್ತು.

# 26
## ಗೋಧ್ರಾ ಸತ್ಯಕ್ಕೆ ಬುರ್ಖಾ ತೊಡಿಸಹೋದ ಸೆಕ್ಯುಲರಿಸ್ಟ್‌ಗಳು

2001, ಅಕ್ಟೋಬರ್ 7ರಂದು ಗುಜರಾತ್‌ನ ಮುಖ್ಯಮಂತ್ರಿಯಾಗಿ ಪ್ರಮಾಣವಚನ ಸ್ವೀಕರಿಸಿದ ಮೋದಿ ಇನ್ನೂ ವಿಧಾನಸಭೆಯ ಸದಸ್ಯರಾಗಿ ಆಯ್ಕೆಯಾಗಿಯೇ ಇರಲಿಲ್ಲ. ಸಂವಿಧಾನದ ನಿಯಮದಂತೆ ಚುನಾವಣೆಯಲ್ಲಿ ಆರಿಸಿಬರುವ ಸಲುವಾಗಿ 2002, ಫೆಬ್ರವರಿ 19ರಂದು ರಾಜ್‌ಕೋಟ್‌ನಿಂದ ವಿಧಾನಸಭೆಗೆ ಸ್ಪರ್ಧಿಸಿದರು. ಫೆಬ್ರವರಿ 24ರಂದು ಫಲಿತಾಂಶ ಪ್ರಕಟವಾಯಿತು. ಮೋದಿ ಗೆಲುವು ಸಾಧಿಸಿದರು. ಇದಾಗಿ ಮೂರು ದಿನಗಳಲ್ಲಿಯೇ ಅಂದರೆ, 2002, ಫೆಬ್ರವರಿ 27ರಂದು ಫೈಜಾಬಾದ್‌ನಿಂದ ಅಹಮದಾಬಾದ್‌ಗೆ ತೆರಳುತ್ತಿದ್ದ ಸಾಬರ್‌ಮತಿ ಎಕ್ಸ್‌ಪ್ರೆಸ್ ರೈಲಿನ ಮೇಲೆ ಪೂರ್ವಯೋಜಿತ ದಾಳಿ ನಡೆಯಿತು. ಗೋಧ್ರಾ ಬಳಿ ನಡೆದ ಈ ದಾಳಿಯಲ್ಲಿ ಮಹಿಳೆಯರು, ಮಕ್ಕಳೂ ಸೇರಿದಂತೆ 58 ಜನರು ಸಜೀವ ದಹನವಾದರು.

ಇಷ್ಟೆಲ್ಲ ನಡೆದಿದ್ದು ಹಾಡಹಗಲಲ್ಲೇ, ಎಲ್ಲರ ಸಮ್ಮುಖದಲ್ಲೇ!

ಗೋಧ್ರಾ ಘಟನೆಯ ನಂತರ ನಡೆದ ಹಿಂಸಾಚಾರದ ಬಗ್ಗೆ ಸಾಕಷ್ಟು ಬರೆಯಲಾಗಿದೆ. ಇಂದಿಗೂ ಮತ್ತೆ ಮತ್ತೆ ಕೆದಕಲಾಗುತ್ತದೆ. ಆದರೆ ಮೋದಿ ಚುನಾವಣೆಯಲ್ಲಿ ಗೆದ್ದ ಮೂರೇ ದಿನಗಳಲ್ಲಿ ಗೋಧ್ರಾ ಘಟನೆ ನಡೆದಿದ್ದೇಕೆ? ಅದು ಕಾಕತಾಳೀಯವೇ? ಆಕಸ್ಮಿಕವೇ? ಅಥವಾ ಪೂರ್ವಯೋಜಿತವೇ? ಇಂತಹ ಪ್ರಶ್ನೆಗಳ ಬಗ್ಗೆ ಯಾರೂ ಗಮನಹರಿಸಿಲ್ಲ. ಫೆಬ್ರವರಿ 27ರ ಬೆಳಗ್ಗೆ ಏನಾಯಿತು ಎಂಬುದನ್ನು ಗಮನಿಸೋಣ.

7.42: ಸಾಬರ್‌ಮತಿ ಎಕ್ಸ್‌ಪ್ರೆಸ್ ರೈಲು ಗೋಧ್ರಾ ನಿಲ್ದಾಣಕ್ಕೆ ಆಗಮನ.

7.47: ಮುಂದಕ್ಕೆ ಹೊರಡಲು ಪ್ರಾರಂಭ. ಆದರೆ ರೈಲ್ವೆ ನಿಲ್ದಾಣದಲ್ಲಿ ಹೊತ್ತು ಮಾರುವವರು ಕಲ್ಲು ತೂರಾಟ ಆರಂಭಿಸುತ್ತಾರೆ.

7.50: ರೈಲಿನ ಚೈನು ಎಳೆಯಲಾಗುತ್ತದೆ.

8.00: ಎರಡನೇ ಬಾರಿಗೆ ಚೈನನ್ನು ಎಳೆಯುತ್ತಾರೆ.

8.07: ರೈಲನ್ನು ಸುತ್ತುವರಿದ ದೊಡ್ಡ ಗುಂಪೊಂದು ಎಸ್-6 ಬೋಗಿಗೆ ಬೆಂಕಿ ಹಚ್ಚಿತು.

ಈ ಘಟನೆಯ ಬಗ್ಗೆ ಸತ್ಯಶೋಧನೆ ಮಾಡುವ ಸಲುವಾಗಿ ಸಂಪಾದಕರ ತಂಡವೊಂದು ಗುಜರಾತಿಗೆ ತೆರಳಿತು. ಅದನ್ನು "ಸೆಕ್ಯುಲರ್ ಮಿಷನ್" ಎಂದು ಕರೆಯಬಹುದು. ಏಕೆಂದರೆ ಮುಂಬೈನ ಮಿಡ್ ಡೇ ಪತ್ರಿಕೆಯ ಸಂಪಾದಕ ಆಕಾರ್ ಪಟೇಲ್, ಖ್ಯಾತ ಪತ್ರಕರ್ತ ಬಿ.ಜಿ. ವರ್ಗೀಸ್ ಹಾಗೂ ದಿಲೀಪ್ ಪಡಗಾಂವ್‌ಕರ್ ಆ ತಂಡದಲ್ಲಿದ್ದರು.

"ಸಾಬರ್‌ಮತಿ ಎಕ್ಸ್‌ಪ್ರೆಸ್ ರೈಲು ನಿಗದಿತ ಸಮಯಕ್ಕಿಂತ ವಿಳಂಬವಾಗಿ ಸಾಗುತ್ತಿತ್ತು. ಹಾಗೆ ಸಾಗುತ್ತಿದ್ದ ರೈಲಿಗೆ ಫೆಬ್ರವರಿ 27ರ ಬೆಳಗ್ಗೆ 8 ಗಂಟೆಗೆ ಗೋಧ್ರಾ ಬಳಿ ಬೆಂಕಿ ಹಚ್ಚಲಾಯಿತು. ಸ್ಥಳೀಯ ವರದಿಗಾರರು ಕೂಡಲೇ ಸ್ಥಳಕ್ಕೆ ಧಾವಿಸಿ ಸುದ್ದಿ ಮಾಡಿದರು. ಬಹುಶಃ ಈ ಘಟನೆಯನ್ನು ಮೊದಲು ವರದಿ ಮಾಡಿದ್ದು ಆಜ್‌ತಕ್ ಟಿವಿ. ಝೀ ಟಿವಿಯ ಸ್ಥಳೀಯ ಕ್ಯಾಮರಾಮನ್ ಗೋಧ್ರಾಕ್ಕೆ ಧಾವಿಸಿ ವೀಡಿಯೊ ಚಿತ್ರಣಗಳನ್ನು ತೆಗೆದು, ಕೂಡಲೇ ಅಹಮದಾಬಾದ್‌ಗೆ ಕಳುಹಿಸಿದರು. ಎರಡು ಗಂಟೆಯ ವೇಳೆಗೆ ಪ್ರಸಾರ ವನ್ನೂ ಮಾಡಲಾಯಿತು. ಇತ್ತ ದೂರದರ್ಶನ ಸೇರಿದಂತೆ ಇತರ ಚಾನೆಲ್‌ಗಳು ತಮ್ಮ ಕ್ಯಾಮರಾಮನ್‌ಗಳನ್ನು ಕಳುಹಿಸಿದವು. ಈ ಮಧ್ಯೆ ಅನಾಮಧೇಯ ಇ-ಮೇಲೊಂದು ಎಲ್ಲರಿಗೂ ಬರಲಾರಂಭಿಸಿತು. ಘಟನೆಯ ಪ್ರತ್ಯಕ್ಷದರ್ಶಿಗಳಾಗಿದ್ದ ಸ್ಥಳೀಯ ವರದಿಗಾರರಾದ ಅನಿಲ್ ಮತ್ತು ನೀಲಮ್ ಸೋನಿ ಎಂಬವರ ವ್ಯಕ್ತಿ ಮತ್ತು ದೂರವಾಣಿ ಸಂಖ್ಯೆಗಳನ್ನು ಆ ಇ-ಮೇಲ್‌ನಲ್ಲಿ ಉಲ್ಲೇಖಿಸಲಾಗಿತ್ತು. ಅದರಲ್ಲಿ, ಕರಸೇವಕರು ಹಾಗೂ ತಿಂಡಿ ತಿನಿಸುಗಳನ್ನು ಮಾರಾಟ ಮಾಡುತ್ತಿದ್ದ ಅಲ್ಪಸಂಖ್ಯಾತ ಸಮುದಾಯದವರ ನಡುವೆ ಘರ್ಷಣೆಯೊಂದು ನಡೆಯಿತು. ಅಲ್ಲದೆ ಮುಸ್ಲಿಂ ಸಮುದಾಯದ ಬಾಲಕಿಯೊಬ್ಬಳ ಮೇಲೆ ಕರಸೇವಕರು ಲೈಂಗಿಕ ದೌರ್ಜನ್ಯ ನಡೆಸಿದ ಕಾರಣ ಕೋಪೋದ್ರಿಕ್ತ ಅಲ್ಪಸಂಖ್ಯಾತರು ಕರಸೇವಕರಿದ್ದ ಎಸ್-16 ಬೋಗಿಯ ಮೇಲೆ ಕಲ್ಲು ತೂರಾಟ ಆರಂಭಿಸಿದರು. ಕೊನೆಗೆ ಬೆಂಕಿ ಹಚ್ಚಲಾಯಿತು" ಎಂದು ವಿವರಿಸಲಾಗಿತ್ತು.

ಇದು ಸಂಪಾದಕರ ತಂಡ ನೀಡಿದ ವರದಿ. ಆದರೆ ಇ-ಮೇಲನ್ನು ಕಳುಹಿಸಲು ಆರಂಭಿಸಿದ್ದು ಯಾರು, ಯಾವಾಗ ಎಂಬುದು ಮಾತ್ರ ಸ್ಪಷ್ಟವಾಗಲಿಲ್ಲ. ಈ ಬಗ್ಗೆ ಅನಿಲ್ ಮತ್ತು ನೀಲಮ್ ಸೋನಿಯವರನ್ನೇ ಪ್ರಶ್ನಿಸಿದಾಗ, ನಾವು ಅಂತಹ ಯಾವುದೇ ವರದಿಯನ್ನೂ ಮಾಡಿಲ್ಲ ಎಂದರು. ನಮ್ಮ ಹೇಳಿಕೆಯನ್ನು ತಿರುಚಲಾಗಿದೆ ಎಂದು ಪ್ರತಿಪಾದಿಸಿದರು.





ಹಾಗಾದರೆ ಘಟನೆ ನಡೆದ ಕೆಲವೇ ಕ್ಷಣಗಳಲ್ಲಿ ಲಕ್ಷಾಂತರ ಜನರಿಗೆ ಕಳುಹಿಸಲಾದ ಇ-ಮೇಲ್ ಸೃಷ್ಟಿಯಾಗಿದ್ದು ಹೇಗೆ? ಅಷ್ಟೊಂದು ಶೀಘ್ರವಾಗಿ ಸುಳ್ಳಿನ ಸರಮಾಲೆಯನ್ನು ಹರಡಲು ಯತ್ನಿಸಿದ್ದು ಯಾವ ಉದ್ದೇಶಕ್ಕಾಗಿ? ಯಾರ ಹಿತಾಸಕ್ತಿಗಾಗಿ? ಅದಿರಲಿ, ಕರಸೇವಕರು ಅತ್ಯಾಚಾರವೆಸಗಿದ್ದಾರೆನ್ನಲಾದ 16 ವರ್ಷದ ಮುಸ್ಲಿಂ ಯುವತಿ ಎಲ್ಲಿ ಹೋದಳು? ಈ ಬಗ್ಗೆ ಯಾವ ಉತ್ತರವೂ ಇಲ್ಲ. ಸೆಕ್ಯುಲರ್ ಮಾಧ್ಯಮಗಳಿಗೆ ಉತ್ತರವೂ ಬೇಕಿಲ್ಲ. ಮೋದಿಯವರನ್ನು ನಿಂದಿಸಲು ನೆಪವೊಂದು ಬೇಕಿತ್ತಷ್ಟೆ.

"2002, ಫೆಬ್ರವರಿ 27ರ ರಾತ್ರಿ ಉನ್ನತ ಅಧಿಕಾರಿಗಳನ್ನು ಕರೆಸಿಕೊಂಡ ಮೋದಿ, ಹಿಂದೂಗಳ ಪ್ರತೀಕಾರ ಹೋರಾಟದಲ್ಲಿ ಹಸ್ತಕ್ಷೇಪ ಮಾಡಬೇಡಿ ಎಂದು ನಿರ್ದೇಶನ ನೀಡಿದರು. ಇಂತಹ ಮಾಹಿತಿಯನ್ನು ನೀಡಿದ್ದು ಮೋದಿ ಸಂಪುಟದಲ್ಲಿದ್ದ ಸಚಿವರೊಬ್ಬರು" ಎಂದು ಔಟ್‌ಲುಕ್ ಪತ್ರಿಕೆ ಪ್ರತಿಪಾದಿಸಿತು.

ಆದರೆ ನಡೆದಿದ್ದೇನು?

1. ಗೋಧ್ರಾ ದುರಂತ ಸಂಭವಿಸಿದ ಕೆಲವೇ ನಿಮಿಷಗಳಲ್ಲಿ ಇಡಿ ರಾಜ್ಯಾದ್ಯಂತ ಮುನ್ನೆಚ್ಚರಿಕೆ ನೀಡಲಾಯಿತು.

2. ಪರಿಸ್ಥಿತಿಯ ಮೇಲೆ ನಿಗಾ ಇಡುವಂತೆ ಪೊಲೀಸರಿಗೆ ಸೂಚನೆ ಹೋಯಿತು.

3. ಪರಿಸ್ಥಿತಿ ಉದ್ವಿಗ್ನಗೊಳ್ಳುವುದನ್ನು ತಡೆಯುವ ಸಲುವಾಗಿ ಸುಟ್ಟು ಕರಕಲಾದ ದೇಹಗಳನ್ನು ಅಹಮದಾಬಾದ್‌ಗೆ ತಾರದೆ ದೂರದ ಸ್ಥಳದಲ್ಲಿ ಸಾಮೂಹಿಕವಾಗಿ ಅಂತ್ಯಸಂಸ್ಕಾರ ಮಾಡಬೇಕೆಂದು ಸೂಚಿಸಲಾಯಿತು.

4. ಗೋಧ್ರಾದಲ್ಲಿ ಫೆಬ್ರವರಿ 27ರಂದೇ ಕರ್ಫ್ಯೂ ವಿಧಿಸಿದರೆ, ಮರುದಿನ ವಡೋದರಾ, ಅಹಮದಾಬಾದ್ ನಗರ, ಸಬರ್‌ಕಾಂತಾ ಸೇರಿದಂತೆ ರಾಜ್ಯದ ಎಲ್ಲ ಸೂಕ್ಷ್ಮ ಪ್ರದೇಶಗಳಿಗೂ ಕರ್ಫ್ಯೂವನ್ನು ವಿಸ್ತರಿಸಲಾಯಿತು. ಮಾರ್ಚ್ 1ರ ವೇಳೆಗೆ ಹೆಚ್ಚೂಕಡಿಮೆ ರಾಜ್ಯಾದ್ಯಂತ ಕರ್ಫ್ಯೂ ಜಾರಿಯಲ್ಲಿತ್ತು.

5. ರಾಜ್ಯ ಸಚಿವ ಸಂಪುಟದ ತುರ್ತು ಸಭೆ ಕರೆದ ಮುಖ್ಯಮಂತ್ರಿ ಮೋದಿ, ಜನರು ಶಾಂತಿಯಿಂದಿರುವಂತೆ ಮನವಿ ಮಾಡಿಕೊಂಡರು.

6. ರಾಜ್ಯ ಸರಕಾರ ಉದ್ವಿಗ್ನ ಪರಿಸ್ಥಿತಿಯನ್ನು ನಿಯಂತ್ರಣಕ್ಕೆ ತರುವ ಸಲುವಾಗಿ ಪೊಲೀಸ್ ಹಾಗೂ ಮೀಸಲುಪಡೆಯನ್ನು ನಿಯೋಜಿಸಿತು.

7. ಶೀಘ್ರ ಪ್ರಹಾರ ದಳವನ್ನು ಕರೆಸಿ ಅಹಮದಾಬಾದ್, ವಡೋದರಾ ಮತ್ತು ಗೋಧ್ರಾಗಳಲ್ಲಿ ನಿಯೋಜನೆ ಮಾಡಲಾಯಿತು.

8. ಅರೆಸೇನಾ ಪಡೆಗಳಿಗೂ ಕರೆ ನೀಡಿ ಸೂಕ್ಷ್ಮ ಪ್ರದೇಶಗಳಿಗೆ ಕಳುಹಿಸುವ ಮೂಲಕ ಪರಿಸ್ಥಿತಿ ಕೈಮೀರದಂತೆ ತಡೆಯಲು ಯತ್ನಿಸಲಾಯಿತು.

9. ಧಾರ್ಮಿಕ ಸ್ಥಳಗಳಲ್ಲಿ ಮುಂಜಾಗ್ರತಾ ಕ್ರಮವಾಗಿ ಪೊಲೀಸರನ್ನು ನಿಯೋಜಿಸಿದ್ದಲ್ಲದೆ, ಎಚ್ಚರಿಕೆಯ ಸಂದೇಶವನ್ನೂ ನೀಡಲಾಯಿತು.

10. ಫೆಬ್ರವರಿ 28ರಂದು ಕೇಂದ್ರ ಸರಕಾರಕ್ಕೆ ಮನವಿ ಮಾಡಿದ ಮೋದಿ ಸೇನೆಯನ್ನು ಕಳುಹಿಸಿಕೊಡುವಂತೆ ಕೋರಿದರು. ಏಕೆಂದರೆ ಅಹಮದಾಬಾದ್‌ನಲ್ಲಿ ಸೇನಾ ಪಡೆಯ ಯಾವ ತುಕಡಿಗಳೂ ಇರಲಿಲ್ಲ. ಗಡಿಯಲ್ಲಿದ್ದ ಸೈನಿಕರನ್ನು ಅಹಮದಾಬಾದ್, ವಡೋದರಾ ಹಾಗೂ ರಾಜ್‌ಕೋಟ್‌ಗಳಿಗೆ ವಿಮಾನದ ಮೂಲಕ ಕರೆತರಲಾಯಿತು.

11. ಅಹಮದಾಬಾದ್ ನಗರದಲ್ಲಿಯೇ ಮಾರ್ಚ್ 1ರಂದು ಎರಡು ಸೂಕ್ಷ್ಮ ಪ್ರದೇಶಗಳಲ್ಲಿ ಸೇನಾ ತುಕಡಿಗಳನ್ನು ನಿಯೋಜಿಸಲಾಯಿತು.

12. ಕಂಡಲ್ಲಿ ಗುಂಡು ಆದೇಶವನ್ನು ನೀಡಲಾಯಿತು.

13. ಮುಂಜಾಗ್ರತಾ ಕ್ರಮವಾಗಿ ಸಾವಿರಾರು ಜನರನ್ನು ಬಂಧಿಸಲಾಯಿತು.

14. ಸಚಿವರು ಹಾಗೂ ಕಾರ್ಯದರ್ಶಿಗಳಿಗೆ ಸಂಬಂಧಪಟ್ಟ ಜಿಲ್ಲೆಗಳ ಪರಿಸ್ಥಿತಿಯ ಮೇಲೆ ನಿಗಾ ಇಡುವಂತೆ ಸೂಚಿಸಲಾಯಿತು.

ಹೀಗೆ ಎಲ್ಲ ರೀತಿಯ ಮುಂಜಾಗ್ರತೆಗಳನ್ನು ತೆಗೆದುಕೊಂಡ ಮೋದಿಯವರನ್ನು ಸೆಕ್ಯುಲರ್ ಮಾಧ್ಯಮಗಳು, ವಾದಿಗಳು ದೂರುವುದರಲ್ಲಿ ಯಾವ ಅರ್ಥವಿದೆ? ಒಂದು ವೇಳೆ ಮೋದಿಯವರಿಗೆ ಅಲ್ಪಸಂಖ್ಯಾತರ ಬಗ್ಗೆ ಯಾವ ಕಾಳಜಿಯೂ ಇರದಿದ್ದರೆ ಅರೆಸೇನಾ ಪಡೆಗಳು, ಶೀಘ್ರ ಪ್ರಹಾರ ದಳ ಹಾಗೂ ಸೇನೆಯನ್ನು ಏಕೆ ನಿಯೋಜಿಸುತ್ತಿದ್ದರು? ಗುಜರಾತ್ ವಿಧಾನಸಭೆಯ ಅಧಿವೇಶನವನ್ನು ಅರ್ಧದಲ್ಲೇ ಬಿಟ್ಟು ಮೋದಿ ಫೆಬ್ರವರಿ 27ರಂದು ಗೋಧ್ರಾಕ್ಕೆ ಧಾವಿಸುತ್ತಿದ್ದರೆ?

ಇಷ್ಟಾಗಿಯೂ ಗುಜರಾತ್ ಜನರ ಬಗ್ಗೆ ಮಾಧ್ಯಮಗಳು ಮತ್ತು ಸೆಕ್ಯುಲರ್‌ವಾದಿಗಳು ಟೀಕಾಪ್ರಹಾರ ಮಾಡಿದವು. ಇದು ಗುಜರಾತಿಗಳಿಗೆ ನೋವುಂಟುಮಾಡಿತು.





## ಪದಪುಂಜ

ನರೇಂದ್ರ ಮೋದಿ ಹೊಸ ಪದಪುಂಜಗಳನ್ನೂ ಹುಟ್ಟುಹಾಕಬಲ್ಲರು.

1. ಸಿ.ಎಂ.: ಕಾಮನ್ ಮ್ಯಾನ್ (ನರೇಂದ್ರ ಮೋದಿ)
2. ಸಿ.ಎಂ.: ಚೀಫ್ ಮಾನ್‌ಸ್ಟರ್ (ಇಂಗ್ಲಿಷ್ ಮಾಧ್ಯಮಗಳು).
3. ಬಿ.ಟಿ.: ಭಾರತ್ ಟುಮಾರೋ
4. ಐ.ಟಿ.: ಇಂಡಿಯನ್ ಟೆಕ್ನಾಲಜಿ
5. ಐ.ಟಿ.: ಇಂಡಿಯಾ ಟುಮಾರೋ
6. ವಿ.ಜಿ. ವೈಬ್ರಂಟ್ ಗುಜರಾತ್





# 27
# ವಾದಕ್ಕಿಳಿದ ವಾಜಪೇಯಿ!

2002, ಏಪ್ರಿಲ್‌ನಲ್ಲಿ ಗೋವಾದಲ್ಲಿ ಬಿಜೆಪಿ ಕಾರ್ಯಕಾರಿಣಿ ಸಭೆ ಆರಂಭವಾಯಿತು. ವಿನಾಕಾರಣ ತಮ್ಮನ್ನು ಕಟುವಾಗಿ ಟೀಕಿಸುತ್ತಿದ್ದ ಮಾಧ್ಯಮಗಳಿಂದಾಗಿ ಮನನೊಂದು ಮೋದಿ ಮುಖ್ಯಮಂತ್ರಿ ಸ್ಥಾನಕ್ಕೆ ರಾಜೀನಾಮೆ ನೀಡಲು ಮುಂದಾದರು. ಆದರೆ ಅವರ ರಾಜೀನಾಮೆಯನ್ನು ತಿರಸ್ಕರಿಸಲಾಯಿತು. ಏಪ್ರಿಲ್ 12ರಂದು ಗೋವಾದಲ್ಲಿ ನಡೆದ ಸಾರ್ವಜನಿಕ ಸಭೆಯಲ್ಲಿ ಅಟಲ್ ಬಿಹಾರಿ ವಾಜಪೇಯಿಯವರು ಗುಜರಾತ್ ಹಿಂಸಾಚಾರದ ಬಗ್ಗೆ ಮಾತನಾಡಿದರು.

"ಭಾರತದ ಜಾತ್ಯತೀತತೆಯೇ ಅಪಾಯದಲ್ಲಿದೆ ಎಂಬ ಆರೋಪಗಳು ಇಂದು ಕೇಳಿ ಬರುತ್ತಿವೆ. ನಮ್ಮ ವಿರುದ್ಧ ಆರೋಪಿಸುತ್ತಿರುವ ಈ ವ್ಯಕ್ತಿಗಳು ಯಾರು? ಈ ವ್ಯಕ್ತಿಗಳ ಪ್ರಕಾರ ಜಾತ್ಯತೀತತೆಯ ಅರ್ಥವೇನು? ಮುಸ್ಲಿಮರು ಮತ್ತು ಕ್ರೈಸ್ತರು ಕಾಲಿಡುವ ಮೊದಲೇ ಈ ದೇಶ ಜಾತ್ಯತೀತವಾಗಿತ್ತು. ಮುಸ್ಲಿಮರು ಮತ್ತು ಕ್ರೈಸ್ತರು ಬಂದ ಮೇಲೆ ಭಾರತ ಜಾತ್ಯತೀತ ರಾಷ್ಟ್ರವಾಗಲಿಲ್ಲ. ಈ ದೇಶಕ್ಕೆ ಆಗಮಿಸಿದ ಅನ್ಯ ಧರ್ಮೀಯರಿಗೆ ಅವರವರ ನಂಬಿಕೆ, ಆಚಾರ ವಿಚಾರಗಳನ್ನು ಅನುಸರಿಸಲು, ಆರಾಧಿಸಲು ಮುಕ್ತ ಅವಕಾಶ ನೀಡಲಾಗಿತ್ತು. ಅವರನ್ನು ಯಾರೂ ಬಲಪ್ರಯೋಗದ ಮೂಲಕ ಮತಾಂತರಿಸಲು ಪ್ರಯತ್ನಿಸಲಿಲ್ಲ. ಏಕೆಂದರೆ ಬಲಾತ್ಕಾರವಾಗಿ ಮತಾಂತರ ಮಾಡುವ ಸಂಸ್ಕೃತಿ ನಮ್ಮ ದೇಶದಲ್ಲಿರಲಿಲ್ಲ. ಕೆಲವೊಮ್ಮೆ ಸಣ್ಣಪುಟ್ಟ ಘಟನೆಗಳು ನಡೆಯುತ್ತವೆ. ಅವು ಕೈಮೀರಿ ದೊಡ್ಡ ತಿಕ್ಕಾಟಗಳೂ ಆಗಬಹುದು. ಆದರೆ ಎಲ್ಲ ಘಟನೆಗಳ ಮೂಲಕ್ಕೆ ಹೋಗಿ ನೋಡಿದರೆ ಅವು ಹೆಚ್ಚುತ್ತಿರುವ ಅಸಹನೆಯ ಫಲವಾಗಿರುತ್ತವೆ.

ಗುಜರಾತ್‌ನಲ್ಲಿ ನಡೆದಿದ್ದಾದರೂ ಏನು?

ಒಂದು ವೇಳೆ ಅಮಾಯಕ ಕರಸೇವಕರನ್ನು ಸಾಬರ್‌ಮತಿ ರೈಲಿನ ಬೋಗಿಗಳಲ್ಲಿ ಜೀವಂತವಾಗಿ ಸುಟ್ಟುಹಾಕುವ ಪಿತೂರಿ ರೂಪಿಸದೆ ಹೋಗಿದ್ದಿದ್ದರೆ ಗುಜರಾತ್ ಹಿಂಸಾಚಾರವೇ ಸಂಭವಿಸುತ್ತಿರಲಿಲ್ಲ. ಆದರೆ ಆದಾಗಲಿಲ್ಲ. ಕರಸೇವಕರನ್ನು ಸಜೀವವಾಗಿ ದಹನ ಮಾಡಲಾಯಿತು. ಇದಕ್ಕೆ ಕಾರಣಕರ್ತರಾರು? ಸರಕಾರ ಈ ಬಗ್ಗೆ ತನಿಖೆ ನಡೆಸುತ್ತಿದೆ. ಗೂಢಚರ ಸಂಸ್ಥೆಗಳು ಮಾಹಿತಿ ಕಲೆಹಾಕುತ್ತಿವೆ. ಆದರೆ ಗುಜರಾತ್ ದುರಂತಕ್ಕೆ ಎಡೆ ಮಾಡಿಕೊಟ್ಟ ಮೂಲ ಕಾರಣವನ್ನು ನಾವು ಮರೆಯಬಾರದು. ಗೋಧ್ರಾ ನಂತರದ ಹಿಂಸಾಚಾರವನ್ನು ಖಂಡಿತ ಖಂಡಿಸಲೇಬೇಕು. ಆದರೆ ಬೋಗಿಗೆ ಬೆಂಕಿ ಇಟ್ಟವರಾರು? ಆ ಬೆಂಕಿ ಹರಡಿದ್ದು ಹೇಗೆ?

ನಮ್ಮದು ಬಹುಧರ್ಮೀಯ ರಾಷ್ಟ್ರ. ಹಲವಾರು ಭಾಷೆಗಳು ನಮ್ಮ ದೇಶದಲ್ಲಿವೆ. ಒಬ್ಬೊಬ್ಬರು ಒಂದೊಂದು ದೇವರನ್ನು ಆರಾಧಿಸುತ್ತಾರೆ. ನಾವು ಶಾಂತಿಯುತ ಸಹಬಾಳ್ವೆಯಲ್ಲಿ ನಂಬಿಕೆ ಇಟ್ಟಿದ್ದೇವೆ. ಧರ್ಮಗಳಿಗೆ ಸಮಾನ ಗೌರವ ನೀಡಬೇಕೆಂದು ನಾವು ನಂಬಿದ್ದೇವೆ. ಯಾರು ಕೂಡ ಭಾರತದ ಜಾತ್ಯತೀತತೆಯ ಬಗ್ಗೆ ಪ್ರಶ್ನಿಸಬಾರದು. ನಮ್ಮ ಪಾಲಿಗೆ ಗೋವಾದಿಂದ ಗುವಾಹಟಿಯವರೆಗೂ ಭಾರತದ ಮಣ್ಣು ಒಂದೇ. ಈ ನೆಲದಲ್ಲಿ ವಾಸಿಸುತ್ತಿರುವವರೆಲ್ಲ ಒಂದೇ. ನಮಗೆ ಧಾರ್ಮಿಕ ತೀವ್ರವಾದದಲ್ಲಿ ನಂಬಿಕೆ ಇಲ್ಲ. ಇಂದು ಭಯೋತ್ಪಾದನೆ ನಮ್ಮ ದೇಶಕ್ಕೆ ಅತಿ ದೊಡ್ಡ ಬೆದರಿಕೆಯಾಗಿದೆ. ನಾನು ಜಗತ್ತಿನ ಯಾವ ರಾಷ್ಟ್ರಕ್ಕೆ ಹೋದರೂ ಅಲ್ಲಿನ ಆಡಳಿತದ ಚುಕ್ಕಾಣಿ ಹಿಡಿದವರು ಉಗ್ರ ಇಸ್ಲಾಂ ಭಯೋತ್ಪಾದನೆಯ ಬೀಜ ಬಿತ್ತುತ್ತಿದೆಯೆಂದು ದೂರುತ್ತಾರೆ. ಇಸ್ಲಾಂನಲ್ಲಿ ಎರಡು ಮುಖಗಳಿವೆ. ಒಂದು ಅನ್ಯ ಧರ್ಮೀಯರ ಬಗ್ಗೆ ಸಹಿಷ್ಣು ಭಾವನೆ ಹೊಂದಿದೆ. ಸತ್ಯ ಮಾರ್ಗವನ್ನು ತುಳಿಯಬೇಕೆಂದು, ಪರಸ್ಪರ ಪ್ರೀತಿ, ಅನುಕಂಪ ಮತ್ತು ಸಂವೇದನೆಯನ್ನು ಬೆಳೆಸಿಕೊಳ್ಳಬೇಕೆಂದು ಹೇಳುತ್ತದೆ. ಆದರೆ ಇಂದು ಇಸ್ಲಾಂ ಹೆಸರಿನಲ್ಲಿ ತಲೆಯೆತ್ತುತ್ತಿರುವ ಭಯೋತ್ಪಾದನೆಯಲ್ಲಿ ಸಹಿಷ್ಣುತೆಗೆ ಜಾಗವೇ ಇಲ್ಲ. ಅವರು ಜಿಹಾದ್‌ನ ಕಹಳೆಯೂದಿದ್ದಾರೆ. ಇಡಿ ಜಗತ್ತನ್ನೇ ತಮ್ಮ ಹಿಡಿತಕ್ಕೆ ತೆಗೆದುಕೊಳ್ಳುವ ಮಾತನ್ನಾಡುತ್ತಿದ್ದಾರೆ. ಎಲ್ಲೆಲ್ಲಿ ಮುಸ್ಲಿಮರಿದ್ದಾರೋ ಅಲ್ಲೆಲ್ಲಾ ಅವರು ಇತರರೊಂದಿಗೆ ಬೆರೆತು ಬದುಕುವುದಕ್ಕೆ ಸಿದ್ಧರಿಲ್ಲ. ತಮ್ಮ ತತ್ವಗಳನ್ನು ಶಾಂತಿಯುತವಾಗಿ ಪ್ರಚಾರ ಮಾಡುವ ಬದಲಾಗಿ ಬೆದರಿಕೆ ಮತ್ತು ಭಯೋತ್ಪಾದನೆಯ ಮೂಲಕ ಹರಡಲು ಯತ್ನಿಸುತ್ತಿದ್ದಾರೆ. ಈ ಅಪಾಯದ ಬಗ್ಗೆ ಜಗತ್ತು ಎಚ್ಚೆತ್ತುಕೊಂಡಿದೆ. ಭಯೋತ್ಪಾದನೆಯ ಬಗ್ಗೆ ನಿರ್ಲಕ್ಷ್ಯ ತಳೆಯುವ ಮೂಲಕ ನಾವೆಂಥ ಘೋರ ಅಪರಾಧವೆಸಗಿದೆವು ಎಂದು ಜಗತ್ತಿನ ರಾಷ್ಟ್ರಗಳು ಅರ್ಥಮಾಡಿಕೊಳ್ಳಲಾರಂಭಿಸಿವೆ. ಈಗ ಎಚ್ಚೆತ್ತು ಸಂಘಟಿತರಾಗುತ್ತಿವೆ.





ಭಯೋತ್ಪಾದನೆ ವಿರುದ್ಧ ಅಂತಾರಾಷ್ಟ್ರೀಯ ಮಟ್ಟದಲ್ಲಿ ಸರ್ವಾನುಮತ ರೂಪಿಸಲು ಯತ್ನಿಸಲಾಗುತ್ತಿದೆ.

ಆದರೆ ನಾವು ಅವರಿಗೆ ನಮ್ಮ ಅನುಭವವನ್ನು ಹೇಳುತ್ತಿದ್ದೇವೆ. ನಮ್ಮ ದೇಶದಲ್ಲಿ ನಾವೆಂದೂ ಅನ್ಯ ಧರ್ಮೀಯರನ್ನು ಬಲಾತ್ಕಾರಪಡಿಸಿಲ್ಲ. ನಾವು ಅಥವಾ ಅವರು ಎಂಬ ತಾರತಮ್ಯವನ್ನೂ ಮಾಡಿಲ್ಲ. ನಾವು ಪೂಜಿಸುವ ವಿಧಾನ ಬೇರೆ ಬೇರೆಯಾಗಿರಬಹುದು. ಆದರೆ ದೇವರು ಒಬ್ಬನೇ. ಈ ಕಾರಣಕ್ಕಾಗಿಯೇ ಭಾರತದ ಪ್ರತಿಷ್ಠೆ ಹೆಚ್ಚಾಗುತ್ತಿದೆ".

ಈ ಭಾಷಣದಲ್ಲಿ ವಾಜಪೇಯಿ ಯಾವ ಕಡೆಯೂ ಗೋಧ್ರಾದ ಬಗ್ಗೆ ನಿರ್ದಿಷ್ಟವಾಗಿ ಉಲ್ಲೇಖಿಸಲಿಲ್ಲ. ಆದರೆ ರಾಜಧರ್ಮವೇನೆಂಬುದನ್ನು ವಿವರಿಸಿದರು. ಮೋದಿ ಅದನ್ನು ಪಾಲಿಸಿದರು.

### ಗಿಲ್ ಬಂದರು ಗುಜರಾತ್‌ಗೆ:

2002, ಮಾರ್ಚ್ ಹಾಗೂ ಏಪ್ರಿಲ್ ತಿಂಗಳಿನವರೆಗೂ ಉದ್ವಿಗ್ನಗೊಂಡಿದ್ದ ಪರಿಸ್ಥಿತಿಯನ್ನು ಕೊನೆಗೂ ನಿಯಂತ್ರಣಕ್ಕೆ ತರಲಾಯಿತು. ಪಂಜಾಬ್‌ನಲ್ಲಿ ಭಯೋತ್ಪಾದನೆಯನ್ನು ಹತ್ತಿಕ್ಕಿದ್ದ ಕೆ.ಪಿ.ಎಸ್. *ಗಿಲ್* ಅವರನ್ನು ಗುಜರಾತ್ ಮುಖ್ಯಮಂತ್ರಿಯವರ ಭದ್ರತಾ ಸಲಹೆಗಾರರನ್ನಾಗಿ ನೇಮಕ ಮಾಡಲಾಯಿತು. ಸ್ವತಃ ಮೋದಿಯವರೇ *ಗಿಲ್*‌ಗೆ ಮನವಿ ಮಾಡಿಕೊಂಡರು. 2002, ಮೇ 2ರಂದು ಅಧಿಕೃತವಾಗಿ ಜವಾಬ್ದಾರಿ ವಹಿಸಿಕೊಂಡ *ಗಿಲ್* ಕೂಡಲೇ ಕಾರ್ಯಪ್ರವೃತ್ತರಾದರು. ಕಾನೂನು ಮತ್ತು ಸುವ್ಯವಸ್ಥೆಯ ಸಮಸ್ಯೆಯಂತಹ ಸಂಕೀರ್ಣ ಪರಿಸ್ಥಿತಿಯನ್ನು ನಿಭಾಯಿಸಿ ಅನುಭವ ಇದ್ದ ಗಿಲ್ ಮುಖ್ಯಮಂತ್ರಿ ಕಚೇರಿ, ಗೃಹ ಸಚಿವಾಲಯ ಹಾಗೂ ರಾಜ್ಯ ಪೊಲೀಸ್ ಇಲಾಖೆಯ ಜತೆಗೂಡಿ ಕೋಮು ಹಿಂಸಾಚಾರವನ್ನು ಹತ್ತಿಕ್ಕಲು ಯೋಜನೆಯನ್ನು ರೂಪಿಸಿದರು.

"ಕೋಮು ಹಿಂಸಾಚಾರಕ್ಕೆ ತೆರೆ ಬಿದ್ದಿದೆ. ಆದರೆ ಗುಜರಾತ್‌ನಂತಹ ಸೂಕ್ಷ್ಮ ರಾಜ್ಯಗಳಲ್ಲಿ ಪರಿಸ್ಥಿತಿಯನ್ನು ನಾಜೂಕಾಗಿ ನಿಭಾಯಿಸಲು ಪೊಲೀಸರಿಗೆ ತರಬೇತಿ ನೀಡಬೇಕಾದ ಅಗತ್ಯ ಇದೆ. ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ ಮಾಡಿರುವ ಹಲವಾರು ಶಿಫಾರಸುಗಳಲ್ಲಿ ಪೊಲೀಸರಲ್ಲಿ ವೃತ್ತಿಪರತೆಯನ್ನು ತುಂಬುವುದೂ ಒಂದಾಗಿದೆ. *ಗಿಲ್* ಅತ್ಯಂತ ಗೌರವಾನ್ವಿತ ಅಧಿಕಾರಿ. ಪಾಕಿಸ್ತಾನದ ಜತೆ ಗಡಿಯನ್ನು ಹಂಚಿಕೊಂಡಿರುವ ಗುಜರಾತ್‌ನಂತಹ ರಾಜ್ಯಕ್ಕೆ *ಗಿಲ್* ಅವರ ಸಲಹೆ, ಸಹಾಯ ದೊರೆತರೆ ವ್ಯವಸ್ಥೆಯನ್ನು ಸರಿಪಡಿಸಬಹುದು" ಎಂದು ಮೋದಿ *ಗಿಲ್* ನೇಮಕವನ್ನು ಮುಕ್ತ ಮನಸ್ಸಿನಿಂದ ಸ್ವಾಗತಿಸಿದರು.

ಗಿಲ್ ಜವಾಬ್ದಾರಿ ವಹಿಸಿಕೊಂಡ ಒಂದೇ ವಾರದಲ್ಲಿ ನಗರದ ಪೊಲೀಸ್ ಆಯುಕ್ತ ಪಿ.ಸಿ. ಪಾಂಡೆಯವರನ್ನು ಗುಜರಾತ್ ಗೃಹಖಾತೆ ಜವಾಬ್ದಾರಿಯಿಂದ ಮುಕ್ತಿಗೊಳಿಸಿತು. ಅಲ್ಲದೆ ಮುಸ್ಲಿಂ ಅಧಿಕಾರಿಯೊಬ್ಬರನ್ನು ಮುಖ್ಯಮಂತ್ರಿಯವರ ಎರಡನೇ ಭದ್ರತಾ ಸಲಹೆಗಾರರನ್ನಾಗಿ ನೇಮಕ ಮಾಡಲಾಯಿತು. ಹಿಂಸಾಚಾರದಿಂದ ನೊಂದವರು ತಮ್ಮ ಮೇಲೆ ಆಕ್ರಮಣ ಮಾಡಿದವರ ಹೆಸರು ಸೂಚಿಸಿ ವೈಯಕ್ತಿಕವಾಗಿ ಎಫ್‌ಐಆರ್ ದಾಖಲಿಸಬಹುದು ಎಂದು ಮೋದಿ ಘೋಷಿಸಿದರು. ಆದರೆ ದೂರು ನೀಡಬೇಕಾದುದು ಸಂತ್ರಸ್ತರಲ್ಲ, ಪೊಲೀಸರು ಆ ಕೆಲಸ ಮಾಡಬೇಕು. ಅಷ್ಟಕ್ಕೂ 'ಸಿಪಿಸಿ'ಯ 154ನೇ ಸಂಹಿತೆಯಡಿ ಶಿಕ್ಷಾರ್ಹ ಅಪರಾಧಕ್ಕೆ ಸಂಬಂಧಪಟ್ಟಂತೆ ಆರೋಪಿಗಳನ್ನು ಪತ್ತೆ ಮಾಡಿ ಎಫ್‌ಐಆರ್ ದಾಖಲಿಸಬೇಕಾದುದು ಪೊಲೀಸರ ಕರ್ತವ್ಯ ಎಂಬ ಟೀಕೆ ಕೇಳಿಬಂತು.

"ನ್ಯಾಯಯುತವಾಗಿ ಹೇಳಬೇಕೆಂದರೆ ಸಿಪಿಸಿಯ 154ನೇ ವಿಧಿಯ ಮೇಲೆ ಸವಾರಿ ಮಾಡಲು ಅಧಿಕಾರವನ್ನು ದುರುಪಯೋಗ ಪಡಿಸಿಕೊಂಡ ಮೊದಲ ವ್ಯಕ್ತಿ ಮೋದಿಯವರೇನಲ್ಲ, ಸೋನಿಯಾ ಗಾಂಧಿಯವರ ಗಂಡ 1984ರಲ್ಲಿಯೇ ಆ ಕೆಲಸ ಮಾಡಿದ್ದರು. ಮೂರು ದಿನಗಳಲ್ಲಿ 3ಸಾವಿರ ಸಿಖ್ಖರನ್ನು ಹತ್ಯೆಗೈಯಲಾಗಿತ್ತು. ಈ ವಿಷಯದಲ್ಲಿ ಮೋದಿಯೇ ಮೇಲು. ಹಿಂಸಾಚಾರ ಪ್ರಾರಂಭವಾಗಿ 70 ದಿನಗಳೊಳಗೇ ಎಫ್‌ಐಆರ್ ದಾಖಲಿಸಲು ಮುಸ್ಲಿಮರಿಗೆ ಅವಕಾಶ ಮಾಡಿಕೊಟ್ಟರು. ಆದರೆ 1984ರಲ್ಲಿ ಸಾವು ನೋವು ಅನುಭವಿಸಿದ ಸಿಖ್ಖರು ಆರು ವರ್ಷ ಕಾಯಬೇಕಾಯಿತು. ಎಫ್‌ಐಆರ್ ದಾಖಲಿಸಲು ಸಿಖ್ಖರಿಗೆ ಅವಕಾಶ ಮಾಡಿಕೊಟ್ಟದ್ದು 1991ರಲ್ಲಿ! ಸಿಖ್ ಹತ್ಯಾಕಾಂಡದ ಬಗ್ಗೆ ಪೊಲೀಸರು ವಿಶೇಷ ತನಿಖಾದಳವನ್ನು ಆರಂಭಿಸಿ ಅಧಿಕೃತವಾಗಿ ವಿಚಾರಣೆ ಆರಂಭಿಸಿದ್ದು ಆರು ವರ್ಷಗಳಾದ ಮೇಲೆ. ಇದು 1984ರಲ್ಲಿ ದಿಲ್ಲಿಯಲ್ಲಿ ನಡೆದ ಮಹಾದುರಂತ ಹಾಗೂ ಗುಜರಾತ್ ಹಿಂಸಾಚಾರವನ್ನು ಹೋಲಿಸುವ ಪ್ರಯತ್ನವಲ್ಲ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಘಟನೆ ಹಸಿರಾಗಿರುವಾಗಲೇ ಎಫ್‌ಐಆರ್ ದಾಖಲಿಸಲು ಅವಕಾಶ ಮಾಡಿಕೊಟ್ಟರೆ ನಿಜವಾದ ಅಪರಾಧಿಗಳನ್ನು ಪತ್ತೆಹಚ್ಚಿ ಶಿಕ್ಷಿಸಬಹುದು. ಆದರೆ ರಾಜೀವ್ ಗಾಂಧಿಯವರ ಸರಕಾರ ಎಫ್‌ಐಆರ್ ದಾಖಲಿಸಲು ಅವಕಾಶವನ್ನೇ ನೀಡಲಿಲ್ಲ, ಆರು ವರ್ಷಗಳ ನಂತರ ಅಂತಹ ಅವಕಾಶ ದೊರೆತರೂ ಸಾಕ್ಷಿಗಳೇ ಇಲ್ಲವಾಗಿದ್ದವು". ಹಾಗಂತ ಮನೋಜ್ ಮಿತ್ತಲ್ ಎಂಬ ಟೀಕಾಕಾರರೇ ಇಂಡಿಯನ್ ಎಕ್ಸ್‌ಪ್ರೆಸ್‌ನಲ್ಲಿ ಮೋದಿಯವರ ಬಗ್ಗೆ ಒಂದಿಷ್ಟು ಮೆಚ್ಚುಗೆಯ ಮಾತನ್ನಾಡಿದರು.

ಒಂದು ವೇಳೆ ಮೋದಿಯವರಿಗೆ ಮುಸ್ಲಿಮರ ಬಗ್ಗೆ ಟೀಕಾಕಾರರು ಆರೋಪಿಸುತ್ತಿರುವಂತೆ





ಕಟ್ಟಾ ದ್ವೇಷವಿದ್ದಿದ್ದರೆ 70 ದಿನಗಳೊಳಗೆ ಎಫ್‌ಐಆರ್ ದಾಖಲಿಸಲು ಅವಕಾಶ ಮಾಡಿ ಕೊಡುತ್ತಿದ್ದರೆ?!

# 28

## ಮೋದಿಯೆಂದರೆ ಮೋಡಿ ನೀವು ಒಪ್ಪಿ ಬಿಡಿ!

ನರೇಂದ್ರ ಮೋದಿ ಎಂದೊಡನೆಯೇ ಮುಖ ಕಿವುಚುತ್ತದೆ ಇಂಗ್ಲಿಷ್ ಮಾಧ್ಯಮಲೋಕ. ಅವುಗಳ ಪಾಲಿಗೆ ಮೋದಿ ಸಾಕ್ಷಾತ್ ಸೈತಾನ. ಅಂತಹವರಿಂದಲೂ ಮೋದಿಗೆ ಶಹಭಾಷ್‌ಗಿರಿಗಳು ಸಂದಿವೆ. ಮೋದಿಯನ್ನು ಇಷ್ಟಪಡುತ್ತೇವೊ ಬಿಡುತ್ತೇವೋ ಅದು ಬೇರೆ ಮಾತು. ಆದರೆ ಅವರ ಸಾಮರ್ಥ್ಯ ಮಾತ್ರ ಎಂಥವರೂ ತಲೆದೂಗುವಂತದ್ದು ಎಂಬ ಅಂಶವನ್ನು ಎಲ್ಲರೂ ಒಪ್ಪಿಕೊಂಡಂತಿದೆ. 'ಟೈಮ್ಸ್ ಆಫ್ ಇಂಡಿಯಾ'ದ ಪ್ರಖ್ಯಾತ ಅಂಕಣಕಾರ ಸ್ವಾಮಿನಾಥನ್ ಐಯ್ಯರ್ ಅಂಕ್ಲೆಸರಿಯಾ ಹಾಗೊಂದು ವಸ್ತುನಿಷ್ಠ ವಿಶ್ಲೇಷಣೆ ಮಂಡಿಸಿದ್ದರು.

ನರೇಂದ್ರ ಮೋದಿ: ಮುಂದಿನ ಪ್ರಧಾನಿಯೇ?

ಇಂತಹ ಒಂದು ತಲೆಬರಹದಡಿ ಅವರು ಡಿಸೆಂಬರ್ 2002ರಲ್ಲಿ ಲೇಖನವೊಂದನ್ನು ಬರೆದಿದ್ದರು. 'ಮಾಧ್ಯಮಗಳ ಎಲ್ಲಾ ತೆರನಾದ ಟೀಕೆಗಳನ್ನೂ ಮೀರಿ ನರೇಂದ್ರ ಮೋದಿ ಗುಜರಾತಿನಲ್ಲಿ ಅಭೂತಪೂರ್ವ ಜಯ ಸಾಧಿಸಿದ್ದಾರೆ. ಬಹಳಷ್ಟು ಪತ್ರಕರ್ತರು ತಮ್ಮ ಲೆಕ್ಕಾಚಾರ ಈ ಸಾರಿ ಅದೇಕೆ ತಪ್ಪಾಯಿತೆಂದೂ, ಮುಂದಿನ ಸಾರಿ ಅಪ್ಪಿತಪ್ಪಿಯೂ ಮೋದಿ ಗೆಲ್ಲಲಾರರೆಂದು ವಿವರಣೆಗಿಳಿದರು. ನಾನು ಬೇರೆಯದೇ ದೃಷ್ಟಿಕೋನದಿಂದ ನೋಡುತ್ತೇನೆ. ನನಗನಿಸುವ ಮಟ್ಟಿಗೆ ನರೇಂದ್ರಮೋದಿ ಭಾರತದ ಭವಿಷ್ಯದ ಪ್ರಧಾನಿ. ಈ ಬೆಳವಣಿಗೆ ನನಗೆ ಖುಷಿ ಕೊಡುತ್ತದೆಯೇ ಅನ್ನುವುದು ಬೇರೆ ಮಾತು. ಆದರೆ ವಿಶ್ಲೇಷಣೆಗಳನ್ನು ವೈಯಕ್ತಿಕ ಖುಷಿಯ ನೆಲೆಗಟ್ಟಿನಲ್ಲಿ ಮಾಡಲಾಗುವುದಿಲ್ಲ. ಪ್ರಾದೇಶಿಕ ಮಟ್ಟವನ್ನು ಮೀರಿ ಬೆಳೆದ, ಜನಪ್ರಿಯತೆಯನ್ನೂ ಬಗಲಲ್ಲಿರಿಸಿಕೊಂಡ ತರುಣ ರಾಜಕಾರಣಿಯೊಬ್ಬನನ್ನು ತೋರಿಸಿ ನೋಡೋಣ? ಊಹುಂ. ಬಿಜೆಪಿಯಲ್ಲಾಗಲಿ, ಅದರ ಹೊರಗಾಗಲಿ ಹಾಗೊಂದು ಭರವಸೆಯ ಮುಖವೇ ಕಾಣುತ್ತಿಲ್ಲ. ಅಟಲ್ ಬಿಹಾರಿ ವಾಜಪೇಯಿ ಅವರಂತಹವರಿಗೆ

ಆರೋಗ್ಯದ ಸಮಸ್ಯೆ. ಅಡ್ವಾಣಿ ವಿಷಯದಲ್ಲೂ ಅನುಮಾನ ಕಾಡುತ್ತಿದೆ. ಆದರೆ 52ರ ಹೊಸ್ತಿಲಿನಲ್ಲಿರುವ ಒಬ್ಬ ನರೇಂದ್ರ ಮೋದಿಗೆ ಮಾತ್ರ ಕೆಲ ದಶಕಗಳೇ ಅವಕಾಶಗಳಾಗಿ ಅವರ ಮುಂದೆ ಮೈಚಾಚಿ ಮಲಗಿವೆ. ಗುಜರಾತಿನ ವಿಜಯ ನರೇಂದ್ರಮೋದಿಯವರಿಗೆ ಪಕ್ಷದಲ್ಲಿ ಸ್ಟಾರ್‌ಗಿರಿಯನ್ನು ತಂದುಕೊಟ್ಟಿದೆ. ಮುರಳಿ ಮನೋಹರ ಜೋಷಿಯಂತಹ ವಯೋವೃದ್ಧರನ್ನು ಸುಲಭವಾಗಿಯೇ ಹಿಂದಿಕ್ಕುವಲ್ಲಿ ಮೋದಿ ಯಶಸ್ವಿಯಾಗಿದ್ದಾರೆ. ಸರಕಾರ ರಚಿಸುವ ನಿಟ್ಟಿನಲ್ಲಿ ಇತರ ಪಕ್ಷಗಳ ಸಹಾಯ ತೆಗೆದುಕೊಂಡ ಭೈರೋನ್ ಸಿಂಗ್ ಶೇಖಾವತ್ ಅವರಂತಹವರೂ ಇವರ ಪ್ರತಿಸ್ಪರ್ಧಿಯಾಗಿರಲು ಸಾಧ್ಯವಿಲ್ಲ. ಸ್ವಂತ ಬಹುಮತದ ಬಲದಿಂದ ಅಧಿಕಾರ ಹಿಡಿದಿರುವ ಮೋದಿಯನ್ನು ನೀವು ದ್ವೇಷಿಸಬಹುದು. ಆದರೆ ಅವರ ವೋಟು ಗಳಿಕೆಯ ಶಕ್ತಿಯನ್ನು ನಿರಾಕರಿಸಲು ಆಗುವುದೇ ಇಲ್ಲ.'

ಇದರೊಂದಿಗೆ ಬಿಜೆಪಿ ಬೆಳವಣಿಗೆಗೆ ಸಹಕಾರಿಯಾಗಿರುವ ಅಂಶಗಳನ್ನೂ ಅಯ್ಯರ್ ವಿಶ್ಲೇಷಿಸುತ್ತಾರೆ.

ಜಿಹಾದಿ ಉಗ್ರವಾದ ಅಟ್ಟಹಾಸಗೈಯುತ್ತಿರುವ ಸಂದರ್ಭದಲ್ಲಿ ಬಿಜೆಪಿಗೆ "ಕಮ್ಯುನಲ್" ಆಗಿರಬೇಕಾದ ಅವಶ್ಯಕತೆಯೇ ಇಲ್ಲ. ಕಾರ್ಗಿಲ್ ಮೇಲೆ ಪಾಕಿಸ್ತಾನದ ಆಕ್ರಮಣ ಹೇಗೆ ವಾಜಪೇಯಿ ಸರಕಾರಕ್ಕೆ ಓಟುಗಳನ್ನು ತಂದುಕೊಟ್ಟಿತೋ ಅದೇ ರೀತಿಯಲ್ಲಿ ಅಕ್ಷರಧಾಮದಲ್ಲಿ ನಡೆದ ಭಯೋತ್ಪಾದನಾ ಪ್ರಕರಣವೂ ಮೋದಿಗೆ ನೆರವಾಯಿತು ಅನ್ನುವುದು ಅಯ್ಯರ್ ಅಂಬೋಣ.

ಎಲ್ಲರಿಗೂ ತುಂಬ ಅಚ್ಚರಿ ಹುಟ್ಟಿಸಿದ್ದು ಮುಂಬೈನ ಶಿವಾಜಿ ಪಾರ್ಕ್‌ನಲ್ಲಿ ನರೇಂದ್ರ ಮೋದಿ ಭಾಷಣ ಮಾಡಿದಾಗ ಸಿಕ್ಕಂತಹ ಪ್ರತಿಕ್ರಿಯೆ. ಶಿವಾಜಿ ಪಾರ್ಕು ಶಿವಸೇನೆಯ ತೊಟ್ಟಿಲು. ಆದರೆ 12 ಜನವರಿ 2003ರಂದು ಮೋದಿ ಅಲ್ಲಿ ಮಾತಿಗಿಳಿದಿದ್ದಾಗ ಹಿಂದೆಂದೂ ಕಾಣದ ಜನಸಾಗರವಿತ್ತು. ನೆನಪಿನ ತಿಜೋರಿಯೊಳಗೆ ಭದ್ರವಾಗಿ ಕುಳಿತುಬಿಡುವ ಕಾರ್ಯಕ್ರಮವೂ ಅದಾಗಿತ್ತು. ನರೇಂದ್ರ ಮೋದಿಯ ಹೆಲಿಕಾಪ್ಟರ್ ಭುವಿಗಿಳಿಯುತ್ತಿದ್ದಂತೆ 'ವಂದೇ ಮಾತರಂ' ಗಾನ ಇಡೀ ವಾತಾವರಣವನ್ನೇ ಆವರಿಸಿತ್ತು. ವೇದಿಕೆಯಲ್ಲಿ ಅವರು ಕಮಲದ ದಳಗಳ ನಡುವಿನಿಂದ ಎದ್ದುಬಂದಂತೆ ಪ್ರವೇಶವಾಯಿತು. ಗಾನಘೋಷಗಳು, ಪಟಾಕಿ-ಬಿರುಸುಗಳ ಸ್ವಾಗತ ಅವರ ಪಾಲಿಗೊಲಿಯಿತು. ಅವರು ನೆರೆದಿದ್ದ ಜನರೆದುರು 'ನ್ಯಾಯದಾತ', 'ಸ್ವಯಂಸೇವಕ', 'ದೃಷ್ಟಿದಾಯಿ ಪುರುಷ' ಇತ್ಯಾದಿ ಪರಿಕಲ್ಪನೆಗಳ ಮೂಲಕ ಪರಿಚಿತರಾದರು. ಮಾತಿನಲ್ಲೂ ಮೋದಿ ಎಂದಿನಂತೆ ಮಿಂಚಿದರು.

ಕಾಂಗ್ರೆಸ್ ಅಧಿನಾಯಕಿಯನ್ನು 'ಇಟಲಿ ಕೀ ಬೇಟಿ' ಅಂತ ಕಿಚಾಯಿಸಿದರು, 'ಮಿಯಾ'





ಮುಷರ್ರಫ್ ಅಂತ ಸಂಬೋಧಿಸಿದರು. ಇನ್ನೇನು ಆ ಅಸಾಮಿಗೆ ಆದರಣೀಯ ಮಾನನೀಯ ಮುಷರ್ರಫ್ ಅಂತ ಕರೆಯಬೇಕೆ? ಅಂತ ಅಲ್ಲೇ ಒಂದು ಒಗ್ಗರಣೆ. ಜಗತ್ತಿನ ಉಳಿದೆಲ್ಲ ನಾಗರಿಕತೆಗಳಿಗೆ ಉಸಿರುಕಟ್ಟುತ್ತಿದ್ದರೆ ಭಾರತದ ಸಾವಿರ ವರ್ಷಗಳ ನಾಗರಿಕತೆ ಉಳಿದುಕೊಂಡಿರಲು 'ಹಿಂದುತ್ವ'ವೇ ಕಾರಣ ಅಂತ ಗರ್ಜಿಸಿದರು. ಅದು ಜನರನ್ನು ಮರಳು ಮಾಡುವ ಭಾಷಣವೇ ಆಗಿರಬಹುದು; ಆದರೆ ಮಹಾರಾಷ್ಟ್ರದ ಜನರಿಂದ ಚಪ್ಪಾಳೆ ಗಿಟ್ಟಿಸುವುದಿದೆಯಲ್ಲ, ಅದು ಸುಲಭದ ಮಾತಲ್ಲ. 'ಅಕ್ಷರಧಾಮದಲ್ಲಿ ಅಸುನೀಗಿದ ಆ ಪುಟ್ಟಬಾಲೆಯ ಸಾವಿಗೆ ಮುಷರ್ರಫ್ ಕಾರಣ. ಆ ಬಾಲೆ ದುರ್ಗಾಮಾತೆಯಾಗಿ ಅವತರಿಸಿ ಅಕ್ಷರಧಾಮದಲ್ಲಿ ಚೆಲ್ಲಲ್ಪಟ್ಟ ಪ್ರತಿ ರಕ್ತದ ಹನಿಯ ಲೆಕ್ಕಾಚಾರವನ್ನೂ ಚುಕ್ತಾ ಮಾಡುತ್ತಾಳೆ' ಹಾಗಂತ ಮೋದಿ ಆವೇಶಭರಿತರಾಗಿ ಮಾತನಾಡುತ್ತಿದ್ದರೆ ಮಹಾರಾಷ್ಟ್ರದ ಜನತೆ ಮೈಮರೆತು ಚಪ್ಪಾಳೆ ತಟ್ಟುತ್ತಿದ್ದರು!

ಹಾಗೆ ಮಾತನಾಡುತ್ತಲೇ ಅಭಿವೃದ್ಧಿಯತ್ತ ಹೊರಳಿದರು ಮೋದಿ.

'ಕಾಂಗ್ರೆಸ್ ನಾಯಕರು ಸರ್ದಾರ್ ಪಟೇಲರ ಕುರಿತು ಅದೆಷ್ಟು ಪೂರ್ವಗ್ರಹ ಪೀಡಿತರಾಗಿದ್ದಾರೆ ಎಂಬುದನ್ನು ಗಮನಿಸಿ. ಪಟೇಲರು ತೀರಿಕೊಂಡಾಗಿನಿಂದ ಒಬ್ಬನೇ ಒಬ್ಬ ನೆಹರು ಕುಟುಂಬದ ಸದಸ್ಯನೂ ಈವರೆಗೆ ಅವರ ಜನ್ಮಸ್ಥಳಕ್ಕೆ ಭೇಟಿಯಿತ್ತಿಲ್ಲ. 50 ವರ್ಷಗಳ ಕಾಲ ಕಾಂಗ್ರೆಸ್ಸು ಸರ್ದಾರ್ ಪಟೇಲರನ್ನು ಮರೆತೇ ಬಿಟ್ಟಿತ್ತು. ಆದರೆ ಚುನಾವಣೆ ಸಮಯದಲ್ಲಿ ಅವರು ನೆನಪಾಗುತ್ತಾರೆ. ಕಾಂಗ್ರೆಸ್ಸಿನ ಗೌರವ ಯಾತ್ರಾ ಕಾರ್ಯಕ್ರಮದ ಪಾಂಫ್ಲೆಟ್‌ನಲ್ಲಿ ಮಾತ್ರ ಸರ್ದಾರ್ ಚಿತ್ರಗಳು ವಿಜೃಂಭಿಸುತ್ತಿದ್ದವು. ರಾಜೀವ್ ಗಾಂಧಿಗೆ ಭಾರತರತ್ನ ಕೊಡಮಾಡಿದರು. ಆದಾಗಿ ಬರೋಬ್ಬರಿ ಒಂಬತ್ತು ವರ್ಷಗಳೇ ಬೇಕಾಯಿತು ಸರ್ದಾರ್ ಪಟೇಲರಿಗೆ ಆ ಗೌರವ ಸಿಗಲು. ಅಷ್ಟೇ ಅಲ್ಲ, ಅದಕ್ಕೋಸ್ಕರ ಹೋರಾಡಬೇಕಾದ ಪರಿಸ್ಥಿತಿ ಬಂತು ನಮಗೆ!'

'ನಮಗೆ ಆಧುನೀಕರಣ ಬೇಕು. ಹಾಗಂತ ಅದಕ್ಕೋಸ್ಕರ ಪಾಶ್ಚಾತ್ಯೀಕರಣ ಆಗಬೇಕಿಲ್ಲ. ತಂತ್ರಜ್ಞಾನವನ್ನು ಹಳ್ಳಿಗಳಿಗೆ ಕೊಂಡೊಯ್ಯುವ ಅಭಿಲಾಷೆ ನನ್ನದು. ನೀರಾವರಿ ಜಾಲವನ್ನು ಹಳ್ಳಿಗಳಿಗೆ ವಿಸ್ತರಿಸಿದ ಮೊದಲ ರಾಜ್ಯವೆಂಬ ಖ್ಯಾತಿ ಗುಜರಾತಿನದು. 500 ದಿನಗಳಲ್ಲಿ 700 ಕಿ.ಮೀ. ಪೈಪ್‌ಗಳನ್ನೆಳೆದು ಸಾಬರ್‌ಮತಿ, ಕಛ್ ಹಾಗೂ ಕಾಥೇವಾಡಗಳಿಗೆ ನರ್ಮದೆಯ ನೀರುಣಿಸಿದವರು ನಾವು. ಈ ದಿನ 12 ಜನವರಿ ತಾಯಿ ಜೀಜಾಮಾತೆ ಹಾಗೂ ವಿವೇಕಾನಂದರು ಹುಟ್ಟಿದ ದಿನ. ಆ ದಿವ್ಯ ಚೇತನಗಳಿಗೆ ನಾನು ತಲೆಬಾಗುತ್ತೇನೆ.'

ಮೋದಿ ವಾಗ್ಝರಿಗೆ ಚಪ್ಪಾಳೆಗಳ ಸುರಿಮಳೆ.





# 29
# ಗಾದಿ ಮೇಲೆ ಮೋದಿ

ಅವತ್ತು ಡಿಸೆಂಬರ್ 22, 2002. ಸರ್ದಾರ್ ಪಟೇಲ್ ಸಭಾಂಗಣದಲ್ಲಿ ಹಿಂದೆಂದೂ ಕಾಣದ ಜನಜಂಗುಳಿಯಿತ್ತು. ರಾಜ್ಯಪಾಲ ಸುಂದರ್ ಸಿಂಗ್ ಭಂಡಾರಿ ಮೋದಿಯವರಿಗೆ ಪ್ರಮಾಣವಚನ ಬೋಧಿಸಿದರು. ಮೋದಿ ಮುಖ್ಯಮಂತ್ರಿಯಾಗಿ ಕಂಗೊಳಿಸುತ್ತಿದ್ದರು. ಬಿಜೆಪಿಯ ಪಾಲಿಗೆ ಅದು ಅದರ ಹೆಮ್ಮೆ, ಆತ್ಮಗೌರವಗಳು ಪುನರ್‌ಸ್ಥಾಪಿತವಾದ ದಿನ. ಪ್ರಧಾನಿ ವಾಜಪೇಯಿ, ಉಪಪ್ರಧಾನಿ ಆಡ್ವಾಣಿ, ಪಕ್ಷದ ಅಧ್ಯಕ್ಷ ರಾಜನಾಥ್ ಸಿಂಗ್, ಜಾರ್ಜ್ ಫರ್ನಾಂಡಿಸ್, ತಮಿಳುನಾಡಿನ ಮುಖ್ಯಮಂತ್ರಿ ಜಯಲಲಿತಾ ಹಾಗೂ ಆರೆಸ್ಸೆಸ್ ಮುಖಂಡರು ವೇದಿಕೆಯಲ್ಲಿ ಸಾಲಾಗಿ ಕುಳಿತಿದ್ದರು. ಮೋದಿ ಮ್ಯಾಜಿಕ್‌ನ ಕುರಿತು 'ಇಂಡಿಯಾ ಟುಡೆ' ಮುಖಪುಟ ಲೇಖನ ಪ್ರಕಟಿಸಿತು. ಅದನ್ನು ಸ್ವಪನ್ ದಾಸ್ ಗುಪ್ತಾ ಬರೆದಿದ್ದರು.

ಅದರಲ್ಲಿ ಚುನಾವಣೆಗೆ ನಾಲ್ಕು ದಿನ ಮುಂಚೆ ನಡೆದ ಮೋದಿಯ ಪ್ರಚಾರ ಸಭೆಯೊಂದನ್ನು ನೆನಪಿಸಿಕೊಳ್ಳುತ್ತಾರೆ.

ಅದು ಅಹಮದಾಬಾದಿನಲ್ಲಿ ನಡೆದ ಸಾವಿರ ಜನರ ಸಭೆ. ಅದರಲ್ಲಿದ್ದವರೆಲ್ಲ ವೈದ್ಯಕೀಯ ವೃತ್ತಿಗೆ ಸೇರಿದ್ದ ನಗರವಾಸಿಗಳು. ಗಂಡಸರು, ಮಧ್ಯವಯಸ್ಕರು ಎಲ್ಲರನ್ನೂ ಒಳಗೊಂಡಿದ್ದ ಆ ಸಮೂಹ ಮುಖ್ಯವಾಗಿ ಮಧ್ಯಮವರ್ಗವನ್ನು ಪ್ರತಿನಿಧಿಸುವಂತದ್ದಾಗಿತ್ತು. ಸಾಮಾನ್ಯ ಜನರೆದುರು ಮಾತನಾಡಿದಂತೆ ಅವರೆದುರು ಮಾತನಾಡುವುದು ಸರಿಯಾಗಲಾರದೆಂದು ಮೋದಿ ಹೊಸ ಹಾದಿ ಹಿಡಿಯಲು ಯೋಚಿಸಿದರು. ಆ ಚುನಾವಣೆಯಲ್ಲಿ ಅವರಿಗೆ ಹೇಳಲು ಅವಕಾಶವೇ ಸಿಗದಿದ್ದ ಅಭಿವೃದ್ಧಿ ಶಿಕ್ಷಣ ಹಾಗೂ ಕೈಗಾರೀಕರಣಗಳ ಕುರಿತು ಅವರು ಮಾತನಾಡಹೊರಟರು. 'ಬೇಡ, ಬೇಡ. ಇದೆಲ್ಲ ಬೇಡ. ನೀವು ಮುಷರ್ರಫ್ ಬಗ್ಗೆ

ಮಾತನಾಡಿ!'–ಇದು ಸಭಿಕರಿಂದ ಆ ಕ್ಷಣಕ್ಕೆ ಬಂದ ಪ್ರತಿಕ್ರಿಯೆ! ಗುಂಪಿನಿಂದ ತೂರಿ ಬಂದ ಆ ಬೇಡಿಕೆಗೆ ಚಪ್ಪಾಳೆಗಳ ಭರ್ಜರಿ ಸ್ವಾಗತ ಸಿಕ್ಕಿತು. ಅದನ್ನು ಲೇಖಿಸುತ್ತಾ ದಾಸ್‌ಗುಪ್ತಾ ಬರೆಯುತ್ತಾರೆ–'ಅಹಮದಾಬಾದಿನ ವೈದ್ಯವೃಂದದ ನಡೆ ಇದು ಅಭಿವೃದ್ಧಿ ಅಥವಾ ಭರವಸೆಗಳ ವರಸೆಯ ಚುನಾವಣೆ ಅಲ್ಲವೇ ಅಲ್ಲ ಅನ್ನೋದನ್ನು ಸ್ಪಷ್ಟಪಡಿಸುವಂತಿತ್ತು. ಅದು ಭಾವನೆಗಳಿಂದಲೇ ನಿರ್ದೇಶಿತವಾಗಿದ್ದ ಮತ್ತೆ ಅಧಿಕಾರ ಹಿಡಿಯುವ ಯುದ್ಧವಾಗಿತ್ತು. ಆ ಸಂಜೆ ಮೋದಿ ಅಷ್ಟಾಗಿ ಏನೂ ವಿಜೃಂಭಿಸಲಿಲ್ಲ, ಆದರೆ ಪ್ರತಿ ಮೀಟಿಂಗ್ ನಂತರವೂ ಮೋದಿಯ ಜನಪ್ರಿಯತೆ ಆಗಸದತ್ತ ಚಿಮ್ಮುತ್ತಿತ್ತು. ಭೂತಾರಾಧನೆಗೂ, ವ್ಯಕ್ತಿಪೂಜೆಗೂ ಕೊಂಡಿ ಹಾಕಿದಂತಿತ್ತು ಮೋದಿ ಯಶಸ್ಸು. ಅಂತಾರಾಷ್ಟ್ರೀಯ ಮಟ್ಟದಲ್ಲಿ ಆತನ ಕುರಿತಾದ ದ್ವೇಷ ಹೆಚ್ಚಿದಷ್ಟೂ ಇತ್ತ ಗುಜರಾತಿನಲ್ಲಿ ಆತನ ಜನಪ್ರಿಯತೆ ಲೆಕ್ಕತಪ್ಪಿ ಜಿಗಿದಾಡುತ್ತಿತ್ತು. ಡಿಸೆಂಬರ್ ಹದಿನೈದಕ್ಕೆ ಯಾವಾಗ ಬಿಜೆಪಿಗೆ ಭಾರಿ ಬಹುಮತ ಒಲಿಯಿತೋ ಆ ಕ್ಷಣದಿಂದಲೇ ಮೋದಿ ಆರಾಧನೆಯ ಮೂರ್ತಿಯಾಗಿಬಿಟ್ಟರು. ಮೋದಿ ವ್ಯಕ್ತಿತ್ವ ಒಬ್ಬ ಉಗ್ರ ಹಿಂದೂ ರಾಷ್ಟ್ರೀಯವಾದಿಯಿಂದ ಆದರ್ಶಮಯ ವ್ಯಕ್ತಿಯಾಗಿ ಗುಜರಾತಿನಾಚೆಗೂ ವ್ಯಾಪಿಸಿತು.'

ಸ್ವಪನ್ ದಾಸ್‌ಗುಪ್ತಾ ಪ್ರಕಾರ ಮೋದಿ ವಿಜಯ ಹಿಂದುತ್ವದ ಗೆಲುವು ಎಂದುಬಿಟ್ಟರೆ ಏನೂ ಹೇಳಿದಂತಾಗುವುದಿಲ್ಲ.

ಭಯೋತ್ಪಾದನೆಯನ್ನು ವಿರೋಧಿಸುವುದರಲ್ಲಿ ಹಿಂದು ಐಕ್ಯತೆ ದೊಡ್ಡಮಟ್ಟದಲ್ಲಿ ಕೆಲಸ ಮಾಡಿತ್ತು. ಹಾಗೆಯೇ ಗೋಧ್ರಾದಲ್ಲಿ ಬಲಿಯಾದವರ ಕುರಿತಾದ ಅನುಕಂಪವೂ ಅದರಲ್ಲಿತ್ತು. ಇದನ್ನು ತಳ್ಳಿ ಹಾಕಲು ಆಗುವುದೇ ಇಲ್ಲ. ಅಲ್ಲದೇ ಇಂದಿರಾ ಗಾಂಧಿ ವಿಷಯದಲ್ಲಿ ಒಮ್ಮೆ ನಿರೂಪಿಸಲ್ಪಟ್ಟಿದ್ದ ದೃಢ ನಾಯಕತ್ವಕ್ಕೆ ಯಶ ಸಿಗುವುದೆಂಬ ಅಂಶವನ್ನು ಮೋದಿ ಇನ್ನೊಮ್ಮೆ ದೃಢೀಕರಿಸಿದರು. ದಾಸ್‌ಗುಪ್ತಾ ತುಂಬ ಸ್ಪಷ್ಟವಾಗಿ ಉಲ್ಲೇಖಿಸುವುದೇನೆಂದರೆ –'ಪಕ್ಕಾ ಸೈದ್ಧಾಂತಿಕ ತಳಹದಿಯ ಮೇಲೆ ಸೆಣಸಲ್ಪಟ್ಟ ಏಕಮೇವ ಚುನಾವಣೆ ಇದಾಗಿತ್ತು. ನಾಯಕತ್ವವೇ ಇಲ್ಲಿನ ನಿಜವಾದ ಇಶ್ಯೂ. ಈ ವಿಷಯದಲ್ಲಿ ಮೋದಿಗೆ ಪ್ರತಿಸ್ಪರ್ಧಿಗಳೇ ಇರಲಿಲ್ಲ. ಪಕ್ಷದ ಇಬ್ಬರು ಮಹಾನ್ ನಾಯಕರಾದ ವಾಜಪೇಯಿ ಹಾಗೂ ಎಲ್.ಕೆ. ಅಡ್ವಾಣಿ ಇವರುಗಳ ಹೆಸರೇ ಪ್ರಸ್ತಾಪವಾಗಲಿಲ್ಲ. ಇನ್ನು ಮೋದಿ ಎದುರಾಳಿಯಾಗಿದ್ದ ಕಾಂಗ್ರೆಸ್‌ನ ಶಂಕರ್‌ಸಿನ್ಹ ವಾಘೇಲಾ ಅವರಂತೂ ಜಾತಿ ನಾಯಕ ಎಂಬಷ್ಟಕ್ಕೇ ಸೀಮಿತರಾಗಿಬಿಟ್ಟರು. ಸೋನಿಯಾ ಗಾಂಧಿ ಹೊರಗಿನವರಾಗಿಯೇ ಉಳಿದುಹೋದರು.'

ಮೋದಿ ವಿಜಯ ಹೇಗೆ ಒಂದು ವೈಯಕ್ತಿಕ ವಿಕ್ರಮವಾಗಿತ್ತೋ ಅದೇ ವೇಳೆಗದು





ಗುಜರಾತಿಗಳ ವಿರೋಧದ ಸ್ಪಷ್ಟ ದಾಖಲಾತಿಯೂ ಆಗಿತ್ತು. ಆಂಗ್ಲ ಮಾಧ್ಯಮಗಳು ಅವರನ್ನು ವ್ಯತಿರಿಕ್ತವಾಗಿ ಚಿತ್ರಿಸಿದ್ದಕ್ಕೆ ಕೊಟ್ಟ ದಿಟ್ಟ ಉತ್ತರವಾಗಿತ್ತದು. ಸ್ವಪನ್‌ದಾಸ್ ಗುಪ್ತಾ ಆ ಬಗ್ಗೆ ಬರೆಯುವುದನ್ನೂ ಮರೆಯುವುದಿಲ್ಲ. 'ಗುಜರಾತಿನಲ್ಲಿ ಎದ್ದ ಮೋದಿ ಮೇನಿಯಾ ವಾಸ್ತವದಲ್ಲಿ ಜನರ ಧಿಕ್ಕಾರದ ಕೋರಸ್. ಸಾಮಾನ್ಯ ಗುಜರಾತಿಯೊಬ್ಬ ವಿನಾಕಾರಣವಾಗಿ ಮಾಧ್ಯಮಗಳಿಂದ ಅತ್ಯಾಚಾರಿ, ಕೊಲೆಗಡುಕ ಎಂದೆಲ್ಲ ಕರೆಸಿಕೊಂಡು ಅವಮಾನಿತನಾಗಿ ಎದೆಗೂಡಿನೊಳಗೆ ಕ್ರೋಧವನ್ನಿಟ್ಟುಕೊಂಡು ಬಿಗಿಯಾಗಿದ್ದ. ಹಾಗೊಂದು ಕ್ರೋಧಕ್ಕೆ ಕಾನೂನಿನ ಮೊಹರು ಇಲ್ಲದಿರಬಹುದು. ಆದರದು ಕುದಿಯುತ್ತಿದ್ದುದು ಕಟು ವಾಸ್ತವ'. ಅದನ್ನು ಸ್ವಪನ್ ದಾಸ್‌ಗುಪ್ತಾ ವಿವರಿಸುತ್ತಾರೆ– 'ಶಬ್ದಗಳ ಸಮರ ಗೆಲ್ಲಲು ತಹತಹಿಸುತ್ತಿದ್ದ ಸೆಕ್ಯುಲರ್ ಇಂಡಿಯಾ, ಆವೇಶ ಹೊತ್ತಿದ್ದ ಗುಜರಾತಿಗಳನ್ನು ಗಮನಿಸದೇ ಮುನ್ನಡೆಯಿತು. ಅವರು ಮೋದಿಯಲ್ಲೊಬ್ಬ ಶುದ್ಧ ಬಂಡಾಯಗಾರನನ್ನು ಕಂಡುಕೊಂಡರು. ಮೋದಿ ಸಹ ವರ್ಗ ಸಂಘರ್ಷದ ವಿರುದ್ಧ ಸೆಣಸುತ್ತಿದ್ದ, ಗುಜರಾತಿನಲ್ಲಿ ಸಂಭವಿಸಿದ್ದು ವಿಸ್ಫೋಟಿಸಲೆಂದೇ ಕಾಯ್ದು ಕುಳಿತಿದ್ದ ಒಂದು ಸ್ಫೋಟವಷ್ಟೇ'.

ಗುಜರಾತಿನಲ್ಲಿ ಆಗಿದ್ದು ಹಿಂದುತ್ವದ 'ರೀ ಪ್ಯಾಕೇಜ್' ಅಂತ 'ಇಂಡಿಯಾ ಟುಡೆ'ಯ ಅದೇ ಸಂಚಿಕೆಯಲ್ಲಿ ಪ್ರಭು ಚಾವ್ಲಾ ಬರೆಯುತ್ತಾರೆ. ಅದು ಭಯೋತ್ಪಾದನೆಯ ವಿರುದ್ಧದ ಆಕ್ರೋಶವಾಗಿತ್ತು. ಇಂಗ್ಲಿಷ್ ಮೀಡಿಯಾಗಳ ಪಾಲಿಗೆ ಅದು ಅರ್ಥೈಸಿಕೊಳ್ಳಲಾಗದ ಸಂಗತಿ. ಇತ್ತ ಈ ಥರದ ಅಭಿಪ್ರಾಯಗಳೆಲ್ಲ ವ್ಯಕ್ತವಾಗುತ್ತಿದ್ದರೆ ಡಿಸೆಂಬರ್ 17ರಂದು ಬಿಜೆಪಿ ಪಾರ್ಲಿಮೆಂಟರಿ ಪಾರ್ಟಿಯನ್ನುದ್ದೇಶಿಸಿ ವಾಜಪೇಯಿಯವರು ಆಡಿದ ಮಾತು ಮುಖ್ಯವಾದುದಾಗಿತ್ತು. 'ಬಹಳಷ್ಟು ಮಂದಿ ನಮ್ಮನ್ನು ಕೇಳುತ್ತಿದ್ದಾರೆ. ಮುಂಬರುವ ದಿನಗಳಲ್ಲೂ ಗೋಧ್ರಾ ಮಾದರಿ ಅನುಸರಿಸಲಿದ್ದೀರಾ ಅಂತ. ನಾನವರಿಗೆ ಕೇಳುತ್ತೇನೆ, 'ಹಾಗಾದರೆ ಅವರು ಮತ್ತೊಂದು ಗೋಧ್ರಾ ಘಟನೆ ಮರುಕಳಿಸುತ್ತಾರಾ?' ನನಗೆ ತುಂಬ ದುಃಖ ತರುವ ವಿಷಯವೇನೆಂದರೆ ಗೋಧ್ರಾ ಘಟನೆ ಬಗ್ಗೆ ಮುಸ್ಲಿಂ ಸಮುದಾಯದಿಂದ ಅಷ್ಟಾಗಿ ವಿಷಾದವೇ ವ್ಯಕ್ತವಾಗುತ್ತಿಲ್ಲ. ಈ ಕ್ಷಣದಲ್ಲಿ ಕೂಡ ಯಾರೊಬ್ಬರು ಮುಂದೆ ಬಂದು, ಗೋಧ್ರಾದಲ್ಲಿ ನಡೆದಿದ್ದು ತಪ್ಪು, ಇನ್ನು ಮುಂದೆ ಒಟ್ಟಾಗಿ ಬಾಳೋಣ ಎನ್ನುತ್ತಿಲ್ಲ.'

ವಾಜಪೇಯಿ ಹೇಳಿದಂತೆ ಇದು ಬರೀ ಮುಸ್ಲಿಂ ಮನಸ್ಥಿತಿಗಷ್ಟೇ ಸೀಮಿತವಾಗಿರಲಿಲ್ಲ.

ಗೋಧ್ರಾ ಘಟನೆಯ ಬಗ್ಗೆ ಸೆಕ್ಯುಲರಿಸ್ಟರ ಇಡೀ ಪಡೆ ದಿವ್ಯಮೌನ ತಾಳಿತ್ತು. ಸೋಗಲಾಡಿ ಸೆಕ್ಯುಲರ್ ಮಾಧ್ಯಮ ಮುಸ್ಲಿಮರನ್ನು ದಿಕ್ಕುತಪ್ಪಿಸಿತ್ತು. ಗುಜರಾತಿನ ಗಲಭೆಗಳಿಗೆ ಕಾರಣರು ಮುಸ್ಲಿಮರಲ್ಲ ಮೋದಿ ಎಂದು ಶಂಕಿಸುವಂತಿತ್ತು ಮಾಧ್ಯಮಗಳ ಪ್ರಚೋದನೆ.





# 30

## ಮಾತನಾಡಬೇಕಾದಾಗ ಅವರು ಮುಗುಮ್ಮಾಗಿ ಇರುತ್ತಿರಲಿಲ್ಲ

ಮೋದಿ ಮಾತಿನ ಮಲ್ಲ. ಚುನಾವಣೆಯ ನಂತರ ಗುಜರಾತ್ ಅಸೆಂಬ್ಲಿ ಮೊದಲ ಬಾರಿಗೆ ಸಭೆ ಸೇರಿದಾಗ ಮೋದಿ ಮಾತನಾಡಿದ ರೀತಿಯಿದೆಯಲ್ಲ... ಅದು ಅವಕಾಶವಾದಿ ರಾಜಕಾರಣದ ಮುಖಕ್ಕೆ ಅಸಡ್ಡೆಯಿಂದ ಉಗಿದ ಹಾಗಿತ್ತು. ಆ ದಿನದ ಚರ್ಚೆಯಲ್ಲಿ ಗುಜರಾತ್ ಗಲಭೆ ನಡೆದಾಗ ಪೊಲೀಸರು ಸುಮ್ಮನಿದ್ದರೇಕೆ ಎಂಬ ವಾದ ಹುಟ್ಟಿಕೊಂಡಿತು. ಎಲ್ಲರಂತೆ ಅದಕ್ಕೊಂದು ವಿಚಾರಣೆಯ ಆದೇಶ ಹೊರಡಿಸಿ ಮೆತ್ತಗಾಗಿ ಬಿಡಬಹುದಿತ್ತು ಮೋದಿ. ಉಹುಂ, ಅದು ಮೋದಿಯ ಜಾಯಮಾನವೇ ಅಲ್ಲ. ಅವತ್ತು ತುಂಬ ದೃಢವಾಗಿ ಸಮಸ್ತ ಪೊಲೀಸ್ ಪಡೆಯ ಪರ ವಾದಕ್ಕೆ ನಿಂತುಬಿಟ್ಟಿದ್ದರು ಮೋದಿ. ವ್ಯಂಗ್ಯದ ಛಾಟಿಯೇಟು ಹಿಡಿದೇ ಮಾತಿಗೆ ಮೊದಲಿಟ್ಟರು. 'ನನಗಿದು ಗೊತ್ತಾಗಬೇಕಿದೆ. ಏಕೆ ನಮ್ಮ ಸಂಸತ್ ಸದಸ್ಯರು ಅಕಾರಣವಾಗಿ ಸುಟ್ಟು ಸಾವನ್ನಪ್ಪಿದ 58 ಜನರ ಕುರಿತು ಏನೊಂದೂ ಮಾತನಾಡುತ್ತಿಲ್ಲ? ಅವರಲ್ಲಿ 40 ಜನ ಮುಗ್ಧ ಮಹಿಳೆಯರು ಹಾಗೂ ಮಕ್ಕಳಿದ್ದರು. ಇಪ್ಪತ್ತೇಳು ಫೆಬ್ರವರಿಯಂದು ಘಟಿಸಿದ ಆ 58 ಸಾವುಗಳು ಇತರ ಸಾವುಗಳಿಂದ ಬೇರೆಯಾಗಿ ನಿಂತುಬಿಡುತ್ತವೇಕೆ? ನನಗಂತೂ ಅರ್ಥವಾಗುತ್ತಿಲ್ಲ. ಅದೇಕೆ ಗುಜರಾತು ಪದೇ ಪದೆ ಟೀಕೆಗೊಳಗಾಗುತ್ತಿದೆ? ನಾನು ಈ ದೇಶದೆದುರು ಹೇಳುತ್ತಿದ್ದೇನೆ, ನಾನಾ ಕಾರಣಗಳನ್ನು ಮುಂದಿಟ್ಟುಕೊಂಡು ಗುಜರಾತನ್ನು ತುಚ್ಛೀಕರಿಸುವ ಪ್ರಯತ್ನವೊಂದು ಬಹುಕಾಲದಿಂದ ನಡೆಯುತ್ತಿದೆ. ಇದು ನಿಜಕ್ಕೂ ಕಾಳಜಿವಹಿಸಬೇಕಾದ ವಿಷಯ. ಸೂರತ್ ಅದೆಂದೋ ಪ್ಲೇಗ್ ಮಾರಿಯಿಂದ ಹೊರಬಂದಾಗಿದೆ. ಇಷ್ಟಾಗಿಯೂ ಸೂರತ್ ಜಗತ್ತಿನ ದೃಷ್ಟಿಯಲ್ಲಿ ಕುಖ್ಯಾತವೆನಿಸಿ ಬಿಟ್ಟಿದೆ. ಗುಜರಾತಿನ ಮೂಲೆಯೊಂದರಲ್ಲಿ ಆದಿವಾಸಿಗಳು ಹಾಗೂ ಕ್ರಿಶ್ಚಿಯನ್ನರ ನಡುವೆ ನಡೆದ ಸಣ್ಣ ಗಲಭೆಗೆ ಬಣ್ಣ ಕೊಟ್ಟು ಗುಜರಾತಿಗೆ ಭೇಟಿ

ನೀಡಲಿಕ್ಕೇ ಅಯೋಗ್ಯವಾದ ಅರಾಜಕ ರಾಜ್ಯ ಎಂಬ ಚಿತ್ರಣ ನೀಡಲಾಗುತ್ತಿದೆ. ಆದರೆ ತಿಳಿದುಕೊಳ್ಳಿ, ಗುಜರಾತ್ ಅಮರ. ಗುಜರಾತಿನ ಒಳಗೊಂದು ಸ್ಫೂರ್ತಿ ಇದೆಯಲ್ಲ, ಅದ್ಯಾವತ್ತಿಗೂ ಸಾಯಲಾರದು. ನಮ್ಮದು ಗಡಿಯಂಚಿಗಿನ ರಾಜ್ಯ. ಯಾವತ್ತೂ ನಮ್ಮ ಮೈಯೆಲ್ಲಾ ಕಣ್ಣಾಗಿರಬೇಕು. ಹಾಗಿರುವುದರಿಂದಲೇ ಎಕೆ- 56 ಬಂದೂಕುಗಳನ್ನು ಪಿಸ್ತೂಲ್‌ಗಳನ್ನೂ ಹಾಗೂ ಆರ್.ಡಿ.ಎಕ್ಸ್‌ಗಳನ್ನೂ, ರಿಮೋಟ್, ರೇಡಿಯೋ ವ್ಯವಸ್ಥೆಗಳನ್ನು ನಾವು ಒಂದೇ ವಾರದಲ್ಲಿ ವಶಪಡಿಸಿಕೊಂಡಿದ್ದೇವೆ. ನವಸಾರಿ ಜಿಲ್ಲೆಯ ಮದ್ರಸಾವೊಂದರ ಮೌಲ್ವಿ ಬಳಿ ಪ್ರಚೋದನಕಾರಿ ಸಾಹಿತ್ಯ, ಸೂಕ್ಷ್ಮ ನಕ್ಷೆಗಳು, ಸ್ಫೋಟಕಗಳು ಇವೆಲ್ಲ ದೊರಕಿವೆ. ನಮ್ಮ ರಾಜ್ಯ ನಿಷೇಧಿತ ಸಿಮಿಯ ಸಂಚುಗಳನ್ನೆಲ್ಲ ಬಯಲಿಗೆಳೆದಿದ್ದೇ ಅಲ್ಲದೇ ಅದರ ನೂರಕ್ಕೂ ಹೆಚ್ಚು ಮುಖಂಡರನ್ನು ಹಿಡಿದು ಕಂಬಿ ಎಣಿಸುವಂತೆ ಮಾಡಿದೆ. ಇದರಿಂದಾಗಿ ರೊಚ್ಚಿಗೆದ್ದಿರುವ ಭಯೋತ್ಪಾದನಾ ಸಂಘಟನೆಗಳು ಹೇಗಾದರೂ ಮಾಡಿ ನಮ್ಮ ಪೊಲೀಸರ ಮನಸ್ಥೈರ್ಯವನ್ನು ಹಾಳುಗೆಡವಲು ಹೊಂಚುಹಾಕಿ ಕುಳಿತಿವೆ. ಇಂತಹ ಸಮಯದಲ್ಲಿ ಪೊಲೀಸರ ಜತೆಗಿರಬೇಕಾದ್ದು ಗುಜರಾತಿನ ಉಳಿವಿನ ದೃಷ್ಟಿಯಿಂದ ಅತಿಮುಖ್ಯ. ಎಲ್ಲಾ ಜವಾಬ್ದಾರಿಗಳನ್ನು ಹೊತ್ತುಕೊಳ್ಳಲು ನಾನು ತಯಾರಿದ್ದೇನೆ. ನಾನು ತಪ್ಪು ಮಾಡಿರುವುದೇ ಹೌದು ಎಂದಾದರೆ ಗಲ್ಲುಗಂಬ ಏರಲೂ ಸಿದ್ಧ. ಆದರೆ ಪೋಲಿಸ್ ಪಡೆಗಳನ್ನು ನಾನು ಬಿಟ್ಟುಕೊಡಲಾರೆ. ನಮ್ಮ ರಾಜ್ಯದಲ್ಲಿ ಶಾಂತಿ ನೆಲೆಸುವ ಸಲುವಾಗಿ ಅವಿರತ ಶ್ರಮಿಸುತ್ತಿರುವವರು ಅವರು' ಎಂದು ನಿರರ್ಗಳವಾಗಿ ಮಾತನಾಡಿದರು ಮೋದಿ.

ಕೊನೆಯದಾಗಿ ಪದ್ಯದ ಸಾಲೊಂದನ್ನು ನೆನಪಿಸಿಕೊಂಡು ಮಾತು ಮುಗಿಸಿದ ಮೋದಿ 'ಮುಖ ಸೊಟ್ಟಗಿರಬಹುದು ನಿಜ. ಹಾಗಂತ ಸತ್ಯ ಹೇಳದೇ ಇರಲು ಕನ್ನಡಿಗಾಗುವುದಿಲ್ಲ' ಅಂತ ಉಸಿರೆಳೆದುಕೊಂಡರು!

ಇಷ್ಟಾಗಿಯೂ ಮೋದಿ ಹೇಳಿದ್ದನ್ನು ಕೇಳಿಸಿಕೊಳ್ಳುವ ವ್ಯವಧಾನವೇ ಮಾಧ್ಯಮಗಳಿಗಿರಲಿಲ್ಲ. ಜನವರಿ 6, 2003ರ 'ಇಂಡಿಯಾ ಟುಡೆ' ನರೇಂದ್ರ ಮೋದಿಯವರನ್ನು 'ವರ್ಷದ ನ್ಯೂಸ್‌ಮೇಕರ್' ಅಂತ ಕರೆಯಿತು. ಆದರದು ನೇತ್ಯಾತ್ಮಕ ನೆಲೆಯದ್ದಾಗಿತ್ತು. ಅದು ತನ್ನದೇ ಆದ ಭಾಷೆಯಲ್ಲಿ ಮೋದಿಯವರನ್ನು ಜರೆದಿತ್ತು. ಅದರ ಪ್ರತಿನಿಧಿ ಎಸ್. ಪ್ರಸನ್ನರಾಜನ್ ಬರೆದ ಲೇಖನವನ್ನೇ ತೆಗೆದುಕೊಳ್ಳಿ- 'ಮೋದಿ ಒಂದು ಅಲೆಯಾಗಿ, ವಿಚಾರವಾಗಿ ರಾಜಕೀಯದ ಮೂಲಬಿಂದುವಿನಿಂದ ಜನರ ಮನಗಳನ್ನು ಎತ್ತಿಬಿಟ್ಟಿದ್ದಾರೆ' ಅಂತ ಶುರು ಮಾಡುತ್ತಾರಾದರೂ ಮೋದಿಯವರನ್ನು ಜರೆಯುವುದನ್ನೇ ಅವರು ಉದ್ದೇಶವಾಗಿರಿಸಿಕೊಂಡಂತಿತ್ತು. 'ನೋಡಿ ಆತನನ್ನು, ಹತ್ತಿರದಿಂದ ಗಮನಿಸಿ. ತುಂಬ





ಸಮಯದವರೆಗೂ ಆತ ಹತ್ತರಲ್ಲಿ ಇನ್ನೊಬ್ಬನಾಗಿ ಸಾಮಾನ್ಯ ರಾಜಕಾರಣಿಯಂತಿದ್ದ, ಕೊನೆಗೊಂದು ದಿನ ಉಳಿದೆಲ್ಲಾ ಮುಖ್ಯಮಂತ್ರಿಗಳಂತೆ ಆತನೂ ಒಬ್ಬ ಮುಖ್ಯಮಂತ್ರಿ ಎನಿಸಿಕೊಂಡ. ಇವತ್ತಿಗೆ ಆತ ಬರೀ ಮೋದಿ... ಇದೊಂದು ಹೆಸರು ಸಾವಿರಾರು ವಾದಗಳನ್ನು ಎಬ್ಬಿಸುತ್ತಿದೆ, ಅಸಂಖ್ಯ ಉನ್ಮಾದಗಳನ್ನು ಹುಟ್ಟುಹಾಕಿದೆ, ಸಂಪಾದಕೀಯ ಪುಟಗಳನ್ನು ಆವರಿಸಿಕೊಂಡಿದೆ, ಆಕ್ರೋಶಗಳನ್ನು ಹೊಡೆದೆಬ್ಬಿಸುತ್ತಿದೆ...' ಎಂದು ಬರೆಯುವ ಪ್ರಸನ್ನರಾಜನ್ ಪ್ರಕಾರ ಸಾಬರಮತಿ ರೈಲನ್ನು ಸುಟ್ಟಿದ್ದು 'ಇಸ್ಲಾಮಿಕ್ ಶೋ' ಆಗಿತ್ತು. ಬೀದಿಗಿಳಿದ ಹಿಂದುಗಳಲ್ಲಿ ಭೀತಿ ಹಾಗೂ ತಳಮಳಗಳಿದ್ದವು. ಅದನ್ನು ಸಂಘ ಪರಿವಾರ ತನಗೆ ಬೇಕಾದಂತೆ ಬಳಸಿಕೊಂಡಿತು. ಹೀಗೆ ಹೇಳುತ್ತಾ ಮೋದಿ ಮೇಲಿನ ಆರೋಪಗಳನ್ನು ಮುಂದುವರಿಸುತ್ತಾರೆ-'ಆತ ಗುಜರಾತಿನ ಚುನಾವಣೆಯನ್ನು ಭಯೋತ್ಪಾದನೆ ಮೇಲಿನ ರೆಫರೆಂಡಮ್ ಆಗಿ ಬಳಸಿಕೊಂಡ. ಆತ ಪ್ರಾದೇಶಿಕ ಜನಮನ್ನಣೆಯನ್ನು ಯಾಚಿಸಲೇ ಇಲ್ಲ, ಬದಲಿಗೆ ಮಿಯಾ ಮುಷರ್ರಫ್ ಎಂಬ ಕಮಾಂಡರ್‌ನ ಮೇಲೆ ಯುದ್ಧ ಸಾರಿ ತನ್ನನ್ನು ರಾಷ್ಟ್ರಮಟ್ಟದ ಹೀರೋ ಆಗಿಸಿಕೊಂಡ.' ಇಂತಹ ಉಲ್ಲೇಖಗಳನ್ನೇ ಆಧಾರವಾಗಿಟ್ಟುಕೊಂಡು ವಿದೇಶಿ ಮಾಧ್ಯಮಗಳು ಮೋದಿಯನ್ನು ಚಿತ್ರಿಸಿದವು. ಮಾರ್ಚ್ 3, 2003ರ ನ್ಯೂಸ್‌ವೀಕ್ ಮೋದಿಯವರನ್ನು 1930ರ ಫ್ಯಾಸಿಸ್ಟ್ ಜರ್ಮನಿ ಹಾಗೂ ಇಟಲಿಗಳಿಂದ ಪ್ರಭಾವಿತನಾದ ವ್ಯಕ್ತಿ ಅಂತ ವಿವರಿಸಿತು.

ಭಾರತದ ಸೆಕ್ಯುಲರಿಸ್ಟ್‌ಗಳಿಗೂ ಅದೇ ಬೇಕಾಗಿತ್ತು.

# 31
# ಇದು ಬರೀ ನನ್ನೊಬ್ಬನ ನೋವಲ್ಲ ಐದು ಕೋಟಿ ಜನರದ್ದು!

ಅಂದು ಮೇ 1, 2003. ಗುಜರಾತ್ ತನ್ನ 43ನೇ ಸ್ಥಾಪಕ ದಿನವನ್ನು ಆಚರಿಸಿಕೊಂಡಿತು. ಅವತ್ತು ಮುಖ್ಯಮಂತ್ರಿಯಾಗಿ ನರೇಂದ್ರ ಮೋದಿ ಗುಜರಾತಿಗಳಿಗೆ ಸಂದೇಶ ನೀಡುತ್ತಾರೆ. ಅದರಲ್ಲಿ ದಂಗೆಗಳಿಂದಾದ ಗಾಯಗಳನ್ನು ವಾಸಿ ಮಾಡಿ, ಶಾಂತಿ ನೆಲೆಸುವಂತೆ ಮಾಡಲು ಜನರ ಸಹಕಾರವನ್ನು ಯಾಚಿಸುತ್ತಾರೆ. ಕಾನೂನು ತನ್ನ ಕೆಲಸ ಮಾಡುತ್ತದೆ ಎನ್ನುವುದರೊಂದಿಗೆ ಅವರು ಭಿತ್ತರಿಸಿದ ಸಂದೇಶ ಹೀಗಿದೆ–''ನಾವೀಗ 42 ವರ್ಷಗಳ ಅಭಿವೃದ್ಧಿ ಯಾತ್ರೆಯನ್ನು ಪೂರೈಸಿದ್ದೇವೆ. ಈ ಪಯಣದಲ್ಲಿ ಅನೇಕರು ಗುಜರಾತಿಗೋಸ್ಕರವಾಗಿ ಹುತಾತ್ಮರಾಗಿದ್ದಾರೆ. ಈ ನಡುವೆ ಗುಜರಾತಿನ ಆತ್ಮ ಗೌರವ ಎದ್ದುನಿಂತಿದೆ. ಇತ್ತೀಚಿನ ದಿನಗಳಲ್ಲಿ ಗುಜರಾತಿನಲ್ಲಿ ಕೋಮುಗಲಭೆಗಳಾದವು. ಅನೇಕರು ಇದರಿಂದ ಹಾನಿ ಅನುಭವಿಸಿದರು. ಗುಜರಾತು ಮಾನವೀಯತೆಯನ್ನೇ ಮರೆತಿತ್ತೇನೋ ಅಂತಲೂ ಅನ್ನಿಸಿತು. ಈಗ ಅವನ್ನೆಲ್ಲ ತಿರುಗಿ ಪಡೆಯಬೇಕಾದ ತುರ್ತು ಇದೆ. ಜನಗಳ ನಡುವೆ ವಿಶ್ವಾಸ ವೃದ್ಧಿಸುವ ಕೆಲಸ ಈಗ ಆಗಬೇಕಿದೆ. ಗುಜರಾತನ್ನು ಅಪಖ್ಯಾತಿಗೊಳಪಡಿಸುವ ಸಂಚು ಹೆಣೆಯಲ್ಪಟ್ಟಿದೆ. ಯಾರಿಗೂ ನಮ್ಮ ನೋವು ಅರ್ಥವಾಗುತ್ತಿಲ್ಲ. ಶವಪರೀಕ್ಷೆಯಲ್ಲೇ ಹೆಚ್ಚು ಉತ್ಸುಕರಾಗಿರುವ ನಮ್ಮ ಟೀಕಾಕಾರರು ಶಾಂತಿ ಪ್ರಯತ್ನದಲ್ಲಿ ಕೈಜೋಡಿಸಲಾರರೇ?

ಇದು ಬರೀ ನನ್ನೊಬ್ಬನ ನೋವಲ್ಲ; ಐದು ಕೋಟಿ ಜನರದ್ದು.

ಗಾಳಿ ಸುದ್ದಿಗಳು ಸುತ್ತೆಲ್ಲ ತೇಲಾಡುತ್ತಿವೆ. ಪ್ರತಿದಿನವೂ ಕರಪತ್ರಗಳು ಅಚ್ಚಾಗುತ್ತಿವೆ. ಅವರನ್ನು ನಂಬಬೇಡಿ. ಗಾಳಿ ಸುದ್ದಿಗಳಿಗೆ ಕಿವಿಗೊಡಬೇಡಿ. ನಾವು ಪರಸ್ಪರ ವಿಶ್ವಾಸ ತಳೆಯದಿದ್ದರೆ ಬದುಕುವುದೇ ಕಷ್ಟವಾಗಿಬಿಡುತ್ತದೆ. ನಾವು ವರ್ಷಾಂತರಗಳಿಂದಲೂ ಒಟ್ಟಿಗೇ ಬದುಕುತ್ತಾ ಬಂದಿದ್ದೇವೆ. ಆ ಅನುಭವವನ್ನು ನಂಬಿ. ಕೆಲ ಶಕ್ತಿಗಳು ಗುಜರಾತನ್ನು

ಮುಗಿಸಲೆಂದೇ ಕುಳಿತಿವೆ. ಭಯೋತ್ಪಾದನೆಯಡಿ ಅವರು ಆಶ್ರಯ ಪಡೆದಿದ್ದಾರೆ. ಆದರೆ ಅವರ ಕಾರ್ಯಚಟುವಟಿಕೆ ಕೆಲವೇ ಸ್ಥಳಗಳಿಗೆ ಸೀಮಿತವಾಗಿದೆ. ನಾವು ಅವರನ್ನೆಲ್ಲ ಪ್ರತ್ಯೇಕಿಸಿ ಅಂತಹ ಶಕ್ತಿಗಳು ಒಬ್ಬಂಟಿಯಾಗುವಂತೆ ಮಾಡಬೇಕು. ಒಂದು ಸಮಾಜವಾಗಿ ನಾವೆಲ್ಲ ಒಗ್ಗಟ್ಟಾಗಬೇಕು. ಕೆಲ ಸಮಯದಲ್ಲೇ ಪರಿಸ್ಥಿತಿ ಬದಲಾಯಿಸುತ್ತದೆ. ವಿಶ್ವಾಸದಿಂದ ಬದುಕುತ್ತಿರುವ ಜನಸಮೂಹದ ಇನ್ನೊಂದು ಬಗೆಯ ಚಿತ್ರಣವನ್ನು ಕೊಡುವ ಅಭಿಲಾಷೆ ನನ್ನದು. ಐದು ಕೋಟಿ ಪ್ರಜೆಗಳು ಒಟ್ಟಾಗಿ ಎದ್ದು ನಿಂತು ಜಗತ್ತಿನೆದುರು ಆತ್ಮವಿಶ್ವಾಸದಿಂದ ಹೇಳಬೇಕಾಗಿದೆ, ನೀವು ಚಿತ್ರಿಸಿರುವ ನಮೂನೆಯ ಜನರು ನಾವಲ್ಲ ಎಂದು. ವಿಕೋಪ ಎದುರಾದ ಸಂದರ್ಭದಲ್ಲೂ ಸಹ ಒಂದು ಕೋಟಿ ಇಪ್ಪತ್ತು ಲಕ್ಷ ವಿದ್ಯಾರ್ಥಿಗಳು ಪರೀಕ್ಷೆಗೆ ಹಾಜರಾದರು. ಅದಕ್ಕೂ ಸಹ ವಿರೋಧ ಎದುರಾಯಿತು. ಅದನ್ನು ನಾವು ದಾಟಿದೆವು. ವಿದ್ಯಾರ್ಥಿಗಳ ಭವಿಷ್ಯ ಹಾಳಾಗದೇ ಇರಲು ತೆಗೆದುಕೊಳ್ಳಬೇಕಾದ ಎಲ್ಲ ಕ್ರಮಗಳನ್ನು ನಾವು ತೆಗೆದುಕೊಂಡೆವು. ಹಿಂದುಗಳು ಪುಣ್ಯಕ್ಷೇತ್ರ ದರ್ಶನದಿಂದ ಹಿಂತಿರುಗಿದಾಗ ಯಾವ ಸ್ವಾಗತವನ್ನು ನೀಡಲಾಗುತ್ತದೋ ಅದೇ ರೀತಿ ಹಜ್ ಯಾತ್ರೆಯಿಂದ ಹಿಂತಿರುಗಿದವರನ್ನು ಹಳ್ಳಿಗೆ ಹಳ್ಳಿಯೇ ಅಭಿಮಾನದಿಂದ ಬರಮಾಡಿಕೊಂಡಿತು. ಇತ್ತೀಚೆಗೆ 7000 ಹಾಜಿಗಳು ಹಿಂತಿರುಗಿದರು ಹಾಗೂ 800 ಹಳ್ಳಿಗಳಲ್ಲಿ ಅವರನ್ನೆಲ್ಲ ಗೌರವಾದರಗಳೊಂದಿಗೆ ಬರಮಾಡಿ ಕೊಂಡರು. ಸಮಾಜದ ಗಣ್ಯರು ಅವರನ್ನು ಮನೆಗಳಿಗೆ ಕರೆದೊಯ್ದರು. ಮೊಹರಂ ಆಚರಣೆಗೆಂದೇ 1000 ಜನರನ್ನು ಹೊರಗೆ ಕರೆದೊಯ್ಯಲಾಯಿತು. 18,000 ಹಳ್ಳಿಗಳಲ್ಲಿ ಎಲ್ಲಾ ವರ್ಗದ ಜನ ಹೋಳಿಯಲ್ಲಿ ಭಾಗವಹಿಸಿದರು. ಹುಣ್ಣಿಮೆಯ ದಿನ ಲಕ್ಷಾಂತರ ಜನರು ದಾಕೋರ್ ಹಾಗೂ ಅಂಬಾಜಿಗಳಿಗೆ ಕಾಲ್ನಡಿಗೆಯಲ್ಲಿ ಯಾತ್ರೆ ಕೈಗೊಂಡರು. ಶಿವರಾತ್ರಿ ಸಂದರ್ಭದಲ್ಲಿ ಗಿರ್ನಾರ್‌ನಲ್ಲೊಂದು ಜಾತ್ರೆ ನಡೆಯಿತು. ಸಾವಿರಾರು ಜನ ಅದಕ್ಕೆ ಭೇಟಿ ನೀಡಿದ್ದರು. ಆಗೆಲ್ಲ ಶಾಂತಿಯಿತ್ತು. ಪ್ರಕ್ಷುಬ್ಧ ಪರಿಸ್ಥಿತಿಯಲ್ಲೇ 1700 ಹಳ್ಳಿಗಳಲ್ಲಿ ಚುನಾವಣೆಗಳು ನಡೆದಿವೆ. ಪ್ರತಿಶತ 75 ಜನರು ಮತದಾನದಲ್ಲಿ ಪಾಲ್ಗೊಂಡರು. ಯಾವ ಅನಪೇಕ್ಷಿತ ಘಟನೆಗಳೂ ನಡೆದಿರಲಿಲ್ಲ. ಇಡೀ ದೇಶದಲ್ಲಿ ಎಲ್ಲಾ ಗ್ರಾಮಪಂಚಾಯಿತಿಗಳಿಗೂ ಚುನಾಯಿತ ಪ್ರತಿನಿಧಿಗಳನ್ನು ಹೊಂದಿರುವ ಒಂದೇ ಒಂದು ರಾಜ್ಯ ಗುಜರಾತ್.

ಇದೇನು ಸಣ್ಣ ವಿಷಯವೇನಲ್ಲ.

ಗುಜರಾತ್ ಶಾಂತವಾಗಿದೆ. ಗುಜರಾತಿನ ಶೇಕಡ 95ರಷ್ಟು ಭಾಗವಂತೂ ಶಾಂತಿಯಿಂದಲೇ ಇದೆ. 18,000 ಹಳ್ಳಿಗಳಲ್ಲಿ 60–70 ಸ್ಥಳಗಳಲ್ಲಿ ಹಿಂಸಾಚಾರದ ಘಟನೆಗಳು ಸಂಭವಿಸಿವೆ. 143 ನಗರಗಳಲ್ಲಿ 40ರಲ್ಲಿ ಮಾತ್ರ ಅನಪೇಕ್ಷಿತ ಘಟನೆಗಳು ನಡೆದಿದ್ದಾಗಿ ವರದಿಯಾಗಿದೆ.





ಈಗಂತೂ ಅಂತಹ ಘಟನೆಗಳು ವಡೋದರಾ ಹಾಗೂ ಅಹಮದಾಬಾದಿನ 5ರಿಂದ 10 ಪೊಲೀಸ್ ಸ್ಟೇಷನ್‌ಗಳಿಗಷ್ಟೇ ಸೀಮಿತವಾಗಿದೆ. ನನ್ನ ಸ್ನೇಹಿತರಿಗೆ ನನ್ನ ವಿನಂತಿಯಿಷ್ಟೇ, ಸುಳ್ಳು ಮಾಹಿತಿಗಳನ್ನು ಹರಡಬೇಡಿ. ಮನಸೋ ಇಚ್ಛೆ ನಮ್ಮನ್ನು ಟೀಕಿಸಿ. ಆದರೆ ರಾಜ್ಯದ ಶಾಂತಿ ಸುವ್ಯವಸ್ಥೆಗೆ ಭಂಗ ತರಬೇಡಿ. ಈ ಪ್ರಜಾಪ್ರಭುತ್ವದಲ್ಲಿ ನಮ್ಮನ್ನು ಅಧಿಕಾರದಿಂದ ಕೆಳಗೆ ತರುವ ಎಲ್ಲ ಅಧಿಕಾರವೂ ನಿಮ್ಮ ಮುಂದಿದೆ. ಆದರೆ ಸದ್ಯಕ್ಕೆ ಶಾಂತಿ ನೆಲೆಗೊಳ್ಳಲು ಸಹಕಾರ ಕೊಡಿ. ಐದು ಕೋಟಿ ಜನತೆಗೆ ನಾನು ಕೈಮುಗಿದು ವಿನಂತಿಸುವ ಅಂಶಗಳೇನೆಂದರೆ–

"ಸುಳ್ಳು ಪ್ರಚಾರಗಳಿಗೆ ಮರುಳಾಗಬೇಡಿ.
ವಿಶ್ವಾಸದ ವಾತಾವರಣ ನಿರ್ಮಿಸಿ.
ಶಾಂತಿ ಪಾಲನೆಗಾಗಿ ಕಟಿಬದ್ಧರಾಗಿರಿ.
ಗುಜರಾತಿಗೆ ಅಪಖ್ಯಾತಿ ತಂದೊಡ್ಡಲು ಪ್ರಯತ್ನಿಸುತ್ತಿರುವ ಶಕ್ತಿಗಳನ್ನು ದೂರವಿಡಿ.
ಸಮಾಜದಲ್ಲಾದ ತಪ್ಪುಗಳನ್ನು ಎತ್ತಿಹೇಳುವ ಧೈರ್ಯ ತೆಗೆದುಕೊಳ್ಳಿ.
ಗೋಧ್ರಾ ಹಾಗೂ ಗೋಧ್ರೋತ್ತರ ಘಟನೆಗಳು ಸಮಾಜಕ್ಕೆ ಶೋಭೆತರುವಂಥದ್ದಲ್ಲ.
ಅಪರಾಧಿ ಅಪರಾಧಿಯೇ. ಆತನಿಗೆ ಧರ್ಮ ಸಮುದಾಯಗಳ ಹಂಗಿರುವುದಿಲ್ಲ.
ಅಪರಾಧಿ ತಪ್ಪಿಸಿಕೊಳ್ಳಲಾರ.
ಕಾನೂನು ಅದರ ಕೆಲಸ ಮಾಡಲಿದೆ.
ತಪ್ಪಿತಸ್ಥರಿಗೆ ಶಿಕ್ಷೆಯಾಗಲಿದೆ.
ತಪ್ಪು ಮಾಡಿದವರ ಕುಟುಂಬದೊತ್ತಡಕ್ಕೆ ರಾಜ್ಯ ಮಣಿಯುವುದಿಲ್ಲ.
ನ್ಯಾಯದ ತಕ್ಕಡಿ ಎಲ್ಲವನ್ನೂ ತೂಗಲಿದೆ."

ಹೀಗೆ ಮೋದಿಯವರ ಬಾಯಿಂದ ವಾಗ್ಝರಿ ಹರಿಯುತ್ತಿದ್ದರೆ ಇಡೀ ಅಸೆಂಬ್ಲಿ ತದೇಕಚಿತ್ತದಿಂದ ಆಲಿಸುತ್ತಾ ಕುಳಿತಿತ್ತು.

ಬಳಲಿದವರಿಗೆ ಮೋದಿ ನೀಡಿದ ಅಭಯವೆಂದರೆ, ಯಾರೂ ಸಹ ಕಾನೂನನ್ನು ತಮ್ಮ ಕೈಗೆ ತೆಗೆದುಕೊಳ್ಳಲಾರರು ಅನ್ನುವಂಥದ್ದು. ಹಾಗೆಯೇ ಗುಜರಾತಿನ ಓಟವನ್ನು ಯಾರು ಸಹ ನಿಲ್ಲಿಸಲಾರರು ಎನ್ನುವ ಭರವಸೆ ಮೋದಿಯಿಂದ ದೊರಕಿತು. ಕೈಗಾರಿಕಾ ಅಭಿವೃದ್ಧಿಗೆ ಪೂರಕವಾಗಿ ಗುಜರಾತ್ 5000 ಕೋಟಿ ರೂಪಾಯಿಗಳ ಒಪ್ಪಂದಕ್ಕೆ ಸಹಿ ಹಾಕಿದ್ದು ಗುಜರಾತ್ ದೇಶದ ನಂ 1 ರಾಜ್ಯ ಎಂದ ಮೋದಿ, 'ವಜ್ರದ ಕೈಗಾರಿಕೆಯನ್ನು ಬಲಪಡಿಸುವ ಸಲುವಾಗಿ ಸೇಲ್ಸ್ ಟ್ಯಾಕ್ಸ್ ಅನ್ನು ರದ್ದು ಮಾಡುವ ಮಹತ್ವದ ನಿರ್ಧಾರ ಕೈಗೊಂಡಿದ್ದೇವೆ. ವಿದ್ಯುತ್ತಿನ ಮೇಲಿದ್ದ ಸೇಲ್ಸ್ ಟ್ಯಾಕ್ಸ್ ಕೂಡ ತೆಗೆದು ಅಗ್ಗವಾಗುವಂತೆ ನೋಡಿಕೊಂಡಿದ್ದೇವೆ'

ಎಂದು ಅಭಿವೃದ್ಧಿ ದೃಷ್ಟಿಕೋನವನ್ನು ತೆರೆದಿರಿಸಿದರು.

ಉಳಿದ ರಾಜ್ಯಗಳಿಗಿಂತ ಗುಜರಾತ್ ಹೇಗೆ ಭಿನ್ನ ಎಂಬುದನ್ನು ವಿವರಿಸುತ್ತಾ ಮೋದಿ ಹೇಳುತ್ತಾರೆ-ಪ್ರತಿ ಎರಡು ತಿಂಗಳಿಗೊಮ್ಮೆ ಗ್ರಾಮ ಸಭೆಗಳನ್ನು ಆಯೋಜಿಸಿ ಅಧಿಕಾರಿಗಳು ಅಲ್ಲಿ ತೆರಳಿ ಜನರ ಕುಂದುಕೊರತೆಗಳನ್ನು ವಿಚಾರಿಸಿಕೊಳ್ಳುವಂತೆ ಮಾಡಿದ ಒಂದೇ ಒಂದು ರಾಜ್ಯ ಗುಜರಾತ್. ಪ್ರತಿ ಹಳ್ಳಿಗಳಲ್ಲೂ ಹಸಿರು ಸೈನಿಕರನ್ನು ನೇಮಿಸಿ ಪರಿಸರವನ್ನು ರಕ್ಷಿಸುವ ಯೋಜನೆಯೊಂದು ಶೀಘ್ರದಲ್ಲೇ ಬರಲಿದೆ. ಇದರಿಂದ ಯುವಕರಿಗೆ ಉದ್ಯೋಗಾವಕಾಶಗಳೂ ಹೆಚ್ಚಲಿವೆ ಎಂದರು. ಕರ್ತವ್ಯದಲ್ಲಿದ್ದಾಗ ಹತ್ಯೆಯಾದ ಪೊಲೀಸರಿಗೆ ಹಾಗೂ ಹಗಲಿರುಳೆನ್ನದೇ ಗಾಯಾಳುಗಳನ್ನು ಸಂತೈಸಿದ ವೈದ್ಯರಿಗೆ ಕೃತಜ್ಞತೆಗಳನ್ನು ಅರ್ಪಿಸುತ್ತಾ ಮೋದಿ ಹೇಳುತ್ತಾರೆ, 'ಕಣ್ಣುಗಳಲ್ಲಿ ವೇದನೆಯನ್ನಿಟ್ಟುಕೊಂಡು, ಎದೆಯಲ್ಲಿ ನೋವು ತುಂಬಿಕೊಂಡು, ಕಕ್ಕುಲಾತಿಯೊಂದಿಗೆ ಕೈ ಜೋಡಿಸಿ ಬೇಡಿಕೊಳ್ಳುತ್ತೇನೆ ಗುಜರಾತನ್ನು ಔನ್ನತ್ಯಕ್ಕೇರಿಸಿ ಅಂತ. ನಾವೆಲ್ಲ ಜಪಿಸೋಣ: ಜೈ ಜೈ ಗರ್ವಿ ಗುಜರಾತ್!'

ಹಾಗೆ ಅವತ್ತು ಮೋದಿ ನೀಡಿದ ಸಂದೇಶ ಸರಿಯಾಗಿಯೇ ಮುಟ್ಟಿತ್ತು. ಕದಡಿದಂತಿದ್ದ ವಿಶ್ವಾಸವನ್ನು ಮರುಸ್ಥಾಪಿಸಲೆಂದೇ ಬಂದ ನಾಯಕನಂತೆ ಮೋದಿ ಕಾಣಿಸಿದರು.

**ಅಭಿವೃದ್ಧಿಯೆಡೆಗೆ ದಾಪುಗಾಲು, ಮಾಧ್ಯಮಗಳ ಅಡ್ಡಗಾಲು**

ಗುಜರಾತ್‌ನ ಕಾಲೆಳೆಯಲು ನೆಪವೊಂದು ಬೇಕಿತ್ತಷ್ಟೆ ಸೆಕ್ಯುಲರ್ ಮಿಡಿಯಾಗಳಿಗೆ ಗೋಧ್ರಾ ನಂತರ ಗುಜರಾತು ಆರ್ಥಿಕವಾಗಿ ಮುಗ್ಗರಿಸಿದೆ ಅಂತ ಪ್ರಚಾರ ಮಾಡುವುದೇ ಒಂದು ಕೆಲಸವಾಯಿತು. ಆದರೆ ಸತ್ಯ ಬೇರೆಯದೇ ಆಗಿತ್ತು. 2004ರ ವೇಳೆಗೆ ಗುಜರಾತು ಕೈಗಾರಿಕಾ ಅಭಿವೃದ್ಧಿಯ ವಿಷಯದಲ್ಲಿ ಶೇಕಡ 17 ಪಾಲು ಪಡೆದಿದೆ. ದೇಶದ ಒಟ್ಟಾರೆ ರಫ್ತಿನಲ್ಲಿ ಶೇಕಡ 21 ಗುಜರಾತಿನ ಪಾಲಿದೆ. ವಜ್ರದ ತಯಾರಿಕೆಯಲ್ಲಿ 80 ಪ್ರತಿಶತ ಹಾಗೂ ದೇಶದ ತೆರಿಗೆ ಆದಾಯದಲ್ಲಿ ಶೇಕಡ 17 ಗುಜರಾತಿನದ್ದೇ ಕೊಡುಗೆ. ಜನವರಿ 2003ಕ್ಕೆ ಹೊರಬಿದ್ದ ಸೆಂಟರ್ ಫಾರ್ ಮಾನಿಟರಿಂಗ್ ಇಂಡಿಯನ್ ಇಕಾನಮಿ (ಸಿಎಮ್ ಐಎಸ್) ವರದಿಯ ಪ್ರಕಾರ ಕೈಗಾರಿಕಾಭಿವೃದ್ಧಿಯಲ್ಲಿ ಗುಜರಾತ್ ದೇಶದಲ್ಲೇ ನಂಬರ್ ಒನ್. 33,598 ಕೋಟಿ ಮೌಲ್ಯದ ಯೋಜನೆಗಳು ಸಾಕಾರಗೊಳ್ಳುವ ಹಾದಿಯಲ್ಲಿವೆ. ಗುಜರಾತಿನ ಜೀವನಾಡಿ ಸರ್ದಾರ್ ಸರೋವರದ ಮುಖ್ಯ ಅಣೆಕಟ್ಟಿನ ಎತ್ತರವನ್ನು 110.64 ಮೀಟರ್‌ಗಳಿಗೆ ಏರಿಸಲಾಗಿದೆ. ನರ್ಮದಾವನ್ನು ಮೂಲವಾಗಿರಿಸಿಕೊಂಡು ಹುಟ್ಟಿಕೊಂಡ 'ಮಾಂಗ್ರೋಲ್ ಮಾಲಿಯಾ ಸಮೂಹ'ದ ನೀರು ಸರಬರಾಜು ಯೋಜನೆ





ಸಮರೋಪಾದಿಯಲ್ಲಿ ಪೂರ್ಣಗೊಂಡಿದ್ದು, ಮೊದಲ ಹಂತದಲ್ಲಿ 31 ಹಳ್ಳಿಗಳಿಗೆ ಹಾಗೂ ನಂತರದಲ್ಲಿ 19 ಹಳ್ಳಿಗಳಿಗೆ ನೀರುಣಿಸುತ್ತಿವೆ. ನರ್ಮದೆಯ ಪೈಪ್‌ಲೈನ್ ಯೋಜನೆ ಕಚ್‌ನವರೆಗೂ ನೀರು ಹರಿಸಿ ಅಲ್ಲಿನ ಜನರ ಸಂಭ್ರಮಕ್ಕೆ ಕಾರಣವಾಗಿದೆ. ನರೇಂದ್ರ ಮೋದಿ ಸರಕಾರ ಹೆಮ್ಮೆಯಿಂದ ಹೇಳಿಕೊಳ್ಳಬಹುದಾದ ಯೋಜನೆಗಳನ್ನು ಹೀಗೆ ಪಟ್ಟಿ ಮಾಡುತ್ತಾ ಸಾಗಬಹುದು-

ಅರಣ್ಯೀಕರಣ ಹೆಚ್ಚಳ. 31,789 ಹೆಕ್ಟೇರ್ ಪ್ರದೇಶವನ್ನು ಆವರಿಸಿರುವ 45,249 ಕುಟುಂಬಗಳಿಗೆ 'ಭೂಮಿ ಪತ್ರ' ವಿತರಣೆ. 2003-04ರ ಅವಧಿಯಲ್ಲಿ 'ಮಾನವ್ ಗರಿಮಾ ಯೋಜನಾ' ಅಡಿಯಲ್ಲಿ 22,768 ಜನರಿಗೆ 28.27 ಕೋಟಿ ಸಬ್ಸಿಡಿ ವಿತರಣೆ. ಸಾಮಾಜಿಕ ಹಾಗೂ ಶೈಕ್ಷಣಿಕವಾಗಿ ಹಿಂದುಳಿದ 1 ರಿಂದ10ನೇ ತರಗತಿವರೆಗಿನ ಕೆಳವರ್ಗದ ಮಕ್ಕಳಿಗೆ 750 ರೂಪಾಯಿಗಳಿಂದ 3,000 ರೂಪಾಯಿಗಳವರೆಗಿನ ಸ್ಕಾಲರ್‌ಶಿಪ್. 2,786 ಕಿಲೋ ಮೀಟರ್ ರಸ್ತೆ ನಿರ್ಮಾಣ.1999ರಿಂದ 2003ರವರೆಗೆ ಜನರ ಸಹಭಾಗಿತ್ವದೊಂದಿಗೆ 20,000ಕ್ಕೂ ಹೆಚ್ಚು ಚೆಕ್‌ಡ್ಯಾಂ ನಿರ್ಮಾಣ. 2003ರಲ್ಲಿ 22,781 ಕೋಟಿ ಬಂಡವಾಳದ 395 ಕೈಗಾರಿಕಾ ಧಣಿಗಳ ಮೆಮೊರಾಂಡಮ್‌ಗಳಿದ್ದವು. 2004ರಿಂದ ಜುಲೈ 2005ರವರೆಗೆ ಇವುಗಳ ಸಂಖ್ಯೆ 547 ಮೆಮೊರಾಂಡಮ್‌ಗಳೊಂದಿಗೆ 28, 425 ಕೋಟಿಗೇರಿದೆ. ಸಣ್ಣ ಕೈಗಾರಿಕೆಗಳಿಗೆ ಸಂಬಂಧಿಸಿದಂತೆ 2002-2003ರಲ್ಲಿ 455 ಕೋಟಿ ರೂಪಾಯಿಗಳ ಬಂಡವಾಳ ಹೂಡಲಾಗಿತ್ತು. 'ಕಮೆಂಡಿಂಗ್ ಮೋದಿ' ಎಂಬ ತಲೆಬರಹದಡಿ ಸೆಪ್ಟೆಂಬರ್ 19ರಂದು 'ಇಂಡಿಯನ್ ಎಕ್ಸ್‌ಪ್ರೆಸ್' ಬರೆದ ಸಂಪಾದಕೀಯ ಕುತೂಹಲಕಾರಿಯಾಗಿದೆ- '-ಮೋದಿ ಆಡಳಿತದ ಒಂದಂಶ ಮಾತ್ರ ಗಮನಾರ್ಹ; ಅಷ್ಟೇ ಅಲ್ಲ ಹೊಗಳಿಕೆಗೆ ಯೋಗ್ಯ. ಅದೆಂದರೆ ಅರ್ಥವ್ಯವಸ್ಥೆಯನ್ನು ನಿಭಾಯಿಸುತ್ತಿರುವ ರೀತಿ. ಮೋದಿ ಕೈಗೊಂಡಿರುವ ಆರ್ಥಿಕ ಸುಧಾರಣೆಯ ಕ್ರಮಗಳನ್ನು ಗಮನಿಸುತ್ತಿದ್ದರೆ ಕಾಂಗ್ರೆಸ್‌ನಂತಹ ಪಕ್ಷಗಳಿಗೆ ನಾಚಿಕೆಯಾಗಬೇಕು. ವಿರೋಧ ಪಕ್ಷದಲ್ಲಿ ಕುಳಿತಿರುವ ಕಾಂಗ್ರೆಸ್ ಸುಮ್ಮನೇ ಕೂಗಾಡುತ್ತಿದೆ. ವಾಸ್ತವದಲ್ಲಿ ಬಂಡವಾಳ ಹಿಂತೆಗೆತ ವಿಷಯದಲ್ಲಿ ಕೇಂದ್ರ ಸರಕಾರವೇ ಪೇಚಿಗೆ ಸಿಲುಕಿದೆ. ಆದರೆ ಮೋದಿ ಗುಜರಾತಿನ 54 ಸರಕಾರಿ ಸ್ವಾಮ್ಯದ ಉದ್ದಿಮೆಗಳಿಗೆ ಮನಶ್ಚೇತನ ನೀಡುವ ನಿಟ್ಟಿನಲ್ಲಿ ಕ್ರಮ ತೆಗೆದುಕೊಂಡಿದ್ದಾರೆ. ಇದರಲ್ಲಿ ಭಾವನೆಗಳ ಸಂಘರ್ಷಕ್ಕೆ ಬಲಿಯಾಗದೇ ಸದೃಢ ಅರ್ಥವ್ಯವಸ್ಥೆಗೆ ಯಾವುದು ಪೂರಕವೋ ಅದನ್ನಷ್ಟೇ ಯೋಚಿಸಿದ್ದಾರೆ ಮೋದಿ. ವಿದೇಶಿ ಬಂಡವಾಳವನ್ನು ಆಕರ್ಷಿಸುವ ನಿಟ್ಟಿನಲ್ಲೂ ಏನು ಬೇಕೋ ಎಲ್ಲವನ್ನೂ ಮಾಡಲಾಗುತ್ತಿದೆ...'

# 32

## ಮಿಸ್ಟರ್ ಬಜಾಜ್
## ನಿಮ್ಮ ಲೆಕ್ಕಾಚಾರ ಯಾವುದು ಸ್ವಾಮಿ?

ಮುಂಬೈನಲ್ಲಿ 'ಕಾನ್ಫೆಡರೇಷನ್ ಆಫ್ ಇಂಡಿಯನ್ ಇಂಡಸ್ಟ್ರಿ' (ಸಿಐಐ) ಸಭೆ ನಡೆದಿತ್ತು. ಉದ್ಯಮ ವಲಯದ ಘಟಾನುಘಟಿಗಳೆಲ್ಲ ಅಲ್ಲಿದ್ದರು. ಅವರನ್ನುದ್ದೇಶಿಸಿ ಮೋದಿ ಮಾತಿಗಿಳಿದಿದ್ದರು. ಅವರೆದುರು ತಮ್ಮ ಆರ್ಥಿಕ ದೃಷ್ಟಿಕೋನವನ್ನು ತೆರೆದಿಟ್ಟರು. ಭ್ರಷ್ಟಾಚಾರದ ಅಡೆತಡೆಗಳನ್ನು ನಿವಾರಿಸಿ ಪಾರದರ್ಶಕತೆ ತರುವುದರ ಅವಶ್ಯಕತೆಯನ್ನು ಪ್ರಾರಂಭದಲ್ಲೇ ಒತ್ತಿ ಹೇಳಿದರು. ಖಾಸಗಿ ವಲಯಗಳಿಗೆ ಅನುಕೂಲಕರವಾದ ವಾತಾವರಣವನ್ನು ನಿರ್ಮಿಸುವಲ್ಲಿ ಸರಕಾರ ಯಾವತ್ತಿಗೂ ಶ್ರಮಿಸಲಿದೆಯೆಂಬ ಭರವಸೆ ಅವರಿಂದ ಬಂತು. ರಾಜ್ಯ 10 ಪ್ರತಿಶತ ಬೆಳವಣಿಗೆ ಗುರಿ ಮುಟ್ಟಬೇಕೆಂದರೆ ಅದಕ್ಕೆ ಖಾಸಗಿ ಹಾಗೂ ಸರಕಾರದ ಸಹಭಾಗಿತ್ವವೊಂದೇ ದಾರಿ ಎಂಬುದು ಅವರ ಅಭಿಮತವಾಗಿತ್ತು. ಗುಜರಾತಿನ ಅಭಿವೃದ್ಧಿ ಮಂತ್ರಕ್ಕೆ ಐದು ಅಂಶಗಳನ್ನು ಮೂಲವಾಗಿರಿಸಿದರು ಮೋದಿ. ಅವುಗಳೆಂದರೆ ಜ್ಞಾನ, ಮಾನವ ಸಂಪನ್ಮೂಲ, ಶಕ್ತಿ, ಜನರ ಸಶಕ್ತೀಕರಣ ಮತ್ತು ರಕ್ಷಣೆ. ಅದಕ್ಕೆ ಸಿಕ್ಕ ಪ್ರತಿಕ್ರಿಯೆ ಉತ್ತಮವಾಗಿತ್ತು.

ಆದರೆ ಯಾವಾಗ ಮೋದಿ ರೈತರನ್ನುದ್ದೇಶಿಸಿ ಒಂದು ಭಾಷಣ ಮಾಡಿದರೋ ಅಲ್ಲಿ ಶುರುವಾಯಿತು ನೋಡಿ ತೊಂದರೆ!

'ನಿಮ್ಮ ಮಗಳ ಮದುವೆಯಲ್ಲಿ ವರದಕ್ಷಿಣೆಯಾಗಿ ಚಿನ್ನ ಅಥವಾ ಆಭರಣಗಳನ್ನು ಕೊಡುವುದರ ಬದಲು ಹನಿ ನೀರಾವರಿಯ ಸಲಕರಣೆಗಳನ್ನು ನೀಡಿ' ಅಂತ ಮೋದಿ ಹೇಳಿದ ಮರುಕ್ಷಣದಲ್ಲಿ 'ಆಲ್ ಇಂಡಿಯಾ ಡೆಮೋಕ್ರಟಿಕ್ ವುಮನ್ಸ್ ಅಸೋಸಿಯೇಷನ್' ಆಕ್ರೋಶ ವ್ಯಕ್ತಪಡಿಸಿತು. ಆದರ ಬಗ್ಗೆ ಕೋಲ್ಕತ್ತಾ ಮೂಲದ 'ದಿ ಸ್ಟೇಟ್ಸ್‌ಮನ್' ಪತ್ರಿಕೆ ಜನವರಿ 30ರಂದು ಸಂಪಾದಕೀಯ ಬರೆಯಿತು. "ನಿಜವೇ, ಕಾನೂನು ರೀತ್ಯಾ ವರದಕ್ಷಿಣೆ ನಿಷೇಧಿಸಲ್ಪಟ್ಟಿದೆ.

ಆದರೆ ಮೋದಿ ವಿಷಯದಲ್ಲಿ ಈ ದೃಷ್ಟಿಕೋನದ ವಿಶ್ಲೇಷಣೆ ಸರಿಯಲ್ಲ, ಮೋದಿಯ ಮಾತು ವರದಕ್ಷಿಣೆ ಪದ್ಧತಿಯ ಪರವಾಗಿದೆ ಎಂದು ಗುಲ್ಲೆಬ್ಬಿಸಿ ಅದನ್ನು ಅವಸಾನ ಹೊಂದುತ್ತಿರುವ ಮಹಿಳಾ ಜನಸಂಖ್ಯೆಯೊಂದಿಗೆ ಹೋಲಿಸುವುದು, ರಾಜಕೀಯ ಭಿನ್ನಾಭಿಪ್ರಾಯ ತರ್ಕಬದ್ಧ ಚಿಂತನೆಯೊಂದಕ್ಕೆ ಹೇಗೆ ತಡೆಯೊಡ್ಡುತ್ತದೆ ಎಂಬುದಕ್ಕೆ ಉದಾಹರಣೆಯಾಗುತ್ತದಷ್ಟೇ. ಮೋದಿ ಮಾತಿನಲ್ಲಿ ವರದಕ್ಷಿಣೆ ಬೆಂಬಲಿಸುವ ಉದ್ದೇಶವಿರಲಿಲ್ಲ, ಆದರೆ ರೈತರನ್ನು ಉದ್ದೇಶಿಸಿ ಮಾತನಾಡುವಾಗ ಅವರದೇ ಪರಿಭಾಷೆ ಉಪಯೋಗಿಸಿ ಅರ್ಥ ಮಾಡಿಸುವುದು ಅವರಿಗೆ ಅನಿವಾರ್ಯವಾಗಿತ್ತು".

"ನೀರಿನ ಕೊರತೆಯಿಂದಾಗಿ ಅಂತರ್ಜಲ ಮಟ್ಟ ಆದಾಗಲೇ ಪಾತಾಳ ಕಂಡಿದೆ. ಹೀಗಿರುವಾಗ ಹನಿ ನೀರಾವರಿ ಪದ್ಧತಿಯಂತಹುದು ನೀರಿನ ಉಳಿಕೆಗೆ ನೆರವಾಗುತ್ತದೆ. ನೀರಿಗೆ ಆಭರಣದ ಸ್ಥಾನಮಾನ ಕೊಡುವ ಮೂಲಕ ಮೋದಿ ತನ್ನ ಸಂದೇಶವನ್ನು ಪ್ರಯೋಗಾತ್ಮಕವಾಗಿ ಹೆಚ್ಚು ಮನದಟ್ಟಾಗಿಸುವ ಯತ್ನವನ್ನಷ್ಟೇ ಮಾಡಿದರು. ಯಾವಾಗಲೂ ರೈತರ ಹಿತ ಕಾಯಲೆಂದೇ ಇದ್ದೇವೆ ಎನ್ನುವ ಎಡಪಂಥೀಯ ಸಂಘಟನೆಗಳಿಗೆ ಹನಿ ನೀರಾವರಿಯ ಬಗ್ಗೆ ರೈತರು ಸ್ಪಷ್ಟವಾಗಿ ತಿಳಿದುಕೊಳ್ಳುವುದರಿಂದಾಗುವ ಪ್ರಯೋಜನಗಳೇನು ಅಂತ ಅದೇಕೆ ಅರಿವಾಗಲಿಲ್ಲವೋ ತಿಳಿಯದು. ಈ ಪತ್ರಿಕೆ ಮೋದಿ ಬ್ರಾಂಡ್‌ನ ರಾಜಕೀಯವನ್ನು ಮೊದಲಿನಿಂದಲೂ ವಿರೋಧಿಸುತ್ತಾ ಬಂದಿದೆ. ಮುಂದೆಯೂ ಅದನ್ನು ಮುಂದುವರೆಸಲಿದೆ. ಹಾಗಂತ ಒಬ್ಬ ವ್ಯಕ್ತಿಯ ಮೇಲೆ ಕಾರಣಗಳೇ ಇಲ್ಲದೇ ಕಾಲು ಕೆರೆದುಕೊಂಡು ಕದನಕ್ಕಿಳಿಯುವುದರಲ್ಲಿ ಅರ್ಥವಿಲ್ಲ, ಇದು ಮೋದಿ ತುಂಬ ಅರ್ಥಬದ್ಧವಾಗಿ ಮಾತನಾಡಿದ ಅಪರೂಪದ ಘಳಿಗೆ. ಹಾಗೆಯೇ ಸೈದ್ಧಾಂತಿಕ ಅಭಿಪ್ರಾಯ ಭೇದ ತರ್ಕವೇ ಇಲ್ಲದ ವಿವಾದಕ್ಕೆ ಎಡೆ ಮಾಡಿದ ಕ್ಷಣವೂ ಹೌದು".

ಹೀಗೆ ತನ್ನ ಅಭಿಪ್ರಾಯ ನಿರೂಪಿಸಿತು ಸ್ಟೇಟ್ಸ್‌ಮನ್.

ಆದರೆ ಬುದ್ಧಿಜೀವಿ ವಲಯದಲ್ಲಿ ಮೋದಿಯವರನ್ನು ಹೀಗಳೆಯುವುದೇ ಒಂದು ರೀತಿಯ ಶೋಕಿಯಾದಂತಿದೆ. ಫೆಬ್ರವರಿ 6, 2003ರಂದು ಸಿಐಐ ಸಮ್ಮೇಳನ ನಡೆದಾಗ ಅಲ್ಲಿನ ಮುಖ್ಯ ವಿಷಯ ಗುಜರಾತಿನ ಕಾನೂನು ಹಾಗೂ ಸುವ್ಯವಸ್ಥೆಯ ಕುರಿತದ್ದಾಗಿತ್ತು. ಸಿಐಐನ ಹಿರಿಯ ಸದಸ್ಯರಲ್ಲೊಬ್ಬರಾದ ರಾಹುಲ್ ಬಜಾಜ್, "2002 ಗುಜರಾತಿನ ಪಾಲಿಗೆ ಸಲ್ಲದೇ ಇರುವ ವರ್ಷವಾಗಿತ್ತು" ಅಂತ ಮೋದಿಯವರನ್ನು ಕೆಣಕಿದರು. ಅದಕ್ಕೆ ಮೋದಿ ತಮ್ಮ ಎಂದಿನ ಶೈಲಿಯಲ್ಲಿಯೇ ಉತ್ತರ ಕೊಟ್ಟರು. 2002ರ ಏಪ್ರಿಲ್ ಸಿಐಐ ಸಮಾವೇಶದಲ್ಲಿ ಗುಜರಾತಿನ ಗಲಭೆಗಳ ಕುರಿತು ಪ್ರಸ್ತಾಪವಾಗಿದ್ದನ್ನು ಉಲ್ಲೇಖಿಸುತ್ತಾ ಮೋದಿ ಕುಟುಕುತ್ತಾರೆ,





"ಮಿಸ್ಟರ್ ಬಜಾಜ್, ನೀವು ಅಂತಹುದೇ ಇನ್ನೊಂದು ಸಮಾವೇಶ ಆಯೋಜಿಸಿ ನಿಮ್ಮ ಸ್ಯೂಡೋ ಸೆಕ್ಯುಲರ್ ಸ್ನೇಹಿತರನ್ನೆಲ್ಲ ಆಹ್ವಾನಿಸಿ. ಅವರ ಎಲ್ಲಾ ವಿಕೃತ ಟೀಕೆಗಳಿಗೂ ನಾನು ಉತ್ತರ ಕೊಡಬಲ್ಲೆ, ಆದಾದ ನಂತರ ನಾನು ಅಂತಹುದೇ ಸಮಾವೇಶವನ್ನು ಗುಜರಾತಿನ ಜನತೆಯೊಂದಿಗೆ ಆಯೋಜಿಸುತ್ತೇನೆ. ಆಗ ಎಲ್ಲಾ ವಿಷಯಗಳೂ ಸ್ಪಷ್ಟವಾಗುತ್ತವೆ" ಎಂದ ಮೋದಿ ಅಲ್ಲಿಗೇ ನಿಲ್ಲಲಿಲ್ಲ. 'ನಾನು ಮುಖ್ಯಮಂತ್ರಿಯಾದೊಡನೆ ಸಿಐಐ ಜನರು ನನ್ನ ಬಳಿಗೆ ಬಂದರು. ನಾನು ಪ್ರತಿಸ್ಪಂದಿಸಿದೆ. ಇದೇ ವಿಷಯಗಳು ಚರ್ಚೆಯಾದವು. ಬೇರೆಯವರಿಗೆ ಹಾಗೆ ಮಾಡುವುದರಲ್ಲಿ ಅವರದೇ ಆದ ರಾಜಕೀಯ ಲೆಕ್ಕಾಚಾರಗಳಿವೆ. ಆದರೆ ನಿಮಗೇನಿದೆ ಬಜಾಜ್?' ಹಾಗೆ ನೇರಾನೇರ ಪ್ರಶ್ನಿಸಿದ ಮೋದಿ, 'ಹೀಗೆಲ್ಲ ಬೇಡದ್ದಕ್ಕೆ ತಲೆ ಹಾಳು ಮಾಡಿಕೊಳ್ಳುವುದರ ಬದಲು ರಾಜ್ಯದ ಬೆಳವಣಿಗೆ ದೃಷ್ಟಿಯಿಂದ ಏನಾದರು ಮಾಡಲಿಕ್ಕಾಗುತ್ತದಾ ಅಂತ ಯೋಚಿಸಿ' ಅಂದು ಬಿಟ್ಟರು. 2010ರ ವೇಳೆಗೆ ರಾಜ್ಯದ ಮೂಲಭೂತ ಸೌಕರ್ಯಗಳು ಯಾವ ಮಟ್ಟವನ್ನು ತಲುಪಲಿವೆ ಎಂಬ ನಕ್ಷೆ ಅವತ್ತೇ ತೆಗೆದಿರಿಸಿದರು. ಕೈಯಲ್ಲಿರುವ 383 ಯೋಜನೆಗಳು, ಹಾಗೆಯೇ 1,16,993 ಕೋಟಿ ರೂ.ಗಳ ಅನಿಲ ಸ್ಥಾವರ ಯೋಜನೆಯೆಂಬ ಬಹುಮುಖ್ಯ ಕನಸನ್ನು ಹಂಚಿಕೊಂಡರು.

ಮೋದಿ ನಿಲುವು ಅದ್ಯಾವ ಪಾಟ ಬಿಗಿಯಾಗಿತ್ತೆಂದರೆ, ಸಿಐಐನ ನಿರ್ದೇಶಕ ತರುಣ್ ದಾಸ್‌ಗೆ ಮೋದಿಯೆದುರು ಕ್ಷಮೆಯಾಚಿಸಬೇಕು ಅಂತನಿಸಿಬಿಟ್ಟಿತು. ಅದಕ್ಕೆಂದೇ ಅಹಮದಾಬಾದಿಗೆ ಭೇಟಿಯಿತ್ತರು ತರುಣ್ ದಾಸ್. ಅವರು ಮೋದಿಗೆ ಹೇಳಿದರು, 'ಅದು ತಪ್ಪು ತಿಳುವಳಿಕೆಯಿಂದಾಗಿದ್ದೋ, ತಪ್ಪಾದ ಸಂವಹನದಿಂದಾದದ್ದೋ, ಒಟ್ಟಿನಲ್ಲಿ ಬುದ್ಧಿಪೂರ್ವಕವಾದುದ್ದಾಗಿರಲಿಲ್ಲ, ನಮಗೀಗ ವಾತಾವರಣವನ್ನು ತಿಳಿಗೊಳಿಸುವ ಅಗತ್ಯ ಎದ್ದುಕಾಣುತ್ತಿದೆ. ಗುಜರಾತಿನ ಜನರನ್ನಾಗಲೀ, ಇನ್ಯಾರನ್ನೇ ಆಗಲೀ ನೋಯಿಸಬೇಕು ಅಂತ ಉದ್ದೇಶವಿರಿಸಿಕೊಂಡು ಮಾಡಿದ ಚರ್ಚೆ ಅದಾಗಿರಲಿಲ್ಲ, ಅದನ್ನು ಹೇಳಲೆಂದೇ ನಾನು ಅಹಮದಾಬಾದಿನಲ್ಲಿದ್ದೇನೆ. ನನ್ನಿಂದೇನಾದರೂ ತಪ್ಪಾಗಿದ್ದರೆ ಕ್ಷಮಿಸಿಬಿಡಿ. ಐ ಆಮ್ ಸಾರಿ...' ಎಂದರು.

ಆರೋಪಗಳಿಗೆ ಎದೆಯೊಡ್ಡುತ್ತಲೇ ಬಂದ ಮೋದಿ ಕ್ಷಮಿಸುವ ಗುಣ ಮರೆತಿರಲಿಲ್ಲ,

ಅದು ದಿಲ್ಲಿಯಲ್ಲಿ ನಡೆದ ಬಯೋ-ಇನ್‌ಫಾರ್ಮೆಟಿಕ್ ಹಾಗೂ ಕಾಂಟ್ರಾಕ್ಟ್ ರಿಸರ್ಚ್‌ಗೆ ಸಂಬಂಧಿಸಿದಂತೆ ಅಂತಾರಾಷ್ಟ್ರೀಯ ಮಟ್ಟದ ಒಂದು ವಿಚಾರ ಸಂಕಿರ್ಣ. ಅದರಲ್ಲಿ ಮೋದಿಯವರನ್ನು ಉದ್ಘಾಟನಾ ಭಾಷಣಕ್ಕೆ ಕರೆದಿದ್ದರು. ರೈತರಿಗೆ ಹನಿ ನೀರಾವರಿ ಕುರಿತು ಮನದಟ್ಟು ಮಾಡಿಸುವ ರೀತಿಯಲ್ಲೇ ವಿಜ್ಞಾನದ ಕುರಿತು ಮಾತನಾಡುವ

ತಾಕತ್ತು ಮೋದಿಯದು. 'ಭಾರತ ಮಾಹಿತಿ ತಂತ್ರಜ್ಞಾನದಲ್ಲಿ ಮಾಡಿರುವ ಸಾಧನೆಯನ್ನೇ ಜೀವಶಾಸ್ತ್ರ ಹಾಗೂ ರಸಾಯನ ಶಾಸ್ತ್ರಗಳಿಗೂ ವಿಸ್ತರಿಸಬೇಕು. ಬಯೋ-ಇನ್‌ಫಾರ್ಮೆಟಿಕ್‌ಗೆ ಸಂಬಂಧಿಸಿದಂತೆ ಜಾಗತಿಕ ಮಾರುಕಟ್ಟೆಯಲ್ಲಿ ಅಂದಾಜು 10 ಬಿಲಿಯನ್ ಡಾಲರ್‌ಗಳ ಬೇಡಿಕೆಯಿದೆ. ಈ ವಿಷಯದಲ್ಲಿ ನಮ್ಮದೇ ಪ್ರಭುತ್ವ ಸ್ಥಾಪಿಸುವ ನಿಟ್ಟಿನಲ್ಲಿ ಭಾರತ ಬೆಳೆದು ನಿಲ್ಲಬೇಕು.' ಮುಂದುವರೆದು ಬಯೋಟೆಕ್ನಾಲಜಿಯಲ್ಲಿ ಬಂಡವಾಳ ಹೂಡಬೇಕಾದರೆ ಗಮನದಲ್ಲಿರಬೇಕಾದ ಐದು ಕ್ಷೇತ್ರಗಳನ್ನು ಮೋದಿ ಹೆಸರಿಸಿದರು. ಫಾರ್ಮಾಸ್ಯೂಟಿಕಲ್, ಕೃಷಿ ಜೀವವಿಜ್ಞಾನ, ಕೈಗಾರಿಕಾ ಜೀವ ವಿಜ್ಞಾನ ಹಾಗೆಯೇ ಇದೀಗ ಪ್ರವರ್ಧಮಾನಕ್ಕೆ ಬರುತ್ತಿರುವ ಪರಿಸರ ಜೀವವಿಜ್ಞಾನ ಹಾಗೂ ಸಮುದ್ರ ಜೀವವಿಜ್ಞಾನ ಇವುಗಳ ಪಟ್ಟಿ ನೀಡಿದರು ಮೋದಿ. ಕೊನೆಯ ಎರಡು ವಿಭಾಗಗಳಲ್ಲಿ ಬಂಡವಾಳ ಹೂಡುವುದಾದರೆ ಗುಜರಾತ್ ಸೂಕ್ತ ಸ್ಥಳ. ಅತಿಹೆಚ್ಚಿನ ತೀರ ಪ್ರದೇಶ ಹೊಂದಿರುವ ರಾಜ್ಯವಿದು ಎಂಬ ಮಾಹಿತಿಯನ್ನೂ ಜತೆಗಿರಿಸಿದರು. ಶೇಕಡ 40ರಷ್ಟು ಫಾರ್ಮಾ ಉತ್ಪನ್ನಗಳು ಗುಜರಾತಿನಲ್ಲಿ ಉತ್ಪಾದನೆಯಾಗುತ್ತವೆ ಎಂದ ಮೋದಿ, ಕಾಂಟ್ರಾಕ್ಟ್ ರಿಸರ್ಚ್ ವಿಭಾಗದಲ್ಲಿ ರಾಜ್ಯಕ್ಕಿರುವ ಸಂಪನ್ಮೂಲಗಳನ್ನು ವಿವರಿಸಿದರು. ಗುಜರಾತಿಗೆ ಬನ್ನಿ, ಬೇಕಾದ ಸೌಕರ್ಯ ನಾನು ನೀಡುತ್ತೇನೆ ಎಂಬ ಭರವಸೆಯೂ ಅಲ್ಲಿಯೇ ಸಿಕ್ಕಿತು.

ನರೇಂದ್ರ ಮೋದಿ ಯಾವ ಸಮಾರಂಭದಲ್ಲೇ ಭಾಗವಹಿಸಲಿ, ಅಲ್ಲಿ ಗುಜರಾತಿನ ಹಿತದ ಕುರಿತಾದ ಚಿಂತನೆಯಿರುತ್ತಿತ್ತು. ತನ್ನ ರಾಜ್ಯ ಗುಜರಾತಿನ ಕುರಿತು ಯೋಚಿಸಿದಂತೆಯೇ ಭಾರತದ ಕುರಿತಾಗಿಯೂ ಕಾಳಜಿಯ ದೃಷ್ಟಿಕೋನವಿತ್ತು. ಮಾರ್ಚ್ 2ರಂದು 'ಇಂಡಿಯಾ ಟುಡೆ'ಯ ವಿಚಾರ ಸಂಕಿರಣಕ್ಕೆ ಅವರನ್ನು ಆಹ್ವಾನಿಸಲಾಗಿತ್ತು. ಭಾರತದ ರಾಜ್ಯಗಳು ಒಗ್ಗಟ್ಟಾಗಿದ್ದುಕೊಂಡು ಹಿತಾಸಕ್ತಿ ಸಾಧಿಸುವುದು ಹೇಗೆ? ಎಂಬುದು ಚರ್ಚೆಯ ವಿಷಯವಾಗಿತ್ತು. ಅಲ್ಲಿ ಮೋದಿ ಉದಾಹರಿಸಿದ್ದು ಕೊಂಕಣ ರೈಲ್ವೆ ಯೋಜನೆಯನ್ನು.'ಭಾರತೀಯ ರೈಲ್ವೆಯ ಈ ಯೋಜನೆಯಲ್ಲಿ ನಾಲ್ಕು ರಾಜ್ಯಗಳು ಶಾಮೀಲಾಗಿದ್ದವು. ಮಹಾರಾಷ್ಟ್ರ, ಕರ್ನಾಟಕ, ಗೋವಾ ಹಾಗೂ ಕೇರಳ. ಕಾಲವ್ಯಯ ಹಾಗೂ ಅಧಿಕ ವೆಚ್ಚಗಳಾಗದಂತೆ ರಾಜ್ಯಗಳು ಒಟ್ಟಾಗಿ ದುಡಿಯುವ ಮಾದರಿ ಹೀಗಿರಬೇಕು. ಇಂತಹದೊಂದು ಸಾಧ್ಯವಾಗಬೇಕಾದರೆ ಅಲ್ಲಿ ಬಳಸಿರುವ ಸಂಘಟನಾ ಕೌಶಲ್ಯಗಳೇನು ಅನ್ನುವುದನ್ನು ನಾವು ಅರ್ಥ ಮಾಡಿಕೊಳ್ಳಬೇಕು. 'ಪೀಪಲ್ಸ್ ವಾರ್ ಗ್ರೂಪ್'ನ ಉಪಟಳ ಕಡಿಮೆ ಆಗಬೇಕು ಅಂತಾದರೆ ಆಂಧ್ರಪ್ರದೇಶ, ಮಧ್ಯಪ್ರದೇಶ, ಛತ್ತೀಸ್‌ಘಡ, ಮಹಾರಾಷ್ಟ್ರ ಮತ್ತು ಬಿಹಾರಗಳು ಒಟ್ಟಾಗಿ ಹೆಜ್ಜೆ ಹಾಕಬೇಕು. ಭಾರತದ ಸಮಸ್ಯೆ ಅಂದರೆ ಅದರ





ನೇತ್ಯಾತ್ಮಕ ಮನೋಭಾವದ್ದು. ನಮ್ಮ ನಡುವಿನ ವ್ಯತ್ಯಾಸಗಳನ್ನು ಹಾಗೂ ಅಹಂಗಳನ್ನು ಬದಿಗಿರಿಸಿ ನಮ್ಮೊಳಗಿರುವ ಅಸಾಮಾನ್ಯ ಸಾಮರ್ಥ್ಯ ಹಾಗೂ ಕ್ರಿಯಾಶೀಲ ಗುಣಗಳ ಕುರಿತಾಗಿ ಅಭಿಮಾನ ತಾಳಿ, ನಾವು ಮಾನವ ಇತಿಹಾಸದಲ್ಲೇ ಅತ್ಯಂತ ಉತ್ಕೃಷ್ಟವಾದ ನಾಗರಿಕತೆಯೊಂದನ್ನು ಪ್ರತಿನಿಧಿಸುತ್ತಿದ್ದೇವೆ ಎಂಬ ಹೆಮ್ಮೆಯಲ್ಲಿ ಒಟ್ಟಾಗಿ ಹೆಜ್ಜೆ ಹಾಕಬೇಕು' ಎಂದ ಮೋದಿ ಮಾತಿನಲ್ಲಿ ಧೃಢತೆಯಿತ್ತು.

ಜನ ಒಟ್ಟಾಗಿ ಸ್ವಾಭಿಮಾನದ ಹೆಜ್ಜೆಗಳನ್ನಿಟ್ಟರೆ ಯಶಸ್ಸಿನತ್ತ ಹೇಗೆ ಪಯಣಿಸಬಹುದೆಂಬುದಕ್ಕೆ ತಮ್ಮದೇ ರಾಜ್ಯದ ಉದಾಹರಣೆ ನೀಡುತ್ತಾರೆ ಮೋದಿ.

'ಕಳೆದ ನಾಲ್ಕು ವರ್ಷಗಳಲ್ಲಿ 20,000 ಚೆಕ್‌ಡ್ಯಾಮ್‌ಗಳು ನಿರ್ಮಾಣವಾಗಿವೆ. ಇವೆಲ್ಲವೂ ಜನರ ಉತ್ಸುಕತೆಯಿಂದಾದವುಗಳು. 700 ಕಿಲೋಮೀಟರ್‌ಗಳ ನೀರಿನ ಪೈಪು ಹಾಕಿದೆವು. ಒಂದು ಕಾರು ಒಳಗೆ ಹೋಗಬಹುದಾದಷ್ಟು ಗಾತ್ರದ ಪೈಪು ಅದು. ಅದಕ್ಕೆ ತಗುಲಿದ್ದು ಕೇವಲ 500 ದಿನಗಳು. ಅದೊಂದು ದಾಖಲೆ. ಗುಜರಾತಿನ ಅತಿದೊಡ್ಡ ಸಾಧನೆ ಅಂದರೆ ಜನವರಿ 26, 2001ರಂದು ಭೀಕರವಾದ ಭೂಕಂಪ ಸಂಭವಿಸಿದ ಬಳಿಕ ಕೈಗೊಂಡ ಪುನರ್ವಸತಿ ಕಾರ್ಯಗಳು. ಆಡಳಿತ ಯಂತ್ರ ವಿಕೋಪಗಳಿಗೆ ಎದೆಯೊಡ್ಡಿ ಸೆಣಸಿದ ಅದೆಷ್ಟೋ ಉದಾಹರಣೆಗಳು ಇವೆ. ಇವು, ಎಲ್ಲವನ್ನೂ ಕಳೆದುಕೊಂಡ ಕ್ಷಣದಲ್ಲೂ ಐಕ್ಯತೆ ಬಿಟ್ಟುಕೊಡದೇ ಮೆರೆದ ಸಾಮಾನ್ಯ ಜನತೆಯ ಉದಾಹರಣೆಗಳೂ ಆಗಿವೆ. 'ನಿಮಗೆ ಹೇಳಿದರೆ ಆಶ್ಚರ್ಯವೆನಿಸಬಹುದು. ಸಾಮಾನ್ಯ ಜನತೆ ಆ ವಿಕೋಪದಲ್ಲಿ ಎಲ್ಲವನ್ನೂ ಕಳೆದುಕೊಂಡರು. ಆ ಸಮಯದಲ್ಲೂ ಅವರೆಲ್ಲ ಒಂದಾಗಿ ಬಿದ್ದುಹೋದ ಶಾಲಾ ಕಟ್ಟಡವನ್ನು ಮತ್ತೆ ಕಟ್ಟುವ ಕಾರ್ಯದಲ್ಲಿ ಮಗ್ನರಾಗಿದ್ದರು! ಹಾಗೆ ಮಾಡುವುದು ಒಂದು ಸಾಮಾಜಿಕ ಕರ್ತವ್ಯ ಎಂದೇ ಅವರೆಲ್ಲ ಭಾವಿಸಿದ್ದರು. ಈ ರೀತಿಯ ಕೆಲಸಗಳಿಂದ ಅವರೆಲ್ಲ ರಾಜ್ಯದ ಬೊಕ್ಕಸಕ್ಕೆ ಸಾವಿರಾರು ಕೋಟಿ ಹೊರೆಯಾಗುವುದನ್ನು ತಪ್ಪಿಸಿದರು. ಯಾರದು, ಅವರೆಲ್ಲ ಇವತ್ತು ನೈತಿಕ ಅಧಃಪತನಕ್ಕಿಳಿದುಬಿಟ್ಟಿದ್ದಾರೆ ಅಂತ ದೂರುವವರು? ಬರೀ ಒಬ್ಬಿಬ್ಬರಲ್ಲ, ತನ್ನ ಸರ್ವಸ್ವವನ್ನೂ ಕಳೆದುಕೊಂಡಿದ್ದರೂ ಇಡೀ ಸಮುದಾಯವೇ ಅಂತಹುದೊಂದು ಆದರ್ಶದ ಪರಾಕಾಷ್ಠೆಯನ್ನು ಮೆರೆಯಿತು. ಈಗ ಹೇಳಿ ಇಂತಹಾ ಒಂದು ಮಹಾನ್ ರಾಷ್ಟ್ರಕ್ಕೆ ಸೇರಿದವರು ನಾವು ಅಂತ ಹೆಮ್ಮೆಪಡುವುದು ಬೇಡವಾ? ಪ್ರತಿ ರಾಜ್ಯಕ್ಕೂ ಇಂತಹುದೊಂದು ಅಂತಃಶಕ್ತಿಯಿದೆ. ಅದನ್ನು ನಾವು ಉತ್ತೇಜಿಸುವ ಕೆಲಸ ಮಾಡಬೇಕಷ್ಟೇ. ಈ ಸಾಮರ್ಥ್ಯವನ್ನು ಗುರುತಿಸಿ ಅದನ್ನು ಸಂಘಟಿಸಿ ಉತ್ತಮ ಫಲ ಕೊಡುವ ಕೆಲಸಗಳಲ್ಲಿ ಅದನ್ನು ನಿಯೋಜಿಸಬೇಕಷ್ಟೆ. ಇದು ಮೋದಿ ದೃಷ್ಟಿಕೋನದ ಹರವು.





# 33
# ಕೊಚ್ಚೆಯಿಂದ ಕೊಚ್ಚೆಗೆ ಹಾರಿ ರೋಗ ಹರಡುವ ನೊಣಗಳಾಗಬೇಡಿ!

'ಫೆಡರೇಷನ್ ಆಫ್ ಇಂಡಿಯನ್ ಚೇಂಬರ್ ಆಫ್ ಕಾಮರ್ಸ್ ಆ್ಯಂಡ್ ಇಂಡಸ್ಟ್ರಿ' (ಎಫ್ಐಸಿಸಿಐ) ಗುಜರಾತಿಗೆ, 'ವೈಬ್ರಂಟ್ ಗುಜರಾತ್' ಯೋಜನೆಗೆ ಆಭಾರಿ. ಸಿಐಐ ಕೂಡ ಇದರೊಟ್ಟಿಗೆ ಕೂಡಿಕೊಂಡಿತು. ನವರಾತ್ರಿಯ ವೇಳೆಗೆ ಬಂಡವಾಳದಾರರ ಸಮಾವೇಶ ನಡೆಯಿತು. 'ತಾನೇಕೆ ಹಿಂದುಳಿಯಲಿ' ಅಂತ ಉತ್ಸುಕತೆ ತೋರಿದ ಸಿಐಐ ಯುರೋಪಿನ ವ್ಯಾಪಾರಿ ಒಕ್ಕೂಟ ಹಾಗೂ ನರೇಂದ್ರ ಮೋದಿಯವರ ನಡುವೆ ಸಂವಾದವೊಂದನ್ನು ಏರ್ಪಡಿಸಲು ಮುಂದಾಯಿತು. ಜ್ಯುರಿಚ್ ಹಾಗೂ ಜಿನೇವಾಗಳ ವಿಶ್ವ ಆರ್ಥಿಕ ವೇದಿಕೆ ಈ ಕಾರ್ಯಕ್ರಮಕ್ಕೆ ಸಹಯೋಗ ಒದಗಿಸಿತು. ಆಗಸ್ಟ್ 21, 22ರಂದು ಈ ಕಾರ್ಯಕ್ರಮ ನೆರವೇರಿತು. ಮೋದಿ ಲಂಡನ್‌ಗೆ ಭೇಟಿ ಕೊಡುವ ಆಲೋಚನೆಯಿತ್ತು. ಅದಕ್ಕೂ ಮೊದಲು ಮೋದಿ ಮೋಡಿಯನ್ನು ಬಳಸಿಕೊಂಡು ಯುರೋಪಿಯನ್ ಯೂನಿಯನ್‌ಗಳ ದೃಷ್ಟಿಯಲ್ಲಿ ಗುಜರಾತನ್ನು ವೈಭವಯುತವಾಗಿ ಪ್ರಕಟಪಡಿಸುವ ಇರಾದೆ ಸಿಐಐನದಾಗಿತ್ತು.

ಆದರೆ ಮೋದಿಯ ಲಂಡನ್ ಭೇಟಿ ಶುಭಪ್ರದ ಆರಂಭವಾಗಲೇ ಇಲ್ಲ.

ಗುಜರಾತನ್ನು ಅಂತಾರಾಷ್ಟ್ರೀಯವಾಗಿ ಪ್ರವಾಸಿಗರು ಹಾಗೂ ವ್ಯಾಪಾರಿಗಳನ್ನು ಆಕರ್ಷಿಸುವ ತಾಣವಾಗಿ ಮಾರ್ಪಡಿಸಬೇಕೆಂಬ ಕನಸು ಹೊತ್ತು ಅಲ್ಲಿಗೆ ತೆರಳಿದ್ದ ಮೋದಿಗೆ ಸಿಕ್ಕಿದ್ದು ನೀರಸ ಪ್ರತಿಕ್ರಿಯೆ. ಮೋದಿ ಭೇಟಿಯಿಂದ ತನ್ನನ್ನು ದೂರವಿರಿಸಿಕೊಳ್ಳುವ ಪ್ರಯತ್ನ ಸರಕಾರದ್ದಾಗಿತ್ತು. ಅಲ್ಲಿನ ಗೃಹ ಕಚೇರಿ ಹೇಳಿಕೆ ನೀಡಿತು, 'ಮೋದಿ ಬ್ರಿಟನ್‌ಗೆ ಭೇಟಿ ನೀಡುತ್ತಿರುವ ವಿಷಯ ನಮಗೆ ತಿಳಿದಿದೆ. ಆದಾಗ್ಯೂ ಸರಕಾರದ ಆಹ್ವಾನದ ಮೇರೆಗೆ ಅವರಿಲ್ಲಿಗೆ ಬರುತ್ತಿಲ್ಲ, ಹಾಗಾಗಿ ರಾಣಿಯನ್ನೂ ಭೇಟಿ ಮಾಡುತ್ತಿಲ್ಲ, ಅವರ ಮೇಲಿನ ಆರೋಪಗಳು ನಮ್ಮ ಅರಿವಿಗೆ ಬಂದಿವೆ. ಆಷ್ಟಾಗಿ ನಮಗೆ ವೀಸಾ ಕೊಡಲಾರೆವು ಅಂತ

ಹೇಳುವುದಕ್ಕೆ ಅಗತ್ಯವಾದ ಯಾವ ಅಂಶಗಳು ಸಿಗಲಿಲ್ಲ'.

ವಿದೇಶಾಂಗ ಕಚೇರಿ ಸಹ ಇದೇ ನಿಲುವನ್ನು ತಳೆದಿತು!

'ಗುಜರಾತ್ ಹಿಂಸೆಯ ಸಂದರ್ಭದಲ್ಲಿ ಅಲ್ಲಿನ ರಾಜ್ಯ ಸರಕಾರ ಮಾಡಬೇಕಾದ್ದನ್ನು ಮಾಡಲಿಲ್ಲ ಎಂದು ಹೇಳುತ್ತಿರುವ ವರದಿಗಳ ಬಗ್ಗೆ ನಮಗೂ ಕಾಳಜಿಯಿದೆ' ಎಂದಿತು. ಆದರೇನಂತೆ, ಮೋದಿ ತಮ್ಮ ಪಾಡಿಗೆ ತಾವು ವೆಂಬ್ಲಿಯಲ್ಲಿ ಜನರನ್ನುದ್ದೇಶಿಸಿ ಭಾಷಣಕ್ಕಿಳಿದರು. ಗುಜರಾತಿಗಳು ಹೆಚ್ಚಾಗಿ ಹೋಗಿ ನೆಲೆ ನಿಂತಿರುವ ಪ್ರದೇಶವದು. 2500 ಜನರ ಸಾಮರ್ಥ್ಯದ ಹಾಲ್ ನಿಲ್ಲಲೂ ಜಾಗವಿಲ್ಲದಂತೆ ತುಂಬಿತ್ತು. ಸರಕಾರ ಅವರನ್ನು ಅವಮಾನಿಸಲು ಪ್ರಯತ್ನಿಸಿದರೇನಾಯಿತು, ಜನರ ಮುಖದಲ್ಲಿ ಮಾತ್ರ ಅತ್ಯಾದರದ, ಅಭಿಮಾನದ ಭಾವವಿತ್ತು. 70 ನಿಮಿಷಗಳ ಭಾಷಣದಲ್ಲಿ ಕಡಿಮೆಯೆಂದರೂ ಮೋದಿ ಮಾತಿಗೆ ಮೂರು ಸಲ ಎದ್ದುನಿಂತು ಗೌರವ ಸಲ್ಲಿಸಿದ್ದರು ಜನ. ಅತ್ತ ಸಭಾಂಗಣದ ಹೊರಗೆ ಮುಸ್ಲಿಂ ಪ್ರತಿಭಟನೆಗಾರರು 'ಕೊಲೆಗಾರ ಮೋದಿಗೆ ಧಿಕ್ಕಾರ' ಅಂತ ಪ್ರತಿಭಟನೆಗಿಳಿದಿದ್ದರು. ಇತ್ತ ಮೋದಿ ಯಾವುದೇ ಅಳುಕಿಲ್ಲದೇ ಪಾಕಿಸ್ತಾನದ ಭಯೋತ್ಪಾದನೆ ಬಗ್ಗೆ, ಪರದೆ ಹಿಂದೆ ನಿಂತು ಅದು ಆಡುತ್ತಿರುವ ಆಟಗಳ ಬಗ್ಗೆ ಎಚ್ಚರಿಸುತ್ತಾ ಸವಿವರವಾಗಿ ಮಾತನಾಡುತ್ತಿದ್ದರು. ಗುಜರಾತಿಗಳಿಂದ ಬಂದ ಆ ಮಟ್ಟದ ಪ್ರತಿಕ್ರಿಯೆಯನ್ನು ಅರ್ಥೈಸಿಕೊಳ್ಳಲಾಗದ 'ಗಾರ್ಡಿಯನ್' ಪತ್ರಿಕೆ ಇಡೀ ಮುಖಪುಟವನ್ನೇ ಮೋದಿಯನ್ನು ಹೀಗಳೆಯಲು ಬಳಸಿಕೊಂಡಿತು. '2000 ಮುಸ್ಲಿಮರನ್ನು ಕೊಂದ ಆರೋಪ ಹೊತ್ತಿರುವ ಮನುಷ್ಯ ವೆಂಬ್ಲಿಯಲ್ಲೇಕಿದ್ದಾನೆ?' ಅಂತ ತಲೆಬರಹ ಕೊಟ್ಟಿತು. ಮೋದಿ ಆಧುನಿಕ ಭಾರತದ ರಾಜಕಾರಣದ ಅತ್ಯಂತ ವಿವಾದಾತ್ಮಕ ವ್ಯಕ್ತಿ ಅಂತ ಬರೆದ ಪತ್ರಿಕೆ ಅವರನ್ನು ಅಡಾಲ್ಫ್ ಹಿಟ್ಲರ್‌ನಂಥವರಿಗೆ ಹೋಲಿಸಲಾಗುತ್ತದೆ ಅಂತಲೂ ಅಭಿಪ್ರಾಯ ಬರೆಯಿತು.

ಇಂತಹ 'ಗಾರ್ಡಿಯನ್'ಗೆ ಬ್ರಿಟಿಷರು ತಮ್ಮ ಆಡಳಿತಾವಧಿ ಕಾಲದಲ್ಲಿ ಎಷ್ಟು ಜನರ ಸಾವಿಗೆ ಕಾರಣರಾಗಿದ್ದರು ಎಂಬುದು ಮಾತ್ರ ಮರೆತು ಹೋದಂತಿತ್ತು.

ಬಂಗಾಳದಲ್ಲಿ ನೆರೆ ಬಂದಾಗ ನೆರವೇ ಇಲ್ಲದೇ ಐದು ಮಿಲಿಯನ್ ಜನ ಹಸಿವಿನಿಂದಲೇ ಸತ್ತು ಹೋಗಿದ್ದರು. ಮೋದಿ ಮಾತನಾಡುತ್ತ ಸರಿಯಾಗಿಯೇ ಹೇಳಿದ್ದರು. 'ನಮಗಿಷ್ಟವಿರಲಿ, ಇಲ್ಲದಿರಲಿ. ಭಯೋತ್ಪಾದಕರು ಜಗತ್ತನ್ನು ಎರಡು ಭಾಗ ಮಾಡಿದ್ದಾರೆ. ಒಂದು ಇಂಡಿಯಾ. ಇನ್ನೊಂದು ಪಾಕಿಸ್ತಾನ.' ಬ್ರಿಟನ್ ಇದರಲ್ಲಿ ಯಾವ ಕಡೆ ಇದೆ ಎಂದು ಮೋದಿ ಬಾಯ್ಬಿಟ್ಟು ಹೇಳದಿದ್ದರೂ ಸರಿಯಾಗಿಯೇ ಕುಟುಕಿದ್ದರು. ಮರುದಿನ ಮೋದಿ ಅಲ್ಲಿನ ಸ್ಥಳೀಯ ಗುಜರಾತಿ ಪತ್ರಿಕೆ 'ಗುಜರಾತ್ ಸಮಾಚಾರ'ದ ಶಕ್ತಿ ಸಭಾಂಗಣವನ್ನು ಉದ್ಘಾಟಿಸಿದರು.





ಮಾಧ್ಯಮಗಳ ಕುರಿತಾಗಿ ಅಲ್ಲಿ ಮಾತು ಬಂತು. ಮೋದಿ ತಮ್ಮದೇ ಶೈಲಿಯಲ್ಲಿ ಹೇಳಿದರು, 'ನನ್ನ ಪತ್ರಕರ್ತ ಮಿತ್ರರು ಅರ್ಥ ಮಾಡಿಕೊಳ್ಳಬೇಕು. ಜಗತ್ತು ಬರಿ ಕೊಚ್ಚೆ ಕೊಳಚೆಗಳಿಂದ ಕೂಡಿಲ್ಲ, ಹೂ ಮತ್ತು ಹೂಗುಚ್ಛಗಳೂ ಇಲ್ಲಿವೆ. ಅವು ಬದುಕಿನ ಸಕಾರಾತ್ಮಕ ಮುಖವನ್ನು ಬಿಂಬಿಸುತ್ತವೆ. ಪತ್ರಕರ್ತರಾದವರು ಕೊಚ್ಚೆಯಿಂದ ಕೊಚ್ಚೆಗೆ ಹಾರಿ ರೋಗ ಹರಡುವ ನೊಣಗಳಾಗಬಾರದು. ಬದಲಿಗೆ ಹೂವಿನಿಂದ ಹೂವಿಗೆ ಹಾರುವ ಜೇನ್ನೊಣಗಳಾಗಬೇಕು. ಮಧುವನ್ನು ಸಂಗ್ರಹಿಸಬೇಕು, ಅಷ್ಟೇ ಅಲ್ಲ , ಪರಿಸ್ಥಿತಿ ಬಿಗಡಾಯಿಸಿದಾಗ ಕುಟುಕಲೂ ಬರಬೇಕು!' 'ಗಾರ್ಡಿಯನ್'ಗೆ ಅಲ್ಲಿಯೇ ತಿರುಗೇಟು ನೀಡಿದ ಮೋದಿ, ಬುದ್ಧ ಹಾಗೂ ಮಹಾತ್ಮ ಗಾಂಧಿಯಂತವರಿಗೆ ಜನ್ಮ ನೀಡಿದ ದೇಶದಲ್ಲಿ ಹಿಟ್ಲರ್ ಹುಟ್ಟಲಾರ ಅಂದರು.

ಅಷ್ಟೆಲ್ಲ ಆಗಿ ಬ್ರಿಟನ್‌ನಿಂದ ಮೋದಿ ಹಿಂತಿರುಗುವಾಗ ಅವರ ಕೈಯಲ್ಲೇನಿತ್ತು ಗೊತ್ತಾ?

ಬೂದಿ ಕುಡಿಕೆ! ಅದು ಗುಜರಾತಿನ ದೇಶಭಕ್ತ ಶ್ಯಾಮಕೃಷ್ಣ ವರ್ಮಾರದ್ದು. ಅವರು 1930ರಲ್ಲಿ ಸ್ವಿಜರ್‌ಲ್ಯಾಂಡ್‌ನಲ್ಲಿ ಮರಣ ಹೊಂದಿದ್ದರು. 'ಅವರ ಕೊನೆಯ ಆಸೆ ತಮ್ಮ ಅಸ್ಥಿ ಭಾರತ ಸ್ವತಂತ್ರಗೊಂಡೊಡನೆ ಈ ಭೂಮಿಗೆ ಬರಬೇಕೆಂಬುದಾಗಿತ್ತು. ಆದರೆ ವಿಷಾದವೆಂದರೆ ಸ್ವಾತಂತ್ರ್ಯ ಬಂದು 50 ವರ್ಷಗಳೇ ಉರುಳಿದ್ದರೂ ಈ ಆಸೆ ಈಡೇರದೇ ಉಳಿದಿತ್ತು. ನಾನು ಮುಖ್ಯಮಂತ್ರಿಯಾಗುತ್ತಲೇ ನಾನೇ ಈ ಕೆಲಸ ಪೂರೈಸಬೇಕೆಂದುಕೊಂಡೆ. ಇದೊಂದು ಮಹತ್ವದ ಜವಾಬ್ದಾರಿ. ಏಕೆಂದರೆ ವ್ಯಕ್ತಿ ಗುಜರಾತಿನ ಮಣ್ಣಿಗೆ ಸೇರಿದಾತ' ಎಂದು ಅಭಿಮಾನದಿಂದ ನುಡಿದಿದ್ದರು ಮೋದಿ!

**ಹರೇನ್ ಪಂಡ್ಯಾ ಹತ್ಯೆ:**

ಹೀಗೆ ಗುಜರಾತಿನ ಜನಜೀವನ ಸಾಂಗವಾಗಿ ಸಾಗುತ್ತಿದೆ ಎನ್ನುವಾಗಲೇ ಮತ್ತೊಂದು ಆಘಾತ ಬಂದೆರಗಿತು. 2003, ಮಾರ್ಚ್ 26ರಂದು ಮನೆಯಿಂದ ಕೆಲವೇ ಕಿಲೋಮೀಟರ್‌ಗಳ ದೂರದಲ್ಲಿ ಗುಜರಾತಿನ ಮಾಜಿ ಗೃಹ ಮಂತ್ರಿ ಹರೇನ್ ಪಂಡ್ಯಾ ಕೊಲೆಯಾಗಿ ಹೋಗಿದ್ದರು. 43ರ ಹರೆಯದ ಪಂಡ್ಯಾಗೆ ತುಂಬ ಹತ್ತಿರದಿಂದ ಎದೆ, ಕುತ್ತಿಗೆ ಹಾಗೂ ಕಿಬ್ಬೊಟ್ಟೆಗಳಿಗೆ ಐದು ಗುಂಡುಗಳನ್ನು ನುಗ್ಗಿಸಿ ಕೊಲೆ ಮಾಡಲಾಗಿತ್ತು. ಆಸ್ಪತ್ರೆ ಹಾದಿಯಲ್ಲೇ ಅವರು ಕೊನೆಯುಸಿರೆಳೆದಿದ್ದರು. ಅದರ ಬೆನ್ನ ಹಿಂದೆಯೇ ಪಂಡ್ಯಾರ ಹಿಂಬಾಲಕರು ಬೀದಿಗಿಳಿದಿದ್ದರು. ಮೋದಿ ವಿರೋಧಿ ಘೋಷಣೆಗಳು ಗದ್ದಲ ಎಬ್ಬಿಸಿದವು. ಮೋದಿ ತಮ್ಮ ನಾಯಕನಿಗೆ ಸರಿಯಾದ ರಕ್ಷಣೆ ಒದಗಿಸಿರಲಿಲ್ಲ ಅನ್ನುವುದು ಅವರ ಆರೋಪ. ಖುದ್ದು ಪಂಡ್ಯಾ ಪಾಲಕರು ನರೇಂದ್ರ ಮೋದಿ ವಿರುದ್ಧ ರೇಗಾಡಿ ರಾಜ್ಯದಲ್ಲಿ ಕಾನೂನು

ವ್ಯವಸ್ಥೆ ಸರಿ ಇಲ್ಲ ಎಂದು ದೂರಿದರು. ಎಲ್ಲಿಸ್ ಬ್ರಿಡ್ಜ್ ಚುನಾವಣಾ ಕ್ಷೇತ್ರದಿಂದ ಸತತ ಮೂರು ಬಾರಿ ಆರಿಸಿ ಹೋಗಿದ್ದ ಪಂಡ್ಯಾ, ತಮ್ಮ ನೇರ ನಡೆ ಹಾಗೂ ಪಾರದರ್ಶಕತೆಗಳಿಗೆ ಹೆಸರಾಗಿದ್ದವರು. ಆದರೆ ವರಿಷ್ಠರೊಂದಿಗೆ ಮಾತ್ರ ಭಿನ್ನಾಭಿಪ್ರಾಯ ಇಟ್ಟುಕೊಂಡಿದ್ದರು. 2000ದಲ್ಲಿ ಕೇಶುಭಾಯ್ ಸಂಪುಟದಿಂದ ತಮ್ಮ ರಾಜ್ಯಗೃಹ ಮಂತ್ರಿ ಸ್ಥಾನಕ್ಕೆ ಪಂಡ್ಯಾ ರಾಜೀನಾಮೆ ನೀಡಬೇಕಾಗಿ ಬಂತು. ಆರೆಸ್ಸೆಸ್ ನಿರ್ದೇಶನವೂ ಹಾಗೆಯೇ ಇತ್ತು. ಅವತ್ತಿನ ಪರಿಸ್ಥಿತಿ ಬಗ್ಗೆ ಇದ್ದ ವ್ಯಾಖ್ಯಾನವೆಂದರೆ, ಕೇಶುಭಾಯ್‌ಗೆ ಪುರುಷೋತ್ತಮ ಸೋಳಂಕಿಯ ವಿರುದ್ಧ ಪಂಡ್ಯಾರ ಹೋರಾಟಕ್ಕೆ ಜತೆ ನೀಡಲಾಗಲಿಲ್ಲ. ಸೋಳಂಕಿ ಕಾರ್ಮಿಕ ಹಾಗೂ ಉದ್ಯೋಗ ಖಾತೆಯಲ್ಲಿದ್ದು ಆತನ ಸಹೋದರ ಪಂಡ್ಯಾ ಆದೇಶದ ಮೇರೆಗೆ ಹತ್ಯಾಪ್ರಯತ್ನದ ಪ್ರಕರಣವೊಂದರಲ್ಲಿ ಜೈಲು ಸೇರಿರುತ್ತಾನೆ. ಸ್ವತಃ ಸೋಳಂಕಿಗೆ ಅಪರಾಧ ಹಿನ್ನೆಲೆ ಇದ್ದಿತ್ತು. ಆ ಸಂದರ್ಭದಲ್ಲಿ ರಾಜೀನಾಮೆ ನೀಡಿದ ಬಳಿಕವೂ ಖಾತೆಯಲ್ಲೇ ಮುಂದುವರೆಯಬೇಕೆಂಬ ಒತ್ತಡ ಪಂಡ್ಯಾರ ಮೇಲೆ ಬಂತು. ಅದು ಅವರಿಗೆ ಹೀರೊ ಇಮೇಜನ್ನೂ ದೊರಕಿಸಿಕೊಟ್ಟಿತು. ಆದರೆ ಪಟೇಲ್ ಸ್ವಲ್ಪಸಮಯ ಕಾದು 7 ಜುಲೈ 2001ಕ್ಕೆ ಪಂಡ್ಯಾರ ಖಾತೆಯನ್ನು ಎದುರಾಳಿ ಭರತ್ ಬ್ಯಾರಟ್‌ಗೆ ನೀಡಿದರು. ಆರೆಸ್ಸೆಸ್ ಹಾಗೂ ಬಿಜೆಪಿಯ ಜನರಲ್ ಸೆಕ್ರೆಟರಿ ನರೇಂದ್ರ ಮೋದಿ ಇವರಿಬ್ಬರಿಗೂ ವೈರಿ ಸ್ಥಾನದಲ್ಲಿದ್ದವ ಭರತ್. ಪಂಡ್ಯಾ ಗೃಹ ಮಂತ್ರಿಯಾಗಿದ್ದಾಗ ಸಂಘಟಿತ ಅಪರಾಧಗಳನ್ನು ಹತ್ತಿಕ್ಕುವಲ್ಲಿ ಶ್ರಮಿಸಿದವರು. ಪೋರ್‌ಬಂದರ್ ಹಾಗೂ ಇನ್ನಿತರ ನಗರಗಳಲ್ಲಿ ಅನೇಕ ಗ್ಯಾಂಗ್‌ಗಳ ದಾಂದಲೆಗೆ ತಡೆಯೊಡ್ಡಿದ್ದರು. ಕೇಬಲ್ ನೆಟ್‌ವರ್ಕ್ ಮಾಫಿಯಾ ಜಾಲಕ್ಕಂತೂ ಅವರು ಸರಿಯಾಗಿಯೇ ಹೊಡೆತ ಕೊಟ್ಟಿದ್ದರು.

ನರೇಂದ್ರ ಮೋದಿ ಮೊದಲ ಬಾರಿಗೆ ಮುಖ್ಯಮಂತ್ರಿಯಾಗಿದ್ದಾಗ ಪಂಡ್ಯಾರನ್ನು ಕಂದಾಯ ಮಂತ್ರಿಯನ್ನಾಗಿ ನೇಮಿಸಿದ್ದರು. ಆಗ ಭೂ ದಂಧೆಯನ್ನು ನಿಯಂತ್ರಣದಲ್ಲಿಡುವ ಕಾರ್ಯ ಪಂಡ್ಯಾರಿಂದ ಆಗಿತ್ತು. ಯಾವ ಪ್ರಭಾವಿ ವ್ಯಕ್ತಿಗಳನ್ನೂ ಲೆಕ್ಕಿಸದ ಅವರಿಗೆ ಆ ಹಂತದಲ್ಲೇ ಸಾಕಷ್ಟು ವೈರಿಗಳು ಹುಟ್ಟಿಕೊಂಡಿದ್ದರು. ಆನಂತರದ ಹಂತದಲ್ಲಿ ನರೇಂದ್ರ ಮೋದಿಗೆ ಪಂಡ್ಯಾ ತನಗೆ ಉಲ್ಟಾ ಹೊಡೆಯುತ್ತಿದ್ದಾರೆಂಬ ಸಂಶಯ ಬಂತು. ಅವೇನೆ ಇದ್ದರೂ ಹರೇನ್ ಪಂಡ್ಯಾ ಹತ್ಯೆ ಕಾಂಗ್ರೆಸ್‌ಗೆ ಆಹಾರ ಒದಗಿಸಿತು. ಹತ್ಯೆಯ ಹಿಂದೆ ರಾಜಕೀಯ ಸಂಚು ಕೆಲಸ ಮಾಡಿದೆ ಎಂದು ಅದು ಗುಲ್ಲೆಬ್ಬಿಸಿತು. ಕುಸಿದುಹೋಗಿರುವ ಕಾನೂನು ಸುವ್ಯವಸ್ಥೆ ವಿರುದ್ಧ ಪ್ರತಿಭಟನೆಯ ಹೆಸರಲ್ಲಿ ಅದು ರಾಜ್ಯ ಬಂದ್‌ಗೆ ಕರೆಕೊಟ್ಟಿತು. ನರೇಂದ್ರ ಮೋದಿಯವರನ್ನು ಇಕ್ಕಟ್ಟಿಗೆ ಸಿಲುಕಿಸುವುದೇ ಅವರ ಗುರಿಯಾಗಿತ್ತು. ಅಂತಹ ಯಾವುದೇ ಅವಕಾಶವನ್ನೂ



ಅವರು ಬಿಟ್ಟುಕೊಡಲು ತಯಾರಿರಲಿಲ್ಲ. ಅಷ್ಟಾಗಿ ಸಹ ಮೋದಿ ಮೇಲೆ ಅದು ಯಾವುದೇ ವ್ಯತಿರಿಕ್ತ ಪರಿಣಾಮ ಬೀರಲಿಲ್ಲ.





# 34
## ಮೋದಿ ನಿರ್ದೇಶನದಲ್ಲಿ ವೈಬ್ರಂಟ್ ಗುಜರಾತ್

2003, ಅಕ್ಟೋಬರ್‌ನಲ್ಲಿ ನಡೆದ 'ವೈಬ್ರಂಟ್ ಗುಜರಾತ್' ಮೋದಿಯವರಿಗೆ ಹಿರಿಮೆಯ ಗರಿ ಹೊದೆಸಿದ ಭರ್ಜರಿ ಸಮಾವೇಶ. ಒಂದೇ ಹೊಡೆತಕ್ಕೆ 55000 ಕೋಟಿ ಬಂಡವಾಳದ ಭರವಸೆ ಹರಿದು ಬಂತು. ಮುಂದಿನ ಮೂರು ವರ್ಷಗಳಲ್ಲಿ ತಾನು 9000 ಕೋಟಿ ಬಂಡವಾಳ ಹೂಡುತ್ತೇನೆ ಅಂತ ಉತ್ಸಾಹ ತುಂಬಿದ ಭರವಸೆಯಿತ್ತಿತು ರಿಲಯನ್ಸ್ ಇಂಡಸ್ಟ್ರೀಸ್. ಅಷ್ಟೇ ಅಲ್ಲ, ಪ್ರವಾಸೋದ್ಯಮವೂ ಗರಿಗೆದರಿಕೊಂಡಿತು. 1000 ಉದ್ಯಮ ಪ್ರತಿನಿಧಿಗಳೊಂದಿಗೆ 200 ಅನಿವಾಸಿ ಭಾರತೀಯರೂ ಕಾರ್ಯಕ್ರಮಕ್ಕೆ ಬಂದಿದ್ದರು. 125 ವಿದೇಶಿ ಪ್ರತಿನಿಧಿಗಳೂ ಇದ್ದರು. ವಿಶೇಷವಾಗಿ ಆಹ್ವಾನಿಸಲ್ಪಟ್ಟ ಕೈಗಾರಿಕಾ ಲೋಕದ 200 ದಿಗ್ಗಜರು ಹಾಜರಾಗಿದ್ದರು. ಅದು ಮುಖೇಶ್ ಅಂಬಾನಿ, ಎಸ್ .ಕೆ. ಬಿರ್ಲಾ, ಹರಿ ಭಾರತೀಯ, ಸುಬಿರ್ ರಹ ಇವರೆಲ್ಲರನ್ನೂ ಒಳಗೊಂಡಿದ್ದ ಕಾರ್ಯಕ್ರಮವಾಗಿತ್ತು. ಬಂಡವಾಳ ಹಿಂತೆಗೆತ ಖಾತೆ ಸಚಿವ ಅರುಣ್ ಶೌರಿ ಅಲ್ಲಿದ್ದರು. ಯಾವತ್ತೂ ಭಾರತವನ್ನು ಟೀಕಿಸುತ್ತಿದ್ದ ಯುಎಸ್‌ನ ಸೆನೆಟರ್ ಲ್ಯಾರಿ ಪ್ರೆಸ್ಲರ್ ಮಾತಿಗಿಳಿದಿದ್ದ- 'ನಾನು ಗುಜರಾತನ್ನು ಬೆಂಬಲಿಸಬೇಕು ಅಂತ ಇಲ್ಲಿ ಬಂದಿದ್ದೇನೆ. ಗುಜರಾತ್ ತುಂಬ ಚಲನಶೀಲವಾದದ್ದು. ಇದಕ್ಕೊಂದು ಆಧ್ಯಾತ್ಮದ ಇತಿಹಾಸವಿದೆ. ಭಾರತ ಎಂಬ ರಾಷ್ಟ್ರವನ್ನು ಮುನ್ನಡೆಸುವ ಇಂಜಿನ್ ಇದ್ದಂತೆ ಗುಜರಾತ್" ಎಂದನಾತ!

2003ರ ವೈಬ್ರಂಟ್ ಗುಜರಾತ್‌ಗೆ ಸಿಕ್ಕ ಪ್ರತಿಕ್ರಿಯೆಯಿಂದ ಉತ್ತೇಜಿತಗೊಂಡ ಸರಕಾರ 2005, ಜನವರಿಯಲ್ಲಿ ಎರಡನೇ ವೈಬ್ರಂಟ್ ಗುಜರಾತ್ ಸಮ್ಮೇಳನವನ್ನು ಅಹಮದಾಬಾದಿನ 'ಸೈನ್ಸ್ ಸಿಟಿ'ಯಲ್ಲಿ ಆಯೋಜಿಸಿತು. 2003ರ ಸಮಾವೇಶ ಒಂದು ಹೊಸ ದಿಸೆಯನ್ನೇ ತೋರಿಸಿತ್ತು. ವಿದ್ಯುತ್, ತೈಲ, ಪ್ರವಾಸೋದ್ಯಮ, ಕೃಷಿ ಉತ್ಪನ್ನಗಳು,

ಬಯೋಟೆಕ್ನಾಲಜಿ, ಆಭರಣಗಳು ಹೀಗೆ ಎಲ್ಲಾ ವಿಭಾಗಗಳಲ್ಲೂ ತಿಳಿವಳಿಕೆ ಪತ್ರಗಳಿಗೆ ಸಹಿ ಬಿದ್ದಿತ್ತು. ಎಫ್‌ಐಸಿಸಿಐನ ಪ್ರಧಾನ ಕಾರ್ಯದರ್ಶಿ ಡಾ. ಅಮಿತ್ ಮಿತ್ರಾ ಹೇಳುವ ಪ್ರಕಾರ 'ಗುಜರಾತ್ ಕೇವಲ ಒಂದು ರಾಜ್ಯ, ರಾಷ್ಟ್ರವಲ್ಲ, ಅದಕ್ಕೆ 11 ಬಿಲಿಯನ್ ಬಂಡವಾಳ ಹರಿದುಬರುತ್ತಿದೆ ಎಂದರೆ ಇಡೀ ಭಾರತ ಖುಷಿಪಡಬೇಕು'. ರಿಲಯನ್ಸ್ ಅಲ್ಲದೆ, ನಿರ್ಮಾ ಸಹ 2200 ಕೋಟಿ ರೂಪಾಯಿಗಳ ವೆಚ್ಚದಲ್ಲಿ 500 ಮೆಗಾವ್ಯಾಟ್ ವಿದ್ಯುತ್ ಉತ್ಪಾದನಾ ಘಟಕ ಆರಂಭಿಸುತ್ತೇನೆ ಎಂದಿತು. ಬ್ರಿಟನ್ ಮೂಲದ ಕಂಪನಿಯೊಂದು ಮನರಂಜನಾ ಉದ್ಯಮದಲ್ಲಿ 1400 ಕೋಟಿ ರೂಪಾಯಿಗಳನ್ನು ತೊಡಗಿಸಿದ್ದಲ್ಲದೆ ಭೂಪ್ರದೇಶಗಳ ಅಭಿವೃದ್ಧಿಗೆ 550 ಕೋಟಿ ಹೂಡಲು ಮುಂದೆ ಬಂದಿತು. 'ಕ್ರೆಡಿಟ್ ಅನಾಲಿಸಿಸ್ ಅಂಡ್ ರಿಸರ್ಚ್' ಸಂಸ್ಥೆ ರಾಜ್ಯದ ಸುಧಾರಣೆಯನ್ನು ಶ್ಲಾಘಿಸಿತು. ವರ್ಷದ ಅವಧಿಯಲ್ಲಿ ಗುಜರಾತಿನ ಆದಾಯದ ಕೊರತೆ 6700 ಕೋಟಿ ರೂಪಾಯಿಗಳಿಂದ 3500 ಕೋಟಿ ರೂಪಾಯಿಗಳಿಗೆ ಇಳಿಯಿತು. ಇದು ಕಡಿಮೆ ಸಾಧನೆಯೇನಾಗಿರಲಿಲ್ಲ, ಮೋದಿ ಟೀಕಾಕಾರರಿಗೆ ಸರಿಯಾದ ಉತ್ತರವೇ ಲಭಿಸಿತ್ತು.

ಇಂಗ್ಲಿಷ್ ಮಾಧ್ಯಮಗಳ ಮುಖಕ್ಕೆ ಕೊಟ್ಟ ತಪರಾಕಿಯಂತಿತ್ತು ಮೋದಿ ಸಾಧನೆ.

**ಹಾರಿತು ಗಾಳಿಪಟ**

ಗಾಳಿಪಟವನ್ನೂ ಒಂದು ಉದ್ದಿಮೆಯನ್ನಾಗಿ ಮಾಡುವ ಯೋಚನೆ ಸಾಮಾನ್ಯದವರ ತಲೆಗೆ ಹೊಳೆಯಲು ಸಾಧ್ಯವೆ?

ಬಹುಶಃ ಮೋದಿಗೆ ಮಾತ್ರ ಇಂತಹ ಯೋಚನೆಗಳು ಹೊಳೆಯುತ್ತವೆ. ಯಶಸ್ಸಿನ ಹೆಜ್ಜೆ ಮೂಡಿಸಿತ್ತು 'ವೈಬ್ರಂಟ್ ಗುಜರಾತ್'. ಮತ್ತೇನಾದರೂ ಹೊಸತು ಮಾಡುವ ಕುರಿತು ಮೋದಿ ಯೋಚಿಸುತ್ತಿದ್ದರು. 'ಗುಜರಾತ್ ಇಂಡಸ್ಟ್ರಿಯಲ್ ಅಂಡ್ ಟೆಕ್ನಿಕಲ್ ಕನ್ಸಲ್ಟೆನ್ಸಿ ಆರ್ಗನೈಜೇಷನ್' ವತಿಯಿಂದ ರಾಜ್ಯ ವ್ಯಾಪಿಯಾದ ಸರ್ವೇಯೊಂದನ್ನು ಕೈಗೊಳ್ಳಲಾಯಿತು. ಅಹಮದಾಬಾದ್ ನಗರವೊಂದರಲ್ಲೇ ವರ್ಷವಿಡೀ ಇದೇ ವೃತ್ತಿಯಲ್ಲಿ ತೊಡಗಿರುವವರು 30,000 ಕುಶಲಕರ್ಮಿಗಳಿದ್ದಾರೆ. ಅಲ್ಲದೇ ಹೆಚ್ಚುವರಿ ನಿರ್ದಿಷ್ಟ ಋತುಮಾನದಲ್ಲಷ್ಟೇ ಕೆಲಸಕ್ಕೆ ಬರುವ 20,000 ಕಾರ್ಮಿಕರಿದ್ದಾರೆ. ಗುತ್ತಿಗೆ ಆಧಾರದ ಮೇಲೆ 350 ಉತ್ಪಾದಕರು ಹಾಗೂ ಸಗಟು ಮಾರಾಟಗಾರರು ಕೆಲಸಮಾಡುತ್ತಿದ್ದರೆ, ಚಿಲ್ಲರೆ ಮಾರಾಟಗಾರರ ಸಂಖ್ಯೆ 1000. ಅಂಕಿ-ಅಂಶಗಳನ್ನು ತೆಗೆದಿರಿಸಿತು ಸರ್ವೇ.

ಅಹಮದಾಬಾದಿನ ಗಾಳಿಪಟ ಮಾರುಕಟ್ಟೆಯ ಮೌಲ್ಯ ವರ್ಷಕ್ಕೆ 40 ಕೋಟಿ





ರೂಪಾಯಿಗಳದ್ದಾಗಿತ್ತು. ಇದರಲ್ಲಿ ಗಾಳಿಪಟ ಮಾರಾಟದಿಂದ ಬರುವುದು 12 ಕೋಟಿ. ದಾರಗಳ ಮಾರಾಟದಿಂದ 18 ಕೋಟಿ ರೂಪಾಯಿ ಸಂಗ್ರಹವಾಗುತ್ತಿತ್ತು. ಉಳಿದೆಲ್ಲ ಚಿತ್ತಾರಗಳು 2.56 ಕೋಟಿ ಮೌಲ್ಯ ತೂಗುತ್ತಿದ್ದವು. ಗ್ಯಾಸ್ ಬಲೂನು, ಗಮ್ ಟೇಪ್ ಇತ್ಯಾದಿಗಳೆಲ್ಲಾ ಬಿಕರಿಯಾಗುತ್ತಿದ್ದ ಬೆಲೆ ಲೆಕ್ಕ ಹಾಕಿದರೆ 40 ಲಕ್ಷ ಎಂಬ ಉತ್ತರ ಬರುತ್ತಿತ್ತು. ಇವನ್ನೆಲ್ಲ ಎದುರಿಗಿಟ್ಟುಕೊಂಡು ಲೆಕ್ಕಾಚಾರ ಹಾಕಿದ ಮೋದಿ ಯೋಚಿಸಿದ್ದು, ಈ ಬಾರಿಯ 'ಮಕರ ಸಂಕ್ರಮಣ' ಹಬ್ಬದಲ್ಲಿ ಗಾಳಿಪಟ ಉತ್ಸವ ಆಚರಿಸಿದರೆ ಹೇಗೆ? ಆ ನೆಪದಲ್ಲಿ ಎನ್ನಾರೈಗಳನ್ನು ಆಕರ್ಷಿಸಿ ರಾಜ್ಯಕ್ಕೆ ಬಂಡವಾಳ ಬರುವಂತೆ ಮಾಡಬೇಕು. ಹಾಗೆಂದುಕೊಂಡು ಕಾರ್ಯಪ್ರವೃತ್ತರಾದರು. 2004, ಜನವರಿ 12 ಮತ್ತು 14 ರಂದು ಅದು ಸಾಕಾರವಾಗಿತ್ತು. ಎನ್ನಾರೈಗಳಿಗೆ ರತ್ನಗಂಬಳಿಯ ಸ್ವಾಗತವನ್ನೇ ನೀಡಿದ್ದ ಉತ್ಸವಕ್ಕೆ 'ವಿಶ್ವ ಗುಜರಾತಿ ಪರಿವಾರ ಮಹೋತ್ಸವ' ಅಂತ ಹೆಸರಿಟ್ಟರು ಮೋದಿ. ಜನವರಿ 9ರಿಂದ 11ರವರೆಗೆ ನಡೆಯಲಿದ್ದ ಕೇಂದ್ರ ಸರಕಾರದ 'ಪ್ರವಾಸಿ ಭಾರತೀಯ ದಿನ'ಕ್ಕೂ ಇದು ಹತ್ತಿರದಲ್ಲಿಯೇ ಇತ್ತು. ಜನವರಿ 12ರ ದಿನ ಸ್ವಾಮಿ ವಿವೇಕಾನಂದರ ಜನ್ಮದಿನವೂ ಆಗಿತ್ತು.

ಮೋದಿ ಎಲ್ಲದರಲ್ಲೂ ಕರಾರುವಾಕ್ಕಾಗಿದ್ದರು.

ಜಗತ್ತಿನ ಮೂಲೆ ಮೂಲೆಗಳಲ್ಲಿ ನೆಲೆಸಿರುವ ಗುಜರಾತಿಗಳನ್ನೆಲ್ಲಾ ಗುರುತಿಸಿ ರಾಜ್ಯ ಸರಕಾರದಿಂದ ಆಹ್ವಾನ ರೂಪದಲ್ಲಿ 50,000 ಇ-ಮೇಲ್‌ಗಳು ರವಾನೆಯಾದವು. ವಿಮಾನದಲ್ಲಿ ಇಡುವ ಪತ್ರಿಕೆಗಳಲ್ಲಿ ಜಾಹೀರಾತುಗಳನ್ನು ನೀಡಲಾಯಿತು. ವಿಶೇಷವಾಗಿ ಏರ್ ಇಂಡಿಯಾ ಹಾಗೂ ಜೆಟ್ ಏರ್‌ಲೈನ್‌ಗಳ ಇನ್‌ಫ್ಲೈಟ್ ಜರ್ನಲ್‌ಗಳಲ್ಲಿ ಜಾಹೀರಾತುಗಳು ಪ್ರಕಟವಾದವು. ಇಡೀ ಉತ್ಸವವನ್ನು ಪ್ರಾಯೋಜಿಸಲು ಎಸ್ಸಾರ್ ಕಂಪನಿ ಮುಂದೆ ಬಂತು. ಒಟ್ಟಿನಲ್ಲಿ ಈ ಕಾರ್ಯಕ್ರಮ ಯಶ ಕಾಣಲು ಎಲ್ಲಾ ವಿಭಾಗಗಳು ಶಕ್ತಿ ಮೀರಿ ದುಡಿದವು. ಪ್ರಧಾನಿಯಾಗಿದ್ದ ಅಟಲ್ ಬಿಹಾರಿ ವಾಜಪೇಯಿ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಸೋಲಾ ಆಶ್ರಮದಿಂದ ಬಂದ 21 ವಟುಗಳು ಸೂರ್ಯ ನಮಸ್ಕಾರ ಹಾಗೂ ಆದಿತ್ಯ ಹೃದಯ ಸ್ತೋತ್ರದ ಮೂಲಕ ಶುಭಾರಂಭ ಹಾಡಿದರು. ನೆರೆದಿದ್ದ ಮಕ್ಕಳು ಹಾಗೂ ಕಾಲೇಜು ವಿದ್ಯಾರ್ಥಿಗಳ ಸಂಖ್ಯೆ 10000ವಿತ್ತು. 'ವತನ್ ನಿ ವಾತ್' ಹಾಗೂ 'ಬಿಯಾಂಡ್ ಬೌಂಡ್ರೀಸ್' ಅಂತೆರಡು ಪುಸ್ತಕಗಳು ಬಿಡುಗಡೆಯಾದವು. 'ವತನ್ ಇ ವಾತ್' 3,500 ಅನಿವಾಸಿ ಗುಜರಾತಿಗಳ ಹೆಸರು-ವಿಳಾಸಗಳನ್ನೊಳಗೊಂಡಿತ್ತು. ಅವರೆಲ್ಲ ಚೆಕ್‌ಡ್ಯಾಮ್, ನೀರಾವರಿ, ಸ್ಕೂಲ್, ಶೈಕ್ಷಣಿಕ ಸಂಸ್ಥೆಗಳು, ಆಸ್ಪತ್ರೆ, ದೇವಸ್ಥಾನ... ಹೀಗೆ ಬೇರೆ ಬೇರೆ ವಿಭಾಗಗಳಲ್ಲಿ ಗುಜರಾತಿಗೆ ಉಪಕರಿಸಿದವರು. ಮಕರಂದ್ ಮೆಹ್ತಾ ಬರೆದಿದ್ದ

'ಬಿಯಾಂಡ್ ದಿ ಬೌಂಡ್ರೀಸ್" ಪುಸ್ತಕ ಹರಪ್ಪಾ ನಾಗರಿಕತೆಯ ಕಾಲದಿಂದಲೂ ಗುಜರಾತ್ ವಿದೇಶಿಗರೊಂದಿಗೆ ಹೊಂದಿದ್ದ ವ್ಯಾಪಾರ ಸಂಬಂಧಗಳ ಬಗೆಗೆ ಮಾತನಾಡುತ್ತಿತ್ತು. ಐವರು ಪ್ರಮುಖ ಅನಿವಾಸಿ ಗುಜರಾತಿಗಳನ್ನು ಸನ್ಮಾನಿಸಲಾಯಿತು. ಮೂವರು ಪರಿಣತರನ್ನು ಹೊಸದಾಗಿ ಸ್ವಾಗತಿಸಲಾಯಿತು. 48 ವರ್ಷಗಳಿಂದ ಗಾಳಿಪಟದ ಸಂಗ್ರಹಾಲಯವನ್ನು ನಡೆಸಿಕೊಂಡು ಬರುತ್ತಿದ್ದ ಅಹಮದಾಬಾದಿ ಭಾನು ಭಾಯ್ ಷಾ, ಗುಜರಾತಿನ ಅತಿ ಹಿರಿಯ ಗಾಳಿಪಟ ತಯಾರಕ 80ರ ಪ್ರಾಯದ ರಸೂಲ್ ಚಾಚಾ ಇವರನ್ನೂ ಕಾರ್ಯಕ್ರಮ ಒಳಗೊಂಡಿತ್ತು.

ಭಾಗವಹಿಸಿದವರೆಲ್ಲರ ಬಾಯಲ್ಲೂ ಒಂದೇ ಉದ್ಗಾರ-'ಆಹಾ, ಏನದ್ಭುತ!'

ವೀಕ್ಷಕರ ಅಟ್ಟಣಿಗೆಯಲ್ಲೂ ವೈವಿಧ್ಯವಿತ್ತು. ಅಲ್ಪಸಂಖ್ಯಾತರಿಗೆಂದೇ 'ಆಘಾ ಖಾನ್ ಡೆವೆಲಪ್‌ಮೆಂಟ್ ನೆಟ್‌ವರ್ಕ್ ಪೆವಿಲಿಯನ್", 'ದಾವೂದಿ ಬೋಹ್ರಾ ಪೆವಿಲಿಯನ್". ಅವು ಆ ಎರಡೂ ಸಮುದಾಯಗಳ ನಡುವಿನ ಸಾಮರಸ್ಯವನ್ನು ತೋರಿಸುತ್ತಿತ್ತು. 'ಪಾರ್ಸಿ ಪೆವಿಲಿಯನ್" ಪಾರ್ಸಿ ಜೀವನ ಪದ್ಧತಿಯನ್ನೇ ಬಿಂಬಿಸುತ್ತಿತ್ತು. ಹೀಗೆ ಪರಿವಾರ ಮಹೋತ್ಸವ ಅರ್ಥಪೂರ್ಣವಾಗಿ, ಯಶಸ್ವಿಯಾಗಿ ಜರುಗಿತು.

ಆ ಗುಂಗಿನಿಂದ ಗುಜರಾತ್ ಇನ್ನೂ ಹೊರಬಂದಿರಲಿಲ್ಲ.

ಆದರೆ ದಣಿವಾರಿಸಿಕೊಳ್ಳಲು ಮೋದಿಗೆ ಸಮಯವಿರಲಿಲ್ಲ. ಅವರಾಗಲೇ ಇನ್ನೊಂದು ಯೋಜನೆಯ ಕುರಿತು ಯೋಚಿಸುತ್ತಿದ್ದರು. 'ಇ' ಗವರ್ನೆನ್ಸ್ ಅನ್ನುವ ವಿಶಿಷ್ಟ ಯೋಜನೆಗೆ ಸಿದ್ಧರಾದರು ಮೋದಿ. ಐದು ಲಕ್ಷ ನೌಕರರನ್ನು ತರಬೇತುಗೊಳಿಸುವ ಮಹತ್ವಾಕಾಂಕ್ಷಿ ಗುರಿ ಹೊತ್ತಿತ್ತದು. ಫೆಬ್ರವರಿಯಲ್ಲಿ 2000 ಚಿಲ್ಲರೆ ನೌಕರರನ್ನುದ್ದೇಶಿಸಿ ಮಾತನಾಡುತ್ತಿದ್ದರು ಮೋದಿ. ನೌಕರರನ್ನು 'ಕರ್ಮಯೋಗಿ'ಗಳಾಗಿ ಪರಿವರ್ತಿಸುವ ಕನಸು ಅವರದು. 700 ದಿನಗಳ ಈ ಯೋಜನೆಗೆ 'ಕರ್ಮಯೋಗಿ ಮಹಾ ಅಭಿಯಾನ್" ಅಂತಲೇ ಹೆಸರಿಡಲಾಯಿತು. ಇಂತಹ ಘಳಿಗೆಯಲ್ಲೂ ಸಹ ಮೋದಿ ವಿರೋಧಿಗಳಿಗೆ ಹೇಗಾದರೂ ಮಾಡಿ ಅವರ ವಿರುದ್ಧದ ಟೀಕೆಯನ್ನು ಜಾರಿಯಲ್ಲಿಡಬೇಕಾದ ಅವಶ್ಯಕತೆ ಕಾಡಿತ್ತು. "ಗುಜರಾತ್ ಮುಖ್ಯಮಂತ್ರಿ ನರೇಂದ್ರ ಮೋದಿಯವರನ್ನು ಒಂದೊಮ್ಮೆ ಬಿಜೆಪಿ ಸಂಪೂರ್ಣವಾಗಿ ಕೈಬಿಡಬೇಕಾಗಿ ಬಂದರೂ, ಅವರೇನೂ ನಿರುದ್ಯೋಗಿಯಾಗುವುದಿಲ್ಲ. ರಾಜಕೀಯ ಘೋಷಣೆಗಳನ್ನು ಬರೆಯುವ ಕೆಲಸವನ್ನೇ ಅವರು ತಮ್ಮ ವೃತ್ತಿಯಾಗಿಸಿಕೊಳ್ಳಬಹುದು. ಅವೆಲ್ಲ ಬೂಟಾಟಿಕೆಯವೇ ಆಗಿದ್ದರೂ, ಹಾಗೊಂದು ಶಬ್ದಕೋಶದಲ್ಲಿ ಸರಕಾರದ ಪ್ಯಾಕೇಜ್‌ಗಳನ್ನು ಸುತ್ತಿಕೊಡುವ ರೀತಿ ಅವರ ವಿರೋಧಿಗಳನ್ನೂ ಚಕಿತಗೊಳಿಸುತ್ತದೆ. ಬರೀ





ಅಲಂಕಾರಗಳಿಂದಲೇ ಕೂಡಿದ್ದರೂ ಅವರು ಪರಿಚಯಿಸಿದ ಶಬ್ದಗಳನ್ನು ಆಡಳಿತಶಾಹಿ ಕೂಡ ಬಳಸುವಂತೆ ಪ್ರಭಾವ ಬೀರಿದ್ದಾರೆ. ಕೇಶುಭಾಯ್ ಪಟೇಲ್ ಪೈಪ್‌ಲೈನ್‌ಗಳ ಮೂಲಕ ಉತ್ತರ ಗುಜರಾತಿಗೆ ನೀರುಣಿಸುವ ಕುರಿತು ಮಾತನಾಡಿದಾಗಲೆಲ್ಲ ಜನ ಗಮನವನ್ನೇ ನೀಡಿರಲಿಲ್ಲ. ಅದನ್ನೇ ಮೋದಿ 'ಸುಜಲಾಂ ಸುಫಲಾಂ' ಎಂಬ ಚೆಂದದ ಹೆಸರಿಟ್ಟು ಪರಿಚಯಿಸಿದಾಗ, ಎಲ್ಲರೂ ಎದ್ದು ನಿಂತು ಸ್ವಾಗತಿಸಿದರು".

ಹಾಗಂದಿತು 'ಟೈಮ್ಸ್ ಆಫ್ ಇಂಡಿಯಾ'!

ಟೀಕೆಗೋಸ್ಕರವೇ ಮಾಡಿದ ಈ ಟೀಕೆ ಬದಿಗಿರಲಿ. ಆದರೆ ಪ್ಯಾಕೇಜ್‌ಗಳಿಗೆ ಭಾವನಾತ್ಮಕ ಹೆಸರುಗಳನ್ನಿಟ್ಟು ಮೋಡಿ ಮಾಡುತ್ತಿದ್ದ ಮೋದಿಯವರ ಬುದ್ಧಿವಂತಿಕೆಗೆ ಎಂತವರೂ ತಲೆದೂಗಲೇಬೇಕು. ಭಯೋತ್ಪಾದನೆ ವಿರುದ್ಧದ ರಕ್ಷಣಾ ಯೋಜನೆಗೆ 'ಸುದರ್ಶನ ಸುರಕ್ಷಾ ಕವಚ್' ಅಂತ ಕರೆದರು. ಕರಕುಶಲ ಕರ್ಮಿಗಳ ಉತ್ಪನ್ನಗಳಿಗೆ ಮಾರುಕಟ್ಟೆ ಒದಗಿಸುವ ಯೋಜನೆಗೆ 'ಗೋಪಿಫರ್ ಯೋಜನಾ' ಎಂದು ಹೆಸರು ಬಿತ್ತು. 'ಕಲ್ಪಸಾರ್ ಯೋಜನೆ'ಯನ್ನು ಶ್ರೀಲಂಕಾದ ಜೊತೆ ಭಾರತವನ್ನು ಬೆಸೆದ ಸೇತುವೆಯ ಪರಿಕಲ್ಪನೆಯಡಿಯಲ್ಲಿ ಪರಿಚಯಿಸಿದರು ಮೋದಿ. 'ವಿದ್ಯಾಲಕ್ಷ್ಮೀ' ಹುಡುಗಿಯರನ್ನು ಶಾಲೆಯತ್ತ ಕರೆತರುವ ಯೋಜನೆ, ಆಟೋ ರಿಕ್ಷಾ, ಟ್ಯಾಕ್ಸಿ ಹಾಗೂ ಟ್ರಕ್ ಚಾಲಕರಿಗೆ 'ಸ್ವಸ್ಥ ಸುರಕ್ಷಾ ಯೋಜನೆ', ರಾಜ್ಯದ ಆರ್ಥಿಕ ವ್ಯವಸ್ಥೆ ಸುಧಾರಿಸುವ ನಿಟ್ಟಿನಲ್ಲಿ ಹೊರಗಿನ ಪರಿಣತರನ್ನು ಒಳಗೊಂಡ ಸಮಿತಿಗೆ 'ಬುದ್ಧಿಸಾಗರ್ ಪರಿಷದ್"... ಹೆಸರಿನಲ್ಲೂ ಚಾಕಚಕ್ಯತೆ ಮೆರೆಯುವ ಬುದ್ಧಿಮತ್ತೆಗೆ ಏನನ್ನೋಣ?

515 ಕೋಟಿ ರೂಪಾಯಿಗಳ ನರ್ಮದಾ ನೀರಾವರಿ ಯೋಜನೆ 'ಸುಜಲಾಂ ಸುಫಲಾಂ' ಎಂಬ ಹೆಸರಿನಲ್ಲೇ ಪ್ರಖ್ಯಾತವಾಯಿತು. 700 ವಿಜ್ಞಾನಿಗಳನ್ನು ಪಟ್ಟಿ ಮಾಡಿ ಅವರೆಲ್ಲ ವೈಯಕ್ತಿಕವಾಗಿ ರೈತನ ಜಮೀನಿಗೆ ಭೇಟಿ ನೀಡಿ ಆಧುನಿಕ ಕೃಷಿ ಪದ್ಧತಿಗಳ ಕುರಿತು ಅರಿವು ಮೂಡಿಸುವ ಕಾರ್ಯಕ್ರಮ ಜಾರಿಯಾಯಿತು. ಮುಚ್ಚಿಹೋಗಿದ್ದ ಡೈರಿಗಳಲ್ಲಿ ಮರುಜೀವ ಸಂಚರಿಸಿತು. ಮಾರ್ಚ್ ಆರಂಭದಲ್ಲೇ ನರೇಂದ್ರ ಮೋದಿ ತಮ್ಮ ಸಚಿವ ಸಂಪುಟ ಸದಸ್ಯರನ್ನು ಹಾಗೂ ಅಧಿಕಾರಿಗಳನ್ನು ಬೆನ್ನಿಗಿಟ್ಟುಕೊಂಡು ಕಡಲ ಕಿನಾರೆಯಂಚಿಗೆ ಹೋಗಿ ನಿಂತರು. ಅರಬ್ಬೀ ಸಮುದ್ರದ ಭಾಗವೊಂದಕ್ಕೆ 64 ಕಿಲೋಮೀಟರ್ ಡ್ಯಾಮ್ ಕಟ್ಟಿ ಅಲ್ಲಿಯೇ ಶುದ್ಧ ನೀರಿನ ಸರೋವರವೊಂದನ್ನು ನಿರ್ಮಿಸುವ ಮಹಾಕನಸೊಂದಕ್ಕೆ ಮುಖಾಮುಖಿಯಾಗಿದ್ದರು ನರೇಂದ್ರ ಮೋದಿ. ಇಪ್ಪತ್ತು ವರ್ಷ ತೆಗೆದುಕೊಳ್ಳಬಹುದಾದ ಈ ಯೋಜನೆ ಬೇಡುತ್ತಿದ್ದುದು ಬರೋಬ್ಬರಿ 50,000 ಕೋಟಿ ರೂಪಾಯಿಗಳನ್ನು! ಅದರ

ಹೆಸರೇ 'ಕಲ್ಪಸಾರ್ ಯೋಜನೆ'! ಭಾರತದಲ್ಲೆಲ್ಲೂ ಕಂಡುಕೇಳರಿಯದಿದ್ದ ಇಂತಹದೊಂದು ಯೋಜನೆ ಹೆಣೆಯುವಂತೆ ಮೋದಿಯವರನ್ನು ಪ್ರೇರೇಪಿಸಿದ್ದಾದರೂ ಏನು? ಏನೋ ಮಾಡುವ ಹುಮ್ಮಸ್ಸಿನಲ್ಲಿ ಸಮುದ್ರಕ್ಕೆ ಹಣ ಸುರಿಯ ಹೊರಟರಾ ಮೋದಿ? ಅವರ ಅಸಲಿ ಕಾಳಜಿಯಾದರೂ ಏನಿತ್ತು? ಅದೆಲ್ಲ ಅರ್ಥವಾಗಬೇಕಾದರೆ ಗುಜರಾತ್ ಎಂಬ ರಾಜ್ಯ ಎದುರಿಸಿದ ನೀರಿನ ಬಿಕ್ಕಟ್ಟು ಎಂಥದ್ದು ಎಂಬುದನ್ನು ಗಮನಿಸಬೇಕು.

**ಆ ನೀರಡಿಕೆಗೆ ವರ್ಷಗಳ ಇತಿಹಾಸ**

ಗುಜರಾತನ್ನು ಕಾಡುತ್ತಿದ್ದ ನೀರಿನ ಕೊರತೆ ಇವತ್ತಿನದಾಗಿರಲಿಲ್ಲ. ವಿವಾದಾತ್ಮಕ ಸರ್ದಾರ್ ಸರೋವರ್ ಯೋಜನೆ ಮುಕ್ತಾಯ ಕಂಡರೂ ನೀರಿನ ಸಮಸ್ಯೆ ಮಾತ್ರ ಬಗೆಹರಿದಿರಲಿಲ್ಲ. ಒಂದು ಕಡೆ ನೀರಿಗಾಗಿ ಬೇಡಿಕೆ. ಇನ್ನೊಂದೆಡೆ ಏರುಮುಖದಲ್ಲಿ ಪ್ರಗತಿ ಹೊಂದುತ್ತಿದ್ದ ಕೈಗಾರಿಕೋದ್ಯಮ. ಅದಕ್ಕೆ ತಕ್ಕಂತೆ ಉಂಟಾಗುತ್ತಿದ್ದ ಜಲಮಾಲಿನ್ಯ. ಕೆಲವು ಸಂಗತಿಗಳಂತೂ ಭಯಾನಕ. ಸೌರಾಷ್ಟ್ರ ಜಿಲ್ಲೆಯಲ್ಲಿ 7,50,000 ಬೋರ್‌ವೆಲ್‌ಗಳು ಸಾವಿರಾರು ಅಡಿ ಪಾತಾಳದಿಂದ ನೀರೆತ್ತುತ್ತಿದ್ದವು. ಉತ್ತರ ಗುಜರಾತಿನಲ್ಲಿ ಮೆಹ್‌ಸಾನಾ ಜಿಲ್ಲೆಯಲ್ಲಿ 25,000 ಬೋರ್‌ವೆಲ್‌ಗಳಿದ್ದವು. ಪಾಕಿಸ್ತಾನದ ಗಡಿಯಲ್ಲಿ ಬರುವ ಕಛ್ ಹಾಗೂ ಸೌರಾಷ್ಟ್ರಗಳಿಗೆ ನೀರಿನ ಕೊರತೆ ಯಾವತ್ತು ಅತಿಯಾಗೇ ಕಾಡಿತ್ತು. ಮಳೆಗಾಲದ ಸಮಯದಲ್ಲೂ ಸಹ ಅಲ್ಲಿ ಕುಡಿಯುವ ನೀರಿಗೆ ತತ್ವಾರ. ಪರಿಣತರ ಅಂದಾಜಿನ ಪ್ರಕಾರ 2025ರ ಸುಮಾರಿಗೆ ಪರಿಸ್ಥಿತಿ ಇನ್ನಷ್ಟು ಬಿಗಡಾಯಿಸಲಿದೆ. ಇನ್ನೂ 7,294 ಕ್ಯೂಬಿಕ್ ಮೀಟರ್ ನೀರಿನ ಕೊರತೆ ರಾಜ್ಯಕ್ಕೆ ಎದುರಾಗಲಿದೆ ಎಂದಿದ್ದರು. ಈ ದಿಸೆಯಲ್ಲಿ ಸರಕಾರ ಸಹ ಕ್ರಮ ಕೈಗೊಳ್ಳುತ್ತಲೇ ಬಂದಿದೆ. 2000ದಲ್ಲಿ ಕಾನೂನೊಂದು ಅಂಗೀಕರಿಸಲ್ಪಟ್ಟು ಭೂ ಮೇಲ್ಮೈನ ನೀರನ್ನು ಅಡ್ಡಾದಿಡ್ಡಿ ಖರ್ಚು ಮಾಡುವುದಕ್ಕೆ ತಡೆಯೊಡ್ಡಿತು. ಅಂತರ್ಜಲದಲ್ಲಿ ಅಗಾಧ ಕುಸಿತ ಕಂಡ 40ಕ್ಕೂ ಮಿಕ್ಕಿದ ಪ್ರದೇಶಗಳನ್ನು 'ಕೊರತೆ ಪ್ರದೇಶ' ಅಂತ ಘೋಷಿಸಿದ್ದೂ ಆಯ್ತು.

ರಾಜ್ಯದ 9,000ದಿಂದ 18,000 ಹಳ್ಳಿಗಳನ್ನು ಅತಿಯಾದ ನೀರಿನ ಕೊರತೆ ಸುಡುತ್ತಿತ್ತು. ಕಳೆದೊಂದು ದಶಕದಲ್ಲೇ ನೀರಿನ ಮೂಲಗಳನ್ನು ಗುರುತಿಸಲು 1,200 ಕೋಟಿ ರೂಪಾಯಿಗಳನ್ನು ವಿನಿಯೋಗಿಸಲಾಗಿದೆ. ಅಷ್ಟಾಗಿಯೂ ಸಮಸ್ಯೆ ಬಗೆಹರಿದಿಲ್ಲ. ಹಾಗಾಗಿಯೇ 'ಕಲ್ಪಸಾರ್ ಯೋಜನೆ'ಯನ್ನು ಜಾರಿಗೊಳಿಸಿದರೆ ಏನಾದರೂ ಪರಿಹಾರ ದೊರಕಿಸಬಹುದೆಂಬ ಆಶಾಭಾವ. ಈ ಯೋಜನೆ 'ಕ್ಯಾಂಬೆ ಕೊಲ್ಲಿ' ಎಂದು ಕರೆಯಲ್ಪಡುವ ಸ್ಥಳಕ್ಕಡ್ಡವಾಗಿ ಕಟ್ಟಲ್ಪಡಲು ಯೋಜಿಸಿರುವ 64 ಕಿ.ಮೀ. ಉದ್ದದ ಕಟ್ಟಿನ ಕುರಿತದ್ದಾಗಿತ್ತು.





ಸಮುದ್ರಕ್ಕೆ ನುಗ್ಗುತ್ತಿದ್ದ 13 ನದಿಗಳ ನೀರನ್ನು ಅಲ್ಲಿಯೇ ಅಡ್ಡ ಹಿಡಿದು ಸಿಹಿನೀರಿನ ದೊಡ್ಡ ಕೊಳವನ್ನಾಗಿ ಮಾರ್ಪಡಿಸುವ ಆಶಯ ಅದರಲ್ಲಿ ಅಡಗಿತ್ತು. ಪರಿಣತರೇ ಹೇಳುವ ಪ್ರಕಾರ 2,000 ಚದರ ಕಿಲೋಮೀಟರ್ ಆವರಿಸಿಕೊಳ್ಳುವ 'ಕಲ್ಪಸಾರ್ ಯೋಜನೆ' ರಾಜಕೋಟ್‌ನಲ್ಲಿ ನಿರ್ಮಿಸಿದ ಭಾದರ್ ಜಲಾಶಯಕ್ಕಿಂತ ಐವತ್ತು ಪಟ್ಟು ದೊಡ್ಡದಿರುತ್ತದೆ. ರಾಜ್ಯದಲ್ಲಿ ಈಗಿರುವ ಎಲ್ಲಾ ಅಣೆಕಟ್ಟುಗಳಿಗಿಂತ ಹೆಚ್ಚಿನ ಪ್ರಮಾಣದ ನೀರನ್ನು ಹಿಡಿದಿಡುವ ಸಾಮರ್ಥ್ಯ ಇದರದು. ಸರ್ದಾರ್ ಅಣೆಕಟ್ಟಿನ ಒಡಲಲ್ಲಿರುವ ನೀರಿನ ಮೂರು ಪಟ್ಟು ನೀರು ಇದರಲ್ಲಿ ಸಂಗ್ರಹವಾಗುತ್ತದೆ ಎಂದ ಮೇಲೆ ಹೆಚ್ಚಿನ ವಿವರಣೆ ಏಕೆ?

ಬಹಳ ಮಹತ್ವದ ಸಂಗತಿಯೇನೆಂದರೆ ಈ ಯೋಜನೆ ಜಾರಿಗಾಗಿ ಯಾರಿಗೂ ಪುನರ್ವಸತಿ ಕಲ್ಪಿಸುವ ಸಮಸ್ಯೆಯೇ ಉದ್ಭವಿಸುತ್ತಿರಲಿಲ್ಲ. ಈ ಯೋಜನೆಯ ಪರವಾಗಿ ನಿಲ್ಲುವ ಅನೇಕ ಅಂಶಗಳು ದೊರಕುತ್ತಾ ಹೋಗುತ್ತವೆ. 5,800 ಮೆಗಾವ್ಯಾಟ್‌ನ ವಿದ್ಯುತ್ತನ್ನು ಉಬ್ಬರ ಶಕ್ತಿಯ ಆಧಾರದ ಮೇಲೆ ಪಡೆಯುವ ಸಾಧ್ಯತೆ. ಇದು 1,054,500 ಹೆಕ್ಟೇರ್‌ನ ದಕ್ಷಿಣ ಸೌರಾಷ್ಟ್ರದ ಭೂಮಿಗೆ 5.61 ಮಿಲಿಯನ್ ಕ್ಯೂಬಿಕ್ ಮೀಟರ್ ನೀರಾವರಿ ಒದಗಿಸುವ ಸಾಮರ್ಥ್ಯ ಹೊಂದಿತ್ತು. ಇದರ ಜೊತೆಗೆ 900 ಮಿಲಿಯನ್ ಕ್ಯೂಬಿಕ್ ಮೀಟರ್ ನೀರು ಗೃಹೋಪಯೋಗಿ ಕೆಲಸಗಳಿಗೆ. ಕಛ್ ಹಾಗೂ ಸೌರಾಷ್ಟ್ರಗಳ ಕೈಗಾರಿಕಾ ಅಭಿವೃದ್ಧಿಗೆ 500 ಮಿಲಿಯನ್ ಕ್ಯೂಬಿಕ್ ಮೀಟರ್. 'ಹಸ್‌ಕೋನಿಂಗ್' ಎಂಬ ಅಂತಾರಾಷ್ಟ್ರೀಯ ಕಂಪನಿಯ ಸರ್ವೇಯನ್ನೂ ಲೆಕ್ಕಕ್ಕೆ ತೆಗೆದುಕೊಳ್ಳುವುದಾದರೆ, ಅಣೆಕಟ್ಟಿನ ನಡುವೆ ಸರದಿ ಹೆದ್ದಾರಿಯನ್ನೂ, ರೈಲ್ವೆ ದಾರಿಯನ್ನೂ ನಿರ್ಮಿಸಬಹುದಿತ್ತು. ಈ ನಿಟ್ಟಿನಲ್ಲಿ ಅದೇಕೋ ಕೆಲಸ ನಿಧಾನವಾಗುತ್ತಿದೆ. ಕಾಮಗಾರಿ ಆರಂಭಿಸುವುದಕ್ಕೂ ಮುಂಚೆ 'ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಓಷನ್ ಟೆಕ್ನಾಲಜಿ' ತನ್ನ ಸರ್ವೇ ಒಪ್ಪಿಸಬೇಕು.

ಮಹಾನ್ ಯೋಜನೆಯೊಂದು ಸಾಕಾರಕ್ಕಾಗಿ ಕಾದಿದೆ.





# 35
# ಮಕಾಡೆ ಮಲಗಿದ ಬಿಜೆಪಿ ಲೆಕ್ಕ!

ಕೇಂದ್ರದಲ್ಲಿ ಎನ್‌ಡಿಎ ಸರಕಾರ ಒಳ್ಳೆಯ ಫಾರ್ಮ್‌ನಲ್ಲೇ ಇತ್ತು. ಮಾರುಕಟ್ಟೆ ಉಬ್ಬಿ ನಿಂತಿತ್ತು. ಅರ್ಥವ್ಯವಸ್ಥೆ ದಾಖಲೆಯ 10.6 ದರದಲ್ಲಿ ಅಭಿವೃದ್ಧಿ ವೇಗ ದಾಖಲಿಸಿತ್ತು. ರಾಜಸ್ಥಾನ, ಮಧ್ಯಪ್ರದೇಶಗಳ ವಿಧಾನಸಭೆ ಗೆಲುವು ಬಿಜೆಪಿಯನ್ನು ಉತ್ತೇಜಿಸಿತ್ತು. ರಾಜಕೀಯವಾಗಿ ತುಂಬ ಸ್ಥಿರತೆಯನ್ನು ಹೊಂದಿದ್ದ ಸಮಯವಾಗಿತ್ತದು. ಸೆಪ್ಟೆಂಬರ್ 2004ರ ವೇಳೆಗೆ ಚುನಾವಣೆಗಳು ಜರುಗಬೇಕಾಗಿತ್ತು. ಆದರೆ 'ಫೀಲ್ ಗುಡ್ ಫ್ಯಾಕ್ಟರ್' ಅಂಶವನ್ನು ತನ್ನ ಲಾಭಕ್ಕಾಗಿ ಬಳಸಿಕೊಳ್ಳಬೇಕು ಅಂತ ಹೊರಟಿತು ಬಿಜೆಪಿ. ಹಾಗಾಗಿಯೇ ಅವಧಿಗೆ ಮೊದಲೇ ಚುನಾವಣೆ ಎದುರಿಸುವ ನಿರ್ಧಾರಕ್ಕೆ ಬಂತು. ಪ್ರಧಾನಿ ವಾಜಪೇಯಿ ಇದಕ್ಕೆ ಅಸಮ್ಮತಿ ಸೂಚಿಸಿದ್ದರು. ಜಸ್ವಂತ್‌ಸಿಂಗ್‌ರವರು ಸೂಚಿಸಿದ 'ಇಂಡಿಯಾ ಶೈನಿಂಗ್' ಘೋಷಣೆ ಕೂಡ ಅವರಿಗೆ ಸೇರಿರಲಿಲ್ಲ, ಆದರೆ ಪ್ರಮೋದ್ ಮಹಾಜನ್‌ರಂತಹ ಯುವ ಹುಮ್ಮಸ್ಸಿನ ಅನೇಕ ಬಿಜೆಪಿ ನಾಯಕರು ಇದನ್ನೆಲ್ಲ ಕಿವಿಗೆ ಹಾಕಿಕೊಳ್ಳುವ ಪುರುಸೊತ್ತನ್ನೇ ತೋರಲಿಲ್ಲ, ಅತಿಯಾದ ಆತ್ಮವಿಶ್ವಾಸದಲ್ಲಿ ಚುನಾವಣೆಯನ್ನು ಬರಮಾಡಿಕೊಂಡರು. ಅಷ್ಟೇ ವೇಗದಲ್ಲಿ ಸೋಲು ಸಹ ಬಂದಿತ್ತು.

ಲೆಕ್ಕಾಚಾರ ಮಕಾಡೆ ಮಲಗಿತ್ತು.

'ಚುನಾವಣೆ ಎದುರಿಸಲು ಸಂಘಟನೆ ಇನ್ನೂ ಸಿದ್ಧವಾಗಿರಲಿಲ್ಲ. ಪಕ್ಷವನ್ನು ಸಂಘಟಿಸುವ ಬದಲು ಅಧಿಕಾರ ಅನುಭವಿಸುವುದರಲ್ಲೇ ಬಹಳಷ್ಟು ಬಿಜೆಪಿ ನಾಯಕರು ಮಗ್ನರಾಗಿದ್ದರು. ಅಧಿಕಾರ ಬಿಜೆಪಿಯನ್ನು ಭ್ರಷ್ಟವಾಗಿಸಲಿಲ್ಲವಾದರೂ, ಅಹಂಕಾರಿಗಳನ್ನಾಗಿಸಿತ್ತು. ಐದು ವರ್ಷದ ಹಿಂದೆ ಐತಿಹಾಸಿಕವಾಗಿ ದಿಲ್ಲಿ ಪಡಸಾಲೆಗೆ ಪಕ್ಷ ಬಂದಿತ್ತು. ಕಡಿಮೆ ಅವಧಿಯಲ್ಲೇ ಅದು ತನಗೆ ದೊರೆತ ಜನಾಭಿಪ್ರಾಯಕ್ಕೆ ತಾನು ಪಾತ್ರನಲ್ಲ ಅಂತ ನಿರೂಪಿಸಿತು. 'ಇಂಡಿಯಾ

ಶೈನಿಂಗ್' ಘೋಷಣೆ ಪಟ್ಟಣಗಳಲ್ಲೂ ಸಹ ಕೆಲಸಕ್ಕೆ ಬಾರದೇ ಹೋಯಿತು. ಸರಕಾರ ವಿರೋಧಿ ಅಲೆಯಲ್ಲಿ ಬಿಜೆಪಿ ಕೊಚ್ಚಿ ಹೋಯಿತು'.

ಹಾಗೆಂದು ಬರೆಯಿತು 'ಇಂಡಿಯಾ ಟುಡೆ'.

ಬಿಜೆಪಿ ಚುನಾವಣೆಗೆ ಮುಂದಾಗುವ ನಿರ್ಧಾರ ಕೈಗೊಳ್ಳಲು ಕೆಲವು ಅಂಶಗಳು ಪ್ರೇರಣೆಯಾಗಿದ್ದವು. 'ಫೀಲ್ ಗುಡ್ ಫ್ಯಾಕ್ಟರ್' ಇದ್ದಿದ್ದು ತೀರಾ ಸುಳ್ಳೇನಾಗಿರಲಿಲ್ಲ. 'ಎಿಕ್–ಟಿಎನ್ಎಸ್' ಸಮೀಕ್ಷೆ ಬಿಜೆಪಿ 230ರಿಂದ 265 ಸೀಟುಗಳನ್ನು ಗಳಿಸಬಹುದು ಅಂತ ಹೇಳಿತ್ತು. ಅದು 1999ರಲ್ಲಿ ಅವರು ಗಳಿಸಿದ ಸಂಖ್ಯೆಗಿಂತ ಕಡಿಮೆಯಾಗಿತ್ತೇನೋ ನಿಜ. ಫೆಬ್ರವರಿ 5ಕ್ಕೆ ವಿಸರ್ಜನೆಗೊಂಡ ಲೋಕಸಭೆ, ಮಾರ್ಚ್ ವೇಳೆಗೆಲ್ಲ ಮತ್ತೆ ಪುನರಾರಂಭವಾದೀತೆಂದು ಬಿಜೆಪಿ ಆಶಿಸಿತ್ತು. ಆದರೆ 4 ಹಂತಗಳ ಚುನಾವಣೆ ಮುಗಿಯುವುದಕ್ಕೇನೆ ಮೇ 10ರವರೆಗೆ ಸಮಯ ತಗುಲಿತು. ಅಷ್ಟರಲ್ಲಾಗಲೇ ಬಿಜೆಪಿ ನಾಯಕರ ಮೈಮೇಲೆ ಚಳಿಗುಳ್ಳೆಗಳು ಏಳಲು ಆರಂಭಿಸಿದ್ದವು. 'ಬಿಜೆಪಿಗೆ ಮೈತ್ರಿಯೇ ಶತ್ರುವಿನಂತಾಯಿತು. ತಮಿಳುನಾಡು ಆತ್ಮಹತ್ಯಾ ಸ್ಥಾನದಂತಾಗಿತ್ತು. ಎಲ್ಲಾ 39 ಸ್ಥಾನಗಳಲ್ಲೂ ಗೆದ್ದ ಕರುಣಾನಿಧಿ ಅವನ್ನೆಲ್ಲ ಸೋನಿಯಾ ಗಾಂಧಿಗೆ ಅರ್ಪಿಸಿ ಪುನೀತರಾಗಿಬಿಟ್ಟರು. ಆಂತರಿಕ ಕಲಹಗಳ ಕಾರಣದಿಂದಾಗಿ ಬಿಜೆಪಿಗೆ ಉತ್ತರ ಪ್ರದೇಶದಲ್ಲಿ ದೊರೆತಿದ್ದೂ ಸಹ ಹತ್ತೇ ಸೀಟುಗಳು. ಇಪ್ಪತ್ತೊಂದು ಸೀಟುಗಳನ್ನು ಗೆಲ್ಲುತ್ತೇನೆ ಅಂತ ಹೊರಟ ಗುಜರಾತಿನಲ್ಲೂ ತೆಕ್ಕೆಗೆ ಬಂದಿದ್ದು ಹದಿನಾಲ್ಕೇ ಸೀಟುಗಳು. ಕರ್ನಾಟಕದಲ್ಲೊಂದೇ ಸಾಧನೆ ಮೆರೆಯಿತು ಬಿಜೆಪಿ ಎಂದು ಇಂಡಿಯಾ ಟುಡೆ ವಿಶ್ಲೇಷಿಸಿತು.

ಯಾವಾಗ ಚುನಾವಣಾ ಫಲಿತಾಂಶ ಹೊರಬಿತ್ತೋ ಆವಾಗಲೇ ಟೀಕಾಸ್ತ್ರಗಳು ಹೊರಬಿದ್ದವು.

ಗುಜರಾತಿನಲ್ಲಿ ಬಿಜೆಪಿಗೆ 14 ಹಾಗೂ ಕಾಂಗ್ರೆಸ್ಸಿಗೆ ಹನ್ನೆರಡು ಸೀಟುಗಳು ದೊರಕಿದ್ದೇನೋ ನಿಜ. ಆದರೆ ಬಿಜೆಪಿ ಪಾಲಿಗೆ ಅದು ವೈಫಲ್ಯವೇ ಆಗಿತ್ತು. ಪಕ್ಷದಲ್ಲೇ ಇದ್ದ ಮೋದಿ ವಿರೋಧಿಗಳೆಲ್ಲ ಒಮ್ಮೆಗೇ ಚಿಗಿತುಕೊಂಡುಬಿಟ್ಟರು. ಜೂನ್, 14ರ 'ಟೈಮ್ಸ್ ನ್ಯೂಸ್ ನೆಟ್‌ವರ್ಕ್' ವರದಿಯಲ್ಲಿ ಹಿರಿಯ ಬಿಜೆಪಿ ಮನುಷ್ಯನೊಬ್ಬ ಹೀಗೆ ಹೇಳಿದ್ದಾಗಿ ವರದಿಯಾಯಿತು–'' ನಾವು ಮೋದಿ ಶೈಲಿಯ ವಿರುದ್ಧ ಇದ್ದೇವೆ, ನಮಗೆ ಮೋದಿಯ ಅಗತ್ಯವಿಲ್ಲ''. ಮೋದಿಗೆ ಆಂತರಿಕವಾಗಿ ಬೆಂಬಲವೇ ಇಲ್ಲ ಅಂತಲೂ ಅದು ವರದಿ ಮಾಡಿತು. ಆರೆಸ್ಸೆಸ್ ಮನುಷ್ಯ ಸಂಜಯ್ ಜೋಷಿಗೂ ಮುಖ್ಯಮಂತ್ರಿಗೂ ನಡುವೆ ಯಾವ ಪ್ರೀತ್ಯಾದರಗಳೂ ಉಳಿದಿಲ್ಲ ಅಂತ ಅದು ಬರೆಯಿತು. 'ಬಿಜೆಪಿ ಸಂಸದೀಯ ಪಕ್ಷದಲ್ಲಿರುವ 128 ಸದಸ್ಯರ ಪೈಕಿ 85ರಷ್ಟು





ಸದಸ್ಯರಿಗೆ ಮೋದಿ ಬೇಕಾಗಿಯೇ ಇಲ್ಲ, ಕೇಶುಭಾಯ್ ನೇತೃತ್ವದ ಸೌರಾಷ್ಟ್ರದ ಸುಮಾರು 35 ಶಾಸಕರಂತೂ ಮೋದಿಗೆ ಬದ್ಧ ವಿರೋಧಿಗಳಾಗಿದ್ದಾರೆ' ಎಂದಿತು. ವಾಸ್ತವದಲ್ಲೂ 85 ಎಮ್ಮೆಲ್ಲೆಗಳು ಬಿಜೆಪಿ ರಾಜ್ಯಾಧ್ಯಕ್ಷ ರಾಜೇಂದ್ರ ಸಿನ್ಹ ರಾಣಾರನ್ನು ಭೇಟಿಯಾಗಿ ಮೋದಿ ಕಾರ್ಯಶೈಲಿಯ ವಿರುದ್ಧ ಅಸಮಾಧಾನ ತೋಡಿಕೊಂಡರು.

ಹೀಗೆಲ್ಲ ನಡೆಯುತ್ತಿರಬೇಕಾದರೆ ವಾಜಪೇಯಿ ಸಹ ಕನಲಿಹೋದರು. ಅವರ ಹೆಸರಲ್ಲಿ ಹೊರಬಂದ ಹೇಳಿಕೆಯೊಂದು 'ಗುಜರಾತ್ ಹಿಂಸಾಚಾರವೇ ಅಲ್ಲಿನ ಲೋಕಸಭಾ ಸ್ಥಾನಗಳಲ್ಲಿ ಬಿಜೆಪಿಗೆ ಒಳ್ಳೆಯ ಫಲಿತಾಂಶ ಬಾರದಿರಲು ಕಾರಣವಾಗಿದ್ದಿರಬಹುದು' ಅನ್ನುವ ಗುಮಾನಿ ಹೊತ್ತಿತ್ತು. ಅಷ್ಟು ಸಿಕ್ಕಿದ್ದೇ ತಡ, 'ಮೋದಿಯನ್ನು ಕೆಳಗಿಳಿಸಲು ವಾಜಪೇಯಿ ಉತ್ಸುಕರಾಗಿದ್ದಾರೆ' ಎಂಬ ಧಾಟಿಯಲ್ಲಿ ಪತ್ರಿಕೆಗಳು ಬರೆದವು. ಅದು ಬಂಡಾಯದ ಬಾವುಟ ಹಾರಿಸುತ್ತಿದ್ದವರ ಮುಖವಾಣಿಯಾಗಿಬಿಟ್ಟಿತು. ರಾಜ್ಯದ ಬಂಡಾಯ ನಾಯಕರುಗಳಿಗಂತೂ ವಾಜಪೇಯಿ ಹೇಳಿಕೆ ವರವಾಗಿ ಸಿಕ್ಕಿತು. ಅವರು ಮೋದಿ ವಿರುದ್ಧ ದಿನಕ್ಕೊಂದು ಹೇಳಿಕೆ ನೀಡತೊಡಗಿದರು. ಕಾಶೀರಾಂ ರಾಣಾ, ಹರೇನ್ ಪಾಠಕ್ ಹಾಗೂ ವಲ್ಲಭಭಾಯ್ ಕಠಾರಿಯಾ ಅವರ ಹೆಸರುಗಳು ಮೋದಿ ಬದಲಿಗೆ ಗಾದಿ ಏರಬಲ್ಲ ವ್ಯಕ್ತಿಗಳ ಪಟ್ಟಿಯಲ್ಲಿ ಕೇಳಿ ಬಂದವು. 'ಮೋದಿ ಯಾವ ಎಮ್ಮೆಲ್ಲೆಗಳ ಮನವಿಗಳನ್ನೂ ಮನ್ನಿಸುತ್ತಿಲ್ಲ, ಅವರ ಸರ್ವಾಧಿಕಾರಿ ಧೋರಣೆ ಕಾರ್ಯಕರ್ತರಿಗೆ ಅಗೌರವ ಉಂಟುಮಾಡುತ್ತಿದೆ ಎಂಬ ಭಾವನೆ ದಟ್ಟವಾಗಿದೆ' ಎಂದು 2004, ಜುಲೈ 14ರ ಸಂಚಿಕೆಯಲ್ಲಿ 'ಔಟ್‌ಲುಕ್' ಬರೆಯಿತು. ತಮ್ಮ ವಿರುದ್ಧ ಇಷ್ಟೆಲ್ಲ ಗುಲ್ಲೇಳುತ್ತಿರಬೇಕಾದರೆ, ಮೋದಿ ಮೂರು ದಿನಗಳ 'ಗ್ಯಾನ್ ರಥಾ ಯಾತ್ರಾ' ಮೂಲಕ ಹೆಣ್ಣುಮಕ್ಕಳನ್ನು ಶಾಲೆಗೆ ಕರೆತರುವ ಯೋಜನೆಯಲ್ಲಿ ಶ್ರಮಿಸುತ್ತಿದ್ದರು. ಮೋದಿ ವಿರುದ್ಧದ ಅಲೆ ಪ್ರಬಲವಾಗುತ್ತಿರುವಂತೆ ಭಾಸವಾಗುತ್ತಿತ್ತು. 'ಗುಜರಾತಿನಲ್ಲಿ ಬಿಜೆಪಿ ಒಂದೇ ಧ್ರುವದ ಮೇಲೆ ಎದ್ದು ನಿಂತಿಲ್ಲ, ಅದು ಸಾವಿರಾರು ಪಕ್ಷದ ಕಾರ್ಯಕರ್ತರ ಬೆವರು ಹಾಗೂ ದುಡಿಮೆಯ ಮೇಲೆ ಕಟ್ಟಲ್ಪಟ್ಟದ್ದು. ಆದರೆ ಮೋದಿ ತಾವೊಬ್ಬರೆ ಗುಜರಾತಿನಲ್ಲಿ ಹಿಂದುತ್ವದ ಪ್ರವಾಹ ಏಳಲು ಕಾರಣರಾದವರೆಂಬಂತೆ ನಂಬಿಸುತ್ತಿದ್ದಾರೆ. ಇದು ತಪ್ಪಾದದ್ದು' ಎಂದು ಪತ್ರಿಕೆಯೊಂದು ಬರೆಯಿತು. ಆರೆಸ್ಸೆಸ್ ಆದಿಯಾಗಿ ಎಲ್ಲರೂ ಮೋದಿ ವಿಚಾರದಲ್ಲಿ ಭಿನ್ನ ವಿಚಾರಗಳನ್ನು ಹೊಂದಿದಂತಿತ್ತು. ಎಲ್ಲಾ ವ್ಯತಿರಿಕ್ತಕ್ಕೆ ಹೋಗಿದೆಯಾ ಅಂದುಕೊಳ್ಳುತ್ತಿರುವಾಗಲೇ ಬಿಜೆಪಿ ಅಧ್ಯಕ್ಷ ವೆಂಕಯ್ಯನಾಯ್ಡು ವಾಜಪೇಯಿಯವರಿಗೆ ಫೋನಾಯಿಸಿದರು. ಮೋದಿ ಬದಲಿಗೆ ಇನ್ಯಾರನ್ನೋ ಗಾದಿಗೆ ತರುವ ಪ್ರಸ್ತಾವವೇ ಇಲ್ಲ ಎಂದುಬಿಟ್ಟರವರು. ಗುಜರಾತ್ ಗಲಭೆ ಬಿಜೆಪಿ ವೈಫಲ್ಯಕ್ಕೆ ಕಾರಣ ಎಂಬ ವಾದವೇ

ಸರಿಯಾಗಿಲ್ಲ ಎಂದರು ಆರೆಸ್ಸೆಸ್ ಮುಖ್ಯಸ್ಥ ಕೆ. ಸುದರ್ಶನ್. ರಾಮ್ ಮಾಧವ್ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಬಿಜೆಪಿ ಲೋಕಸಭೆಯಲ್ಲಿ ಕಳೆಗುಂದಿದಕ್ಕೆ ಮೋದಿ ಯಾವ ರೀತಿಯಲ್ಲೂ ಕಾರಣರಾಗುವುದಿಲ್ಲ ಎಂದುಬಿಟ್ಟರು. 'ಮೋದಿಯವರನ್ನು ಕೆಳಗಿಳಿಸಿ ಗುಜರಾತ್ ಗಲಭೆಗಳೇ ಪಕ್ಷದ ಕೆಟ್ಟ ಫಲಿತಾಂಶಕ್ಕೆ ಕಾರಣ ಎಂದು ಒಪ್ಪಿಕೊಂಡರೆ ಸೆಕ್ಯುಲರಿಸ್ಟ್‌ಗಳ ನಿಲುವನ್ನು ಒಪ್ಪಿಕೊಂಡಂತಾಗುತ್ತದೆ ಎಂಬ ಕಾರಣಕ್ಕಾಗಿ ಪಕ್ಷ ನಿರ್ಧಾರದಿಂದ ದೂರ ಸರಿಯಿತು' ಎಂದು ಪ್ರಭಾವಿ ಇಂಗ್ಲಿಷ್ ಪತ್ರಿಕೆಯೊಂದು ಹುಸಿ ವಿಶ್ಲೇಷಣೆ ಮಾಡಿತು.

2006, ಜೂನ್ 28 ರಂದು 'ಚಿತ್ರಲೇಖಾ' ಪತ್ರಿಕೆ ಮೋದಿಯ ದೌರ್ಬಲ್ಯಗಳೇನು ಎಂಬುದರ ಬಗ್ಗೆ ಚರ್ಚಿಸಿತು.

'ವಾಸ್ತವದಲ್ಲಿ ಪರಿಸ್ಥಿತಿ ಗಂಭೀರವಾಗಿಯೇ ಇದೆ. ಮೋದಿ ಪ್ರಾಮಾಣಿಕ ಹಾಗೂ ಬುದ್ಧಿವಂತ. ಅದೇ ಅವರ ಜತೆಗಾರರಿಗೆ ಮುಳುವಾಗಿದೆ. ಮೋದಿ ಯಾವ ವಿಷಯವನ್ನೇ ಎತ್ತಿಕೊಂಡರೂ ಅದನ್ನು ತಾರ್ಕಿಕ ಅಂತ್ಯಕ್ಕೆ ಕೊಂಡೊಯ್ಯುತ್ತಾರೆ. ಆತ ಜನರನ್ನು ಮೋಡಿ ಮಾಡಬಲ್ಲ, ಆದರೆ ಅವರ ಕಾರ್ಯಶೈಲಿ, ಗರ್ವಭಾವ, ಯಾರನ್ನೂ ನಂಬದೇ ಇರುವ ಜಾಯಮಾನಗಳೇ ಅವರ ವಿರುದ್ಧ ಕೆಲಸ ಮಾಡುತ್ತಿವೆ. ಯಾರನ್ನೇ ಆಗಲಿ ಖಂಡಿಸುವಾಗ ಮುಖದ ಮೇಲೆ ಹೊಡೆದಂತೆ ಮಾತನಾಡುವುದು ಮೋದಿಗೆ ರೂಢಿ. ಬಿಜೆಪಿ ನಾಯಕರೊಬ್ಬರು ಅಳಲು ತೋಡಿಕೊಂಡಂತೆ, ಮೋದಿ ಜತೆ ಸಮಸ್ಯೆಯೇನೆಂದರೆ, ಅವರು ಯಾರ ಮಾತನ್ನೂ ಕೇಳುವುದಿಲ್ಲ, ಕಿಸಾನ್ ಸಂಘ, ವಿದ್ಯಾರ್ಥಿ ಪರಿಷತ್ ಹಾಗೂ ಶಾಸಕರು ಎಲ್ಲರನ್ನೂ ಅವರು ಅಸಮಾಧಾನಕ್ಕೀಡು ಮಾಡಿದ್ದಾರೆ' ಎಂದಿತು.

'ಚಿತ್ರಲೇಖಾ' ಬರೆದ ಪ್ರಕಾರ ರಾಜ್ಯ ಬಿಜೆಪಿ ಅಧ್ಯಕ್ಷ ಸಹ ಮೋದಿಯೆದುರು ನಿಂತು ಮಾತಾಡುವ ಸ್ಥಿತಿಯಲ್ಲಿರಲಿಲ್ಲ.

ಮೋದಿ ತಮ್ಮ ಮೇಲೆ ಬಂಡಾಯಗಾರರ ಪಿತೂರಿ ಜಾಸ್ತಿಯಾಗುತ್ತಿದ್ದಂತೆ ಆಪ್ತರಾದ ವಜುಭಾಯ್ ವಾಲಾ, ಅಶೋಕ್ ಭಟ್, ಕೌಶಿಕ್ ಪಟೇಲ್ ಹಾಗೂ ಭೂಪೇಂದ್ರಸಿನ್ಹಾ ಚೂಡಾಸಮ ಅವರನ್ನು ಬಿಜೆಪಿ ಸಂಸದೀಯ ಸಮಿತಿ ಸಭೆಗಳಲ್ಲಿ ತಮ್ಮ ಪರವಾದ ಮಂಡಿಸಲು ಕಳುಹಿಸಿದರು. ನರೇಂದ್ರ ಮೋದಿ ಗೋಧ್ರೋತ್ತರ ಘಟನೆಗಳನ್ನು ಸರಿಯಾಗಿ ನಿಭಾಯಿಸದಿರುವುದೇ ಚುನಾವಣಾ ವೈಫಲ್ಯಕ್ಕೆ ಕಾರಣ ಎಂಬ ವಾದ ನೋಡನೋಡುತ್ತಿದ್ದಂತೆ ಸತ್ತು ಮಲಗಿಬಿಟ್ಟಿತು. ಕೊನೆಗೊಮ್ಮೆ ಕುಲುವಿನಲ್ಲಿ ಪತ್ರಕರ್ತರು ಅದೇ ವಿಷಯದ ಕುರಿತಾಗಿ ವಾಜಪೇಯಿಯವರನ್ನು ಕೆದಕಿದಾಗ 'ಬಿಡಿ, ಅದು ಭೂತಕಾಲಕ್ಕೆ ಸಂದು ಹೋದ ಘಟನೆ' ಅಂದುಬಿಟ್ಟರು. ಮೋದಿಯನ್ನು ಎಳೆದೊಯ್ದು





ಮುಳುಗಿಸಲೆಂದೇ ಬಂದಂತಿದ್ದ ಅಲೆಯೊಂದು ಹಾಗೆಯೇ ಆವಿಯಾದಂತಾಯ್ತು. ಯಾವ ಬಿಜೆಪಿ ಬಂಡಾಯಗಾರರ ಮಾತಿಗೆ ಕಿವಿಯಾಗಿತ್ತೋ ಅದೇ ಬಿಜೆಪಿಯ ವರ್ಕಿಂಗ್ ಕಮಿಟಿ ಬಂಡಾಯದ ಬಾವುಟ ಹಾರಿಸುತ್ತಿದ್ದವರಿಗೆ ತೆಪ್ಪಗಿರಿ ಇಲ್ಲವೇ ಶಿಸ್ತುಕ್ರಮ ಎದುರಿಸಿ ಅಂತ ಆದೇಶ ಹೊರಡಿಸಿತು.

ಅಹೋರಾತ್ರಿಯಲ್ಲಿ ಎಲ್ಲವೂ ಬದಲಾಗಿತ್ತು.

ಆಗಸ್ಟ್ 19 ರ ಸಂಚಿಕೆಯಲ್ಲಿ ಮೋದಿಗೆ ಆ ರೀತಿಯಾದ ಶಕ್ತಿ ಬಂದಿದ್ದೆಲ್ಲಿಂದ ಅನ್ನುವುದರ ಬಗ್ಗೆ ಮಾರ್ಮಿಕ ವಿಶ್ಲೇಷಣೆಗಿಳಿಯಿತು 'ಇಂಡಿಯಾ ಟುಡೇ'. 'ವಸಭಾಯ್ ಮಲ್ಯಾಯ್, ರಣಚೋಡ್‌ಭಾಯ್ ಜಗಾದಿಯಾ ಮತ್ತು ಯಾಕೂಭಾಯ್ ಕೊಟಾರಿಯಾ ಗುಜರಾತಿನ ಬೇರೆ ಬೇರೆ ಪ್ರದೇಶಗಳಲ್ಲಿ ವಾಸಿಸುತ್ತಿರುವವರು. ಆದರೆ ಗುಜರಾತಿನ ಅಭಿವೃದ್ಧಿಯ ವಿಷಯದಲ್ಲಿ ಅವರೆಲ್ಲರ ಅಭಿಪ್ರಾಯ ಒಂದೇ. ಈ ಸರಕಾರ ಜನರ ಮನೆಬಾಗಿಲುಗಳನ್ನು ತಲುಪುವಲ್ಲಿ ಯಶಸ್ವಿಯಾಗಿದೆ ಎಂಬ ಸಂತೃಪ್ತ ನುಡಿಗಳೇ ಅವರಿಂದ ಬರುತ್ತವೆ. ಗುಣಮಟ್ಟದಲ್ಲಿ ಗುಣಾತ್ಮಕ ಬದಲಾವಣೆ ತಂದ ಗುಜರಾತ್ ಸರಕಾರದ ಕುರಿತಾದ ಜನಪ್ರಿಯ ದೃಷ್ಟಿಕೋನದ ಪ್ರತಿನಿಧಿಗಳಿವರು. ಯಾರ ಪಾಲಿಗೆ ಮುಖ್ಯಮಂತ್ರಿಯನ್ನು ಕಾಣುವುದೆಂದರೆ ಜೀವಮಾನದಲ್ಲೆ ಈಡೇರಲಾರದ ಆಸೆ ಎಂದಾಗಿತ್ತೋ, ಅಂತವರ ಮನೆಬಾಗಿಲಲ್ಲೇ ಮುಖ್ಯಮಂತ್ರಿ ಪ್ರತ್ಯಕ್ಷನಾಗಿ ಮುಖಾಮುಖಿ ಮಾತುಕತೆಗಿಳಿದಿದ್ದ, ವರ್ಷಗಟ್ಟಲೇ ಹನಿ ನೀರಿಗಾಗಿ ಬಾಯ್ತೆರೆದು ಕುಳಿತವರ ಮನೆಬಾಗಿಲಿಗೆ ಪೈಪಿನ ಮೂಲಕ ನೀರು ಹರಿದು ಬಂದಿತ್ತು. 'ಗುಣಮಟ್ಟದಲ್ಲಿ ರಾಜಿಯಿಲ್ಲದ ಆಡಳಿತ ಹಾಗೂ ಅದರಲ್ಲಿ ಜನರ ಗಮನಾರ್ಹ ಪಾಲ್ಗೊಳ್ಳುವಿಕೆಗೆ ಗುಜರಾತ್ ಒಂದು ಉತ್ತಮ ಉದಾಹರಣೆ. ಇಡೀ ದೇಶದಲ್ಲೇ ಗುಜರಾತನ್ನು ಒಂದು ಮಾದರಿ ರಾಜ್ಯವಾಗಿ ರೂಪಿಸುವುದರಲ್ಲಿ ರಾಜ್ಯ ಸರಕಾರ ತೆಗೆದುಕೊಂಡಿರುವ ಶ್ರಮ ಅಪಾರ. ಈ ಗುರಿಯನ್ನು ಸಾಧಿಸುವುದರಲ್ಲಿ ನಿಸ್ಸಂಶಯವಾಗಿಯೂ ಸರಕಾರ ಸಾಧನೆಯನ್ನೇ ಮೆರೆದಿದೆ ಅಲ್ಲದೇ 5 ಕೋಟಿ ಗುಜರಾತಿಗಳು ಹೆಮ್ಮೆಯಿಂದ ಎದೆಯುಬ್ಬಿಸುವಂತೆ ಮಾಡಿದೆ' ಎಂದು 'ಇಂಡಿಯಾ ಟುಡೆ' ಬರೆಯಿತು. ಆದರೆ ಯುಪಿಎ ಸರಕಾರ ಮಾತ್ರ ಮೋದಿ ಅಷ್ಟು ಸುಲಭಕ್ಕೆ ನಿರಾಳರಾಗುವಂತೆ ಬಿಟ್ಟುಬಿಡಲು ತಯಾರಿರಲಿಲ್ಲ. ಗುಜರಾತ್ ಸರಕಾರ ಅದಾಗಲೇ ಗೋಧ್ರಾ ದುರಂತದ ಕುರಿತು ವಿಚಾರಣೆ ನಡೆಸಲು ಜಿ. ಟಿ. ನಾನಾವತಿ ಹಾಗೂ ಕೆ. ಜಿ. ಶಾ ಆಯೋಗವನ್ನು ನೇಮಿಸಿತ್ತು. ಆದರೆ ಯುಪಿಎ ತನ್ನದೇ ಆದ ಯು.ಸಿ. ಬ್ಯಾನರ್ಜಿ ಆಯೋಗವನ್ನು ನೇಮಿಸಿತು. ಸಹಜವಾಗಿಯೇ ಇದೊಂದು 'ಅಸಂವಿಧಾನಿಕ ಹಾಗೂ ರಾಜಕೀಯ ಕ್ರಮ'

ಅಂತ ಬಿಜೆಪಿ ವಿರೋಧಿಸಿತು.

ಆದರಲ್ಲಿ ಯಾವ ಅನುಮಾನಗಳೂ ಇರಲಿಲ್ಲ.

ಸಮಿತಿ ಏನು ಹೇಳಲಿದೆ ಎಂಬುದನ್ನು ಯಾರಾದರೂ ಊಹಿಸಬಹುದಿತ್ತು. ಕೊನೆಗಾಗಿದ್ದೂ ಹಾಗೆಯೇ. ಸಾಬರಮತಿ ರೈಲಿನ ಬೋಗಿಗಳಿಗೆ ಬೆಂಕಿ ಹತ್ತಿಕೊಂಡಿದ್ದು ಕೇವಲ 'ಆಕಸ್ಮಿಕ'ವಾಗಿ ಎಂಬ ಪರಮ ಅಸಡ್ಡಾಳ ವರದಿ ಕೊಟ್ಟಿತು ಬ್ಯಾನರ್ಜೀ ಕಮೀಷನ್. ಆ ವರದಿಯನ್ನು ಯಾರೂ ನಂಬಲಿಲ್ಲ, ಯುಪಿಎ ಮಾತ್ರ ಅಂಥದೊಂದು ಮೂರ್ಖ ಹೇಳಿಕೆಯನ್ನು ನಂಬಲು ಸಾಧ್ಯವಿತ್ತು. ಇದರಿಂದ ನಿಮ್ಮ ಪ್ರತಿಷ್ಠೆಗೆ ಏನೂ ಧಕ್ಕೆಯಾಗಿಲ್ಲವಾ ಅಂತ ಮೋದಿ ಪ್ರತಿಕ್ರಿಯೆ ಕೇಳಿತು 'ದಿ ಸ್ಟೇಟ್ಸ್‌ಮನ್'. 'ನನ್ನ ಇಮೇಜಿನ ಬಗ್ಗೆ ನಾನ್ಯಾಕೆ ತಲೆ ಕೆಡಿಸಿಕೊಳ್ಳಲಿ? ಗುಜರಾತಿನ ಜನತೆ ನನಗೊಂದು ಕೆಲಸ ನೀಡಿದ್ದಾರೆ. ಅದನ್ನು ಪೂರೈಸುವ ಶಕ್ತಿಯನ್ನು ದೇವರು ನನಗೆ ನೀಡಿದ್ದಾನೆ. ಉಳಿದವರಿಗೆ ಅವರು ಮಾಡುತ್ತಿರುವ ಕೆಲಸ ಖುಷಿ ಕೊಡುತ್ತಿದ್ದರೆ ಅದನ್ನೇ ಮುಂದುವರಿಸಲಿ. ಯಾರೋ ಮಾಡುತ್ತಿರುವ ಹುರುಳಿಲ್ಲದ ಆರೋಪಗಳ ಕುರಿತು ಪ್ರತಿಕ್ರಿಯೆ ನೀಡುವುದಕ್ಕಾಗಿ ನಾನ್ಯಾಕೆ ನನ್ನ ಸಮಯ ಹಾಳು ಮಾಡಿಕೊಳ್ಳಲಿ' ಅನ್ನುತ್ತಾ ಮೈಕೊಡವಿಕೊಂಡು ಹೊರಟರು ಮೋದಿ! ದಿನ ಕಳೆಯುತ್ತಿದ್ದಂತೆ ಮೋದಿ ಅಲೆ ಬೀಸತೊಡಗಿತು. ನಷ್ಟ ಅನುಭವಿಸುತ್ತಿದ್ದ ಗುಜರಾತಿನ ಎರಡು ಸರಕಾರಿ ಸ್ವಾಮ್ಯದ ಕಂಪನಿಗಳನ್ನು ಲಾಭದ ಹಳಿ ಮೇಲೆ ತಂದು ನಿಲ್ಲಿಸಿದ್ದಕ್ಕೆ ಮೋದಿಗೆ ಶಹಭಾಸ್ ಗಿರಿಯಿತ್ತಿತು 'ಸ್ಟೇಟ್ಸ್‌ಮನ್'. ಒಎನ್‌ಜಿಸಿ 28 ತೈಲ ಬಾವಿಗಳನ್ನು ತೋಡಿ ಅವ್ಯಾವವೂ ಫಲ ಕೊಡದೇ ನಿಂತಿದ್ದವು. ಅದಕ್ಕೆ 400 ಮೀಟರ್ ದೂರದಲ್ಲಿ 'ಗುಜರಾತ್ ಸ್ಟೇಟ್ ಪೆಟ್ರೋಲಿಯಮ್ ಕಾರ್ಪೊರೇಷನ್' ಸ್ಟ್ರೈಕ್ ಆಯಿಲ್ ಹೊಂದಿತ್ತು. ಈ ಬಗ್ಗೆಯೂ ಬರೆಯಿತು 'ಸ್ಟೇಟ್ಸ್‌ಮನ್'. ಇದರ ಬೆನ್ನ ಹಿಂದೆಯೇ ವರ್ಷದ ಅವಧಿಯಲ್ಲೇ ಗುಜರಾತಿನಲ್ಲಿ 40,000 ಚೆಕ್ ಡ್ಯಾಮ್‌ಗಳು ಜನರ ಸಹಭಾಗಿತ್ವದೊಂದಿಗೆ ನಿರ್ಮಾಣವಾಗಿವೆಯೆಂದು ಮಾಧ್ಯಮದಲ್ಲಿ ವರದಿಗಳು ಕಾಣಿಸಿಕೊಂಡವು. ' 2010ರ ವೇಳೆಗೆ ಗುಜರಾತಿನ ಎಲ್ಲಾ ಹಳ್ಳಿಗಳೂ ಹಸಿರಿನಿಂದ ಕೂಡಿರುತ್ತವೆ. ಅಲ್ಲದೆ ಯಾವ ಊರಿಗೂ ನೀರಿನ ಕೊರತೆ ಅನ್ನುವುದೇ ಇರಲಾರದು' ಎಂದು ಆ ವರದಿ ಹೇಳಿತ್ತು.

ಇದು ನಿಜಕ್ಕೂ ಅಪರೂಪದ ಹೊಗಳಿಕೆ.

ಅನಂತರ ಬಂದಿದ್ದು ನವರಾತ್ರಿ. ಅಕ್ಟೋಬರ್ 14ರಿಂದ 22ರವರೆಗೆ ನೃತ್ಯದ ಹಬ್ಬಕ್ಕೆ ವೇದಿಕೆಯಾಗಿತ್ತು ಗುಜರಾತ್. ಮತ್ತೊಮ್ಮೆ ಪ್ರಜ್ವಲಿಸಿತ್ತು ಗುಜರಾತ್. ಹಣದ ಹೊಳೆಯೇ ಹರಿದು ಬಂತು. ರಿಲಯನ್ಸ್ ತನ್ನ ಕಡೆಯಿಂದ ಒಂದು ಕೋಟಿ ರೂಪಾಯಿ ಎತ್ತಿಕೊಟ್ಟಿತು.





ಉತ್ತರಾಯಣ ಹಬ್ಬಕ್ಕೆ ಏಳು ಕೋಟಿ ಕೊಡುಗೆ ನೀಡಿದ್ದ 'ಎಸ್ಸಾರ್' ಸಮೂಹ ಈ ಬಾರಿ ಸಹ ಒಂದು ಕೋಟಿ ರೂ.ಗಳನ್ನು ಎತ್ತಿಟ್ಟಿತು. ರಾಷ್ಟ್ರಪತಿ ಅಬ್ದುಲ್ ಕಲಾಂ ಹಾಗೂ ಉಪರಾಷ್ಟ್ರಪತಿ ಭೈರೋನ್ ಸಿಂಗ್ ಶೇಖಾವತ್‌ರನ್ನು ಕಾರ್ಯಕ್ರಮದ ಉದ್ಘಾಟನೆಗೆ ಆಹ್ವಾನಿಸಿದ್ದರು ಮೋದಿ. ಗುಜರಾತನ್ನು ರಾಷ್ಟ್ರ ಹಾಗೂ ಅಂತಾರಾಷ್ಟ್ರೀಯ ಮಟ್ಟದಲ್ಲಿ 'ಧಾರ್ಮಿಕ ಮತ್ತು ಆಧ್ಯಾತ್ಮಿಕ ಪ್ರವಾಸೋದ್ಯಮ' ತಾಣವನ್ನಾಗಿಸಿದ್ದಕ್ಕೆ ಶ್ಲಾಘಿಸಿದರು. ಇಂಥದ್ದೊಂದು ಸಮಾರಂಭದ ಮೂಲಕ 'ಫೆಸ್ಟಿವಲ್ ಟೂರಿಸಂ' ಎಂಬ ಹೊಸದೊಂದು ಪರಿಕಲ್ಪನೆಯನ್ನೇ ಹುಟ್ಟುಹಾಕಿದರು ಮೋದಿ. ಈ ಎಲ್ಲಾ ಹೊಗಳಿಕೆಗಳ ಮೇಲೆ ಇನ್ನೊಂದು ಹಿರಿಮೆಯ ಗರಿ ಇಟ್ಟಂತೆ ಒಲಿದಿದ್ದು ಕಾಮನ್‌ವೆಲ್ತ್ ಪುರಸ್ಕಾರ. 'ಕಾಮನ್‌ವೆಲ್ತ್ ಅಸೋಸಿಯೇಷನ್ ಫಾರ್ ಪಬ್ಲಿಕ್ ಹೆಲ್ತ್ ಅಂಡ್ ಮ್ಯಾನೇಜ್‌ಮೆಂಟ್' ಗುಜರಾತ್ ಸರಕಾರದ 'ಆಡಳಿತದಲ್ಲಿನ ಆವಿಷ್ಕಾರ'ವನ್ನು ಶ್ಲಾಘಿಸಿ ಬಂಗಾರದ ಪದಕ ಕೊಡಮಾಡಿತು. 2004 ಅಕ್ಟೋಬರ್ 24ರಂದು ಸಿಂಗಾಪುರದಲ್ಲಿ ನಡೆದ ಸಮಾರಂಭದಲ್ಲಿ ಇದನ್ನು ಘೋಷಿಸಲಾಯಿತು.

'ಈ ಮನುಷ್ಯನಲ್ಲಿ ನಿಜಕ್ಕೂ ಅಸಾಧಾರಣವಾದುದೇನೋ ಒಂದಿದೆ ಅಂತ ಜಗತ್ತು ಒಪ್ಪಿಕೊಂಡ ದಿನವಿದು. ಒಬ್ಬ ರಾಜಕಾರಣಿಯಾಗಿ ಮೋದಿ ಬಹಳ ವಿಶ್ವಾಸಾರ್ಹ ಹಾಗೂ ತಾನೇನಂದುಕೊಂಡಿರುವನೋ, ಏನು ಆಶ್ವಾಸನೆ ನೀಡಿರುವನೋ ಅದನ್ನು ಪಟ್ಟು ಬಿಡದೇ ಸಾಧಿಸಿ ತೋರುವ ವ್ಯಕ್ತಿ. ಅವರ ರಾಜಕೀಯ ವೈರಿಗಳನ್ನು ಹಾಗೂ ವಿರೋಧಿಗಳನ್ನು ನಡುಗುವ ಕಾಲುಗಳಲ್ಲಿ ನಿಲ್ಲುವಂತೆ ಮಾಡಿರುವ ವ್ಯಕ್ತಿ ಮೋದಿ' ಎಂದು ಲಂಡನ್‌ನ 'ಗುಜರಾತ್ ಟೈಮ್ಸ್' ಬರೆಯಿತು!





## 36
## ಪ್ರಜ್ವಲಿಸಿತು ಗುಜರಾತು

2004, ನವೆಂಬರ್ ಕೊನೆ ವಾರದಲ್ಲಿ ಮೋದಿ ಪೌರ್ವಾತ್ಯ ಪ್ರವಾಸಕ್ಕೆ ಹೊರಟು ನಿಂತರು. ಕ್ರಮವಾಗಿ ಸಿಂಗಪುರ, ಹಾಂಗ್‌ಕಾಂಗ್ ಹಾಗೂ ಆಸ್ಟ್ರೇಲಿಯಾಗಳು ಅವರ ಭೇಟಿ ಪಟ್ಟಿಯಲ್ಲಿದ್ದವು. ಜಾಗತಿಕ ಬಂಡವಾಳದಾರರೆದುರು ಗುಜರಾತನ್ನು 'ಬಂಡವಾಳ ಹೂಡಿಕೆಯ ತಾಣ'ವನ್ನಾಗಿ ಬಿಂಬಿಸುವ ಪ್ರಯತ್ನ ಮೋದಿಯವರದಾಗಿತ್ತು. ಮೊದಲಿಗೆ ಎರಡು ದಿನ ಸಿಂಗಪುರದ ಉದ್ಯಮ ಗಣ್ಯರ ಜತೆ ಮಾತನಾಡಿದರು. ಕೊನೆ ದಿನ 'ಇನ್‌ಸ್ಟಿಟ್ಯೂಟ್ ಆಫ್ ಸೌತ್ ಏಷಿಯನ್ ಸ್ಟಡೀಸ್' ವೇದಿಕೆಯಲ್ಲಿ ಗುಜರಾತಿನಲ್ಲಿ ಬಂಡವಾಳ ಹೂಡಲು ಇರುವ ಸಾಧ್ಯತೆಗಳನ್ನು ತಿಳಿಸಿಕೊಟ್ಟರು. 'ಫಾರ್ಮ್ ಟು ಫ್ಯಾಬ್ರಿಕ್, ಫ್ಯಾಬ್ರಿಕ್ ಟು ಫ್ಯಾಷನ್, ಫ್ಯಾಷನ್ ಟು ಎಕ್ಸ್‌ಪೋರ್ಟ್'–ಹೀಗೆ ಗುಜರಾತಿನ ಅಭಿವೃದ್ಧಿ ಮಾದರಿಯನ್ನು ಸರಳವಾಗಿ ಹರವಿಟ್ಟರು ಮೋದಿ. 'ಐಎಸ್‌ಎಎಸ್'ನ ಅಧ್ಯಕ್ಷ ಗೋಪಿನಾಥ ಪಿಳ್ಳೈ, 'ಗುಜರಾತ್ ಕೇವಲ ಸಿಂಗಪುರದ ಪಾಲಿಗೆ ಮಾತ್ರವಲ್ಲ ಎಲ್ಲ ಏಷ್ಯನ್ ರಾಷ್ಟ್ರಗಳ ಪಾಲಿಗೂ ಬಂಡವಾಳ ಹೂಡಿಕೆಗೆ ಅರ್ಹ ರಾಜ್ಯ ಎಂಬ ಹೆಗ್ಗಳಿಕೆ ಪಡೆದಿದೆ' ಎಂದು ಮೆಚ್ಚಿಕೊಂಡರು. ಹಾಂಕಾಂಗ್ ಭೇಟಿ ಮುಗಿಸಿ ಆಸ್ಟ್ರೇಲಿಯಾಕ್ಕೆ ತೆರಳಿದ ಮೋದಿ, ಅಲ್ಲಿ ವಿಶೇಷವಾಗಿ ಶಿಕ್ಷಣ ಕ್ಷೇತ್ರದಲ್ಲಿ ಸಹಕಾರ ತರುವ ವಿಷಯದಲ್ಲಿ ಯಶಸ್ವಿಯಾದರು. ಆಹಾರ ಪರಿಷ್ಕರಣೆ, ಉನ್ನತ ಶಿಕ್ಷಣ ಮತ್ತು ವೈದ್ಯಕೀಯ ಪ್ರವಾಸೋದ್ಯಮದಲ್ಲಿ ಸಹಕಾರ ಹೆಚ್ಚಿಸಲು ಅಲ್ಲಿನವರು ಉತ್ಸುಕತೆ ತೋರಿದರು.

ಆನಂತರ ಮೆಲ್ಬೋರ್ನ್ ಬಂದರಿಗೆ ಭೇಟಿಯಿತ್ತಿತು ಮುಖ್ಯಮಂತ್ರಿಗಳ ತಂಡ. ಬಂದರುಗಳನ್ನು ಖಾಸಗಿ ವಲಯದ ಮೂಲಕ ಅಭಿವೃದ್ಧಿಪಡಿಸುವುದು ಹಾಗೂ ವಿಶೇಷ ಆರ್ಥಿಕ ವಲಯಗಳ ಮೂಲಕ ಸಾಗರ ವ್ಯಾಪಾರವನ್ನು ಅಭಿವೃದ್ಧಿ ಪಡಿಸುವುದು

ಇವೆಲ್ಲದರ ಸಾಧ್ಯತೆಗಳ ಕುರಿತು ಚರ್ಚೆ ಮಾಡಿದರು. ಮೋದಿ ದಣಿವರಿಯದ ಮನುಷ್ಯ. ಬಂಡವಾಳವನ್ನು ಆಹ್ವಾನಿಸುತ್ತಾ ಈ ಪ್ರಮಾಣದ ಪ್ರವಾಸ ಕಾರ್ಯಕ್ರಮವನ್ನು ಯಾವ ಮುಖ್ಯಮಂತ್ರಿಯೂ ಹಮ್ಮಿಕೊಂಡಿರಲಿಲ್ಲ. 'ಬಿಜಿನೆಸ್ ಟೈಮ್ಸ್' ಎಂಬ ಹೆಸರಿನ ಪತ್ರಿಕೆಯೊಂದು ಆಶ್ಚರ್ಯದಿಂದ ಪ್ರಶ್ನಿಸಿತು, 'ಮಿತಿಮೀರಿದ ರಾಜಕೀಯ ವಿರೋಧಗಳ ನಡುವೆಯೂ ಮೋದಿ ಇಷ್ಟು ಪ್ರಬಲವಾಗಿ ಬೆಳೆಯುತ್ತಿರುವುದರ ಗುಟ್ಟಾದರೂ ಏನು?' ಅದಕ್ಕೆ ತಾನೇ ಉತ್ತರ ಕಂಡುಕೊಂಡಂತೆ ಪತ್ರಿಕೆ ಬರೆಯಿತು- 'ಸಧೃಡ ಹಾಗೂ ಶಕ್ತಿಶಾಲಿ ಗುಜರಾತನ್ನು ಕಟ್ಟುವಲ್ಲಿ ಅವರಿಗಿರುವ ವ್ಯಕ್ತಿಪರತೆ ಹಾಗೂ ವಿಧಾನಗಳೇ ಅವರನ್ನು ಹಾಗಾಗಿಸಿವೆ.'

### ಪ್ರಜ್ವಲಿಸಿತು ಗುಜರಾತು:

2005, ಜನವರಿ ಮೋದಿ ತಿಂಗಳು ಹಾಗೂ ಗುಜರಾತಿನ ತಿಂಗಳು ಎರಡೂ ಆಗಿತ್ತು! ಭಾರತದ ಯಾವ ರಾಜ್ಯಗಳಿಗೂ ಹಿಂದೆಂದೂ ಈ ರೀತಿಯ ಬಂಡವಾಳ ಹರಿದು ಬಂದಿರಲಿಲ್ಲ. 'ಬಹುಶಃ ಬಂಡವಾಳದಾರರಲ್ಲಿ ವಿಶ್ವಾಸ ಮೂಡಿಸಿದ ಒಂದೇ ರಾಜ್ಯ ನಮ್ಮದು. ಮೊದಲ ಜಾಗತಿಕ ಬಂಡವಾಳ ಹೂಡಿಕೆದಾರರ ಸಮಾವೇಶಕ್ಕೆ ಅಂತಹ ಯಶಸ್ಸು ಸಿಗಲು ಹೀಗೊಂದು ವಿಶ್ವಾಸವೇ ಕಾರಣ.' -ಇದು ಮೋದಿ ಮಾತು. ಎರಡನೇ 'ವೈಬ್ರಂಟ್ ಗುಜರಾತ್' ಹೂಡಿಕೆದಾರರ ಸಮಾವೇಶ 11ನೇ ಜನವರಿಯಂದು ಅಹಮದಾಬಾದಿನಲ್ಲಿ ಶುರುವಾಯಿತು. ಉಪರಾಷ್ಟ್ರಪತಿ ಭೈರೋನ್ ಸಿಂಗ್ ಶೇಖಾವತ್ ಉದ್ಘಾಟನೆಗೊಳಿಸಿದರು. 5000 ಪ್ರತಿನಿಧಿಗಳು, ಅವರಲ್ಲಿ 950 ಎನ್ನಾರೈಗಳು ಮತ್ತು 432 ವಿದೇಶಿ ಪ್ರತಿನಿಧಿಗಳು ಭಾಗವಹಿಸಿದ್ದ ಸಮಾರಂಭಕ್ಕೆ ಎಲ್.ಕೆ. ಆಡ್ವಾಣಿ ಸಹ ಬಂದಿದ್ದರು. ರಿಲಯನ್ಸ್‌ನ ಮುಖೇಶ್ ಅಂಬಾನಿ, ಎಸ್ಸಾರ್‌ನ ಅಧ್ಯಕ್ಷ ಶಶಿ ರುಯಿಯಾ, ವಿಡಿಯೋಕಾನ್‌ನ ವೇಣುಗೋಪಾಲ್ ಧೂತ್, ಸಾಂಘ್ವಿ ಸಮೂಹದ ಸುಧೀರ್ ಮೆಹ್ತಾ ಹಾಗೂ ರವಿ ಸಾಂಘ್ವಿ ಹೀಗೆ ದಿಗ್ಗಜರ ದಂಡೇ ನೆರೆದಿತ್ತು.

'ಫೈನಾನ್ಷಿಯಲ್ ಎಕ್ಸ್‌ಪ್ರೆಸ್' ತನ್ನ ಜನವರಿ 13 ರ ಸಂಚಿಕೆಯಲ್ಲಿ ಹೀಗೆ ಬರೆಯಿತು-'ಇದು ಗುಜರಾತಿನಲ್ಲಿ ಮಾತ್ರವೇ ನಡೆಯಲು ಸಾಧ್ಯ! ಎರಡನೇ ಸಮಾವೇಶದ ಮೊದಲ ದಿನದಲ್ಲೇ ಗುಜರಾತಿಗೆ 87,155 ಕೋಟಿ ರೂಪಾಯಿಗಳ ಬಂಡವಾಳ ಹೂಡಿಕೆಯ ಪ್ರಸ್ತಾಪ ಪ್ರಮುಖ ಉದ್ದಿಮೆಗಳಿಂದ ಬಂದಿದೆ. ದೇಶದ ಅತ್ಯಾಕರ್ಷಕ ಬಂಡವಾಳ ಹೂಡಿಕೆಯ ತಾಣ ನಮ್ಮದು ಎಂಬ ಗುಜರಾತಿನ ವಾದಕ್ಕೆ ಇದರಿಂದಾಗಿ ತೂಕ ಬಂದಂತಾಗಿದೆ. ಇದು ಖಂಡಿತವಾಗಿಯೂ ನರೇಂದ್ರ ಮೋದಿ ಸರಕಾರಕ್ಕೆ ಸಿಕ್ಕ ವರದಾನ. ಏಕೆಂದರೆ 2002ರ ಗೋಧ್ರಾ ಹಿಂಸೆಗಳ ನಂತರ





ಕೇಳಿಬಂದ ಟೀಕೆಗಳಿಂದಾಗಿ ಇದು ಹೂಡಿಕೆದಾರರ ಸ್ವರ್ಗ ಎಂಬ ಹೊಗಳಿಕೆ ಮೆರಗು ಕಳೆದುಕೊಂಡಿತ್ತು. ಆದರೆ ಇದು ಮಾತ್ರ ನಂಬಲಸಾಧ್ಯ. ಮೊದಲ ದಿನವೇ 52 ಒಡಂಬಡಿಕೆಗಳಿಗೆ ಸಹಿ ಬಿದ್ದಿವೆ. ಭಾರತೀಯ ಕಂಪನಿಗಳೇ 46 ಘೋಷಣೆಗಳನ್ನು ಮಾಡಿವೆ'.

ಮೊದಲ ದಿನದ ನಂತರ ಸುದ್ದಿಗಾರರೊಂದಿಗೆ ಮಾತನಾಡುತ್ತಿದ್ದ ಗುಜರಾತಿನ ಮುಖ್ಯ ಕಾರ್ಯದರ್ಶಿ ಪಿ.ಕೆ. ಲಹರಿ ಹೊರಗೆಡವಿದ ಅಂಶಗಳಿಷ್ಟು- ರಾಜ್ಯದ ಹೊರಗಡೆಯಿಂದ ಬಂದ 32 ಕಂಪನಿಗಳು ತಿಳುವಳಿಕೆ ಪತ್ರ(ಎಮ್‌ಓಯು)ಗಳಿಗೆ ಸಹಿ ಹಾಕಿವೆ. ಅದರಲ್ಲಿ 3 ಬಹುರಾಷ್ಟ್ರೀಯ ಕಂಪನಿಗಳು. (ಶೆಲ್, ಬಿಜಿ ಹಾಗೂ ಯುಎಸ್‌ಯ ದಾಲ್ಮಾ ಎನರ್ಜಿ). ಶಕ್ತಿ, ಅನಿಲ, ತೈಲ ಹಾಗೂ ಪೆಟ್ರೋಲಿಯಂ ಈ ವಿಭಾಗಗಳಲ್ಲೇ ಅತಿ ಹೆಚ್ಚಿನ ಒಪ್ಪಂದಗಳಾಗಿದ್ದವು. ಈ ವಿಭಾಗಗಳಿಗೆ ಸಂಬಂಧಿಸಿದಂತೆ ಒಟ್ಟು 22 ಕಂಪನಿಗಳು 13, 100 ಕೋಟಿ ರೂಪಾಯಿಗಳನ್ನು ತೊಡಗಿಸಲು ಮುಂದೆ ಬಂದಿದ್ದವು. ಬಯೋಟೆಕ್ ವಿಭಾಗದಲ್ಲಿ 1,000 ಕೋಟಿ ರೂ. ಬಂಡವಾಳ ಹರಿದು ಬಂದಿತ್ತು. ಕೃಷಿ, ಆಹಾರ ಸಂಸ್ಕರಣೆ, ಸಮುದ್ರ ಸಂಬಂಧೀ ವಿಭಾಗಗಳಲ್ಲಿ 12 ಎಮ್‌ಓಯುಗಳಿಗೆ ಸಹಿ ಬಿದ್ದು, 685 ಕೋಟಿ ರೂ. ಒಟ್ಟುಗೂಡಿತ್ತು. ಐಟಿಯಲ್ಲಿ ಇದರ ಮೊತ್ತ 298.75 ಕೋಟಿ ರೂಪಾಯಿಗಳಾಗಿತ್ತು.

'ಐಟಿ' ಎಂದರೆ ಇಂಡಿಯಾ ಟುಡೆ, 'ಬಿಟಿ' ಎಂದರೆ ಭಾರತ್ ಟುಮಾರೋ!

ಹಾಗಂತ ಹೆಮ್ಮೆಯಿಂದ ಹೇಳಿಕೊಂಡರು ಮೋದಿ! ಮುಖೇಶ್ ಅಂಬಾನಿ ಮೂರು ಪ್ರಸ್ತಾವಗಳನ್ನು ಮುಂದಿಟ್ಟಿದ್ದರು. ಗುಜರಾತಿನ 25 ಸಿಟಿಗಳಲ್ಲಿನ ಮನೆಗಳಿಗೆ ಗ್ಯಾಸ್ ಪೈಪ್ ಲೈನ್ ಬೆಸೆಯುವುದು, ವಿಶೇಷ ಆರ್ಥಿಕ ವಲಯ ಹಾಗೂ ವಿಶ್ವದರ್ಜೆಯ ವಿಜ್ಞಾನ ಮತ್ತು ತಂತ್ರಜ್ಞಾನದ ವಿಶ್ವವಿದ್ಯಾಲಯ. ಎಸ್ಸಾರ್ ಸಮೂಹದ ಶಶಿ ರುಯ್ಯಾ 6000 ಮಿಲಿಯನ್ ಟನ್ ಸಾಮರ್ಥ್ಯದ ಹಜೀರಾ ಸ್ಟೀಲ್ ಘಟಕವನ್ನು ಸ್ಥಾಪಿಸಲು ಮುಂದೆ ಬಂದರಲ್ಲದೆ ಜಾಮ್ ನಗರದಲ್ಲಿ ಅರ್ಧಕ್ಕೇ ನಿಂತ ಸಂಸ್ಕರಣಾ ಘಟಕಕ್ಕೆ ಪುನಶ್ಚೇತನ ನೀಡಲೂ ಬದ್ಧರಾಗಿದ್ದರು. ಈ ಪಟ್ಟಿಯನ್ನು ಉಲ್ಲೇಖಿಸುತ್ತಾ ಹೋದರೆ ಕೊನೆ ತಲುಪುವುದು ನಿಧಾನ. ಅಕ್ಷರಮಟ್ಟಿಗೆ ಒಬ್ಬೊಬ್ಬರದು ಒಂದೊಂದು ಭರವಸೆ. 'ಪಯೋನೀರ್' ಜತೆ ಮಾತನಾಡುತ್ತಾ ಮೋದಿ ಹೇಳಿದ್ದರು, 'ನಾವು ಎಮ್‌ಓಯುಗಳ ಕುರಿತಾಗಿ ಉತ್ಪ್ರೇಕ್ಷೆಯ ಮಾತುಗಳನ್ನಾಡುತ್ತಿಲ್ಲ, ಉಳಿದ ರಾಜ್ಯಗಳಂತೆ ನಾವು ರಸ್ತೆ, ನೀರು, ವಿದ್ಯುತ್ ಇವಷ್ಟೇ ಭರವಸೆಗಳನ್ನು ಈಡೇರಿಸುವುದರಲ್ಲೇ ಹೆಣಗಾಡುತ್ತ ಕುಳಿತಿಲ್ಲ. ಇದೇ ಹೂಡಿಕೆದಾರರನ್ನು ಈ ಮಟ್ಟದಲ್ಲಿ ಆಕರ್ಷಣೆಗೊಳಗಾಗುವಂತೆ ಪ್ರೇರೇಪಿಸುತ್ತಿರುವ ಅಂಶ. ನಾವು ಅತ್ಯುತ್ತಮ ರಸ್ತೆಗಳನ್ನು ಹೊಂದಿದ್ದೇವೆ. ನೀರಿನ ಸೌಕರ್ಯ ಹಾಗೂ ಅದರ ನಿರ್ವಹಣೆಯಲ್ಲೂ ನಾವು ಮುಂದು. ಸರ್ದಾರ್

ಸರೋವರದ ಕುಡಿಯುವ ನೀರು ಹಾಗೂ ನೀರಾವರಿ ಯೋಜನೆಯೊಂದಿಗೆ ಎಲ್ಲಾ ಹಳ್ಳಿಗಳೂ ಬೆಸೆದುಕೊಂಡಿವೆ.'

ಈ ಎಲ್ಲಾ ಸಾಧನೆಗಳಿಗೂ ಗರಿ ಮೂಡಿಸುವಂತೆ 'ಗ್ರೀನ್ ರೆವಲ್ಯೂಷನ್ ಕಂಪನಿ' ಸ್ಥಾಪಿಸಿ ರೈತರ ಉತ್ಪನ್ನ ಹೆಚ್ಚಿನ ಪ್ರಮಾಣದಲ್ಲಿ ಹೊರಬರುವಂತೆ ಮಾಡುವ ಕನಸನ್ನು ಹರವಿಟ್ಟರು ಮೋದಿ. ಗುಜರಾತ್ ಫರ್ಟಿಲೈಜರ್ ಕಂಪನಿ ಮತ್ತು ಗುಜರಾತ್ ನರ್ಮದಾ ಕಂಪನಿ ಈ ಎರಡೂ ಸರಕಾರಿ ಸ್ವಾಮ್ಯದ ಕಂಪನಿಗಳು ಸೇರಿ ಹೊಸದಾದ ಗ್ರೀನ್ ರೆವಲ್ಯೂಷನ್ ಕಂಪನಿ ಹುಟ್ಟುಹಾಕಲಿವೆ ಎಂದರು ನರೇಂದ್ರ. 'ಪಂಜಾಬ್ ಮೊದಲನೇ ಹಸಿರು ಕ್ರಾಂತಿಯ ನಾಯಕತ್ವ ವಹಿಸಿತ್ತು. ದೇಶದ ಎರಡನೇ ಹಸಿರು ಕ್ರಾಂತಿಗೆ ಗುಜರಾತ್ ನೇತೃತ್ವ ಒದಗಿಸಲಿದೆ, ಕ್ಷೀರ ಕ್ರಾಂತಿಗೆ ನಾಯಕತ್ವ ಒದಗಿಸಿದ ನಮೂನೆಯಲ್ಲೇ. ಸಮಾನ ಅಭಿವೃದ್ಧಿ ಸಾಧಿಸಿ ದೇಶದ ಅಭಿವೃದ್ಧಿಗೆ ತನ್ನ ಕೊಡುಗೆ ನೀಡಲು ರಾಜ್ಯ ಶ್ರಮಿಸಲಿದೆ' ಎಂದ ಮೋದಿ ಮಾತಿನಲ್ಲಿ ಉತ್ಸಾಹ ಪುಟಿಯುತ್ತಿತ್ತು.

ಇವೆಲ್ಲದಕ್ಕೂ ಮೋದಿ ವಿರೋಧಿ ಮಾಧ್ಯಮದಲ್ಲಿ ನೀರವ ಮೌನವಿತ್ತು.

**ಮತ್ತೆ ಚಿಗಿತರು ಮೋದಿ ವಿರೋಧಿಗಳು:**

ಆದಾಗ ತಾನೇ ಜಾಗತಿಕ ಹೂಡಿಕೆದಾರರ ಸಮಾವೇಶ ಮುಕ್ತಾಯವಾಗಿತ್ತು. ಇತ್ತ ಲಾಲು ಪ್ರಸಾದ್ ಯಾದವ್ ಜಸ್ಟಿಸ್ ಬ್ಯಾನರ್ಜಿ ಕಮಿಟಿಯ ವರದಿ ಹೊರಹಾಕಿದರು. ಅದು ಗೋಧ್ರಾ ಸಾಬರಮತಿ ರೈಲಿನ ದುರ್ಘಟನೆ ಬಗ್ಗೆ ಮಾತನಾಡಿತ್ತು. ಸಮಾವೇಶದಲ್ಲಿ ಮೋದಿ ಗಳಿಸಿದ್ದ ಯಶಸ್ಸಿನ ಮೇಲೆ ಹೇಗಾದರೊಂದು ಕರಿಮುಸುಕು ಹಾಕಬೇಕು ಎಂಬ ಉದ್ದೇಶವನ್ನಿಟ್ಟುಕೊಂಡೇ ಬಂದಂತಿತ್ತು ಆ ವರದಿ. ರೈಲಿಗೆ ಬೆಂಕಿ ತಗುಲಿದ್ದೇ ಒಂದು ಆಕಸ್ಮಿಕ; ಇದರಲ್ಲಿ ಯಾರ ಕೈವಾಡವೂ ಇರಲಿಲ್ಲ ಅನ್ನೋದು ವರದಿಯ ಸಾರಾಂಶ. ಅಷ್ಟರಲ್ಲಾಗಲೇ ಬಿಹಾರದ ಚುನಾವಣೆಗಳೂ ಹತ್ತಿರ ಬಂದಿದ್ದುವಾದ್ದರಿಂದ ಆ ವರದಿ ಮುಂದಿಟ್ಟುಕೊಂಡು ಮುಸ್ಲಿಮರ ವೋಟುಗಳನ್ನು ಸೆಳೆಯುವುದು ಲಾಲು ಅವರ ಗಿಮಿಕ್ ಆಗಿತ್ತು. ತಕ್ಷಣವೇ ಎಚ್ಚೆತ್ತುಕೊಂಡ ಚುನಾವಣಾ ಆಯೋಗ ಇದೊಂದು 'ದುರದೃಷ್ಟಕರ' ಬೆಳವಣಿಗೆ ಎಂದು ಹೇಳಿತು. ಅಲ್ಲದೇ ರಾಜಕೀಯ ಪಕ್ಷಗಳು ಈ ವರದಿಯನ್ನು ಮುಂದಿಟ್ಟುಕೊಂಡು ಯಾವುದೇ ರೀತಿಯ ಪ್ರಚಾರ ಕಾರ್ಯ ಮಾಡಕೂಡದೆಂದು ಸೂಚಿಸಿತು.

ಆದರೇನಂತೆ ಬ್ಯಾನರ್ಜಿಗೆ ಬಿಜೆಪಿ ಕೆಲವು ಪ್ರಶ್ನೆಗಳನ್ನು ಹಾಕಿತು.

1. ಫೆಬ್ರವರಿ 26, 2006ರ ರಾತ್ರಿ ಅಮನ್ ಗೆಸ್ಟ್ ಹೌಸ್‌ನಲ್ಲಿ ನಡೆದ ಸಭೆಯಲ್ಲಿ





ಸಾಬರಮತಿ ಎಕ್ಸ್‌ಪ್ರೆಸ್‌ನ -6 ಬೋಗಿಗಳಿಗೆ ಬೆಂಕಿ ಹಚ್ಚುವ ನಿರ್ಣಯ ಕೈಗೊಳ್ಳಲಾಯಿತು. ಈ ಬಗ್ಗೆ ಏನಾದರೂ ಪರಿಶೀಲನೆ ನಡೆದಿದೆಯೇ?

2. ಹತ್ತಿರದಲ್ಲೇ ಇದ್ದ ಪೆಟ್ರೋಲ್ ಬಂಕ್ ಒಂದರಿಂದ 140 ಲೀಟರ್ ಪೆಟ್ರೋಲ್ ಖರೀದಿಸಿ ಅದನ್ನು ಅಮನ್ ಗೆಸ್ಟ್‌ಹೌಸ್‌ನಲ್ಲೇ ಇಡಲಾಗಿತ್ತು. ಈ ಕುರಿತು ಕಮಿಟಿಗೆ ಗೊತ್ತಿರಲಿಲ್ಲವಾ?

3. ಸಂಚಿನಲ್ಲಿ ಭಾಗವಹಿಸಿದ್ದ ಸಲೀಮ್ ಬದಾಮ್ ಅವತ್ತು 1.30ರ ಸುಮಾರಿಗೆ ಸ್ಟೇಷನ್ನಿನಿಂದ ರೈಲು ಹೊರಡುತ್ತಿರುವುದನ್ನು ಖಾತ್ರಿ ಪಡಿಸಿಕೊಂಡಿದ್ದನ್ನು ಕಮಿಟಿ ಪ್ರಶ್ನಿಸಿಲ್ಲವೇ?

4. ರೈಲು 6 ಗಂಟೆ ತಡವಾಗಿ ಹೊರಡುವುದೆಂದು ತಿಳಿದಕೂಡಲೇ ಅಮನ್ ಗೆಸ್ಟ್ ಹೌಸ್‌ನಲ್ಲಿ ಬೆಳಗಿನ 6 ಗಂಟೆಗೆ ಮತ್ತೆ ಸಭೆ ಸೇರಲಾಗಿತ್ತು, ಈ ಬಗ್ಗೆ ಯಾವ ವಿಚಾರಣೆ ನಡೆಸಲಾಗಿದೆ?

5. ಪಾತಕಿಗಳು ಮೊದಲಿಗೆ ಬೋಗಿ ಎಸ್-7ಗೆ ಪ್ರವೇಶಿಸಿ, 6ರ ರೊಂದಿಗಿನ ಕೊಂಡಿ ತಪ್ಪಿಸಿದ ನಂತರವೇ ದುಷ್ಕೃತ್ಯ ಎಸಗಿದರೆಂಬ ಸತ್ಯಾಂಶ ಕಮಿಟಿ ಕಣ್ಣಿಗೇಕೆ ಬೀಳಲಿಲ್ಲ?

6. ಇಷ್ಟಕ್ಕೂ ನೀವು ರೈಲ್ವೆ ಮಂತ್ರಿಯ ಇಚ್ಛೆಗನುಗುಣವಾಗಿ ಆಯ್ಕೆಯಾಗಿದ್ದೀರಿ. ಕಮಿಟಿ ರಚಿಸುವ ಮುನ್ನ ಯಾರಾದರೂ ನಿವೃತ್ತ ನ್ಯಾಯಾಧೀಶರನ್ನು ಸೂಚಿಸುವಂತೆ ಸುಪ್ರೀಂ ಕೋರ್ಟಿನ ಮುಖ್ಯ ನ್ಯಾಯಾಧೀಶರನ್ನು ಯಾಕೆ ಸಂಪರ್ಕಿಸಲಿಲ್ಲ?

ಇವ್ಯಾವುದಕ್ಕೂ ಉತ್ತರ ಬರಲಿಲ್ಲ!

ಆದಾಗ್ಯೂ ಸೆಕ್ಯುಲರ್ ಶಕ್ತಿಗಳು ಕೆಲ ಕಾಲ ಗಲಾಟೆ ತೆಗೆದವು. ಗುಜರಾತ್ ಬಿಜೆಪಿಯ ಅತೃಪ್ತ ಶಾಸಕರು ಮತ್ತೊಮ್ಮೆ ಬಾಲ ಬಿಚ್ಚಿದರು. ಹತರಾಗಿದ್ದ ಹರೇನ್ ಪಂಡ್ಯಾ ಅಪ್ಪ ವಿಠ್ಠಲ್ ಪಂಡ್ಯಾ ಮೋದಿ ಗೋಧ್ರಾ ಘಟನೆಯ ಕೃತಿಕಾರ ಹಾಗೂ ಶಿಲ್ಪಿ ಎಂದು ಹೇಳಿಕೆ ಕೊಡುವ ಮಟ್ಟಕ್ಕೂ ಇಳಿದರು. ಕೇಶುಭಾಯ್ ಪಟೇಲ್ ನೇತೃತ್ವದಲ್ಲಿ ಬಂಡಾಯ ನಾಯಕರೆಲ್ಲ ಅಸಮಾಧಾನದ ಮೂಟೆ ಹೊತ್ತು ದಿಲ್ಲಿಯತ್ತ ಹೆಜ್ಜೆ ಹಾಕಿದರು. ಅಲ್ಲಿ ಎಲ್.ಕೆ. ಆಡ್ವಾಣಿ ತುಂಬ ಖಡಕ್ಕಾಗಿ ನಾಯಕತ್ವದ ಬದಲಾವಣೆ ಇಲ್ಲವೇ ಇಲ್ಲ ಅಂದು ಬಿಟ್ಟರು. ಅಲ್ಲಿಗೆ ಮೋದಿಯತ್ತ ವಿರೋಧಿಗಳು ಬಿಸುಟಿದ್ದ ಇನ್ನೊಂದು ಬಾಂಬ್ ಸಹ ಟುಸ್ಸೆಂದ ಹಾಗಾಯಿತು.






# 37
## ವಾಪಸ್ ಬಂದ
## ವೀಸಾ

ಇಂಗ್ಲಿಷ್ ಮಾಧ್ಯಮಗಳು ಮೊದಲಿನಿಂದಲೂ ಮೋದಿಯನ್ನು ಬಯ್ದುಕೊಂಡು ಬಂದಿದ್ದರ ಪರಿಣಾಮ ಈಗ ಅರ್ಥವಾಗುವಂತಿತ್ತು. ದಿಲ್ಲಿಯಲ್ಲಿದ್ದುಕೊಂಡು ವಿದೇಶಿ ಮಾಧ್ಯಮಗಳ ಪ್ರತಿನಿಧಿಗಳಾಗಿ ಕೆಲಸ ಮಾಡುತ್ತಿದ್ದವರಿಗೆ ಅಭಿಪ್ರಾಯ ರೂಪುಗೊಳ್ಳುತ್ತಿದ್ದುದೇ ಭಾರತೀಯ ಇಂಗ್ಲಿಷ್ ಮಾಧ್ಯಮಗಳಿಂದಾಗಿ. ವೀರ್ ಸಾಂಘ್ವಿಯಂತಹ ಪತ್ರಕರ್ತರು ಮೋದಿಯನ್ನು 'ಮಾಸ್ ಮರ್ಡರರ್' ಎಂದೇ ಜರಿದುಕೊಂಡು ಬಂದಿದ್ದರು. ಇದು ನರೇಂದ್ರರನ್ನು ಅಮೆರಿಕದಲ್ಲಿ ಕೆಟ್ಟ ಇಮೇಜ್‌ನೊಂದಿಗೆ ಭಾವಿಸಿಕೊಳ್ಳಲು ಕಾರಣವಾಗಿದ್ದರೆ ಅದರಲ್ಲೇನೂ ಆಶ್ಚರ್ಯವಿರಲಿಲ್ಲ. ಇದಕ್ಕೆ ಸರಿಯಾಗಿ ಅಮೆರಿಕದ ಕ್ರಿಶ್ಚಿಯನ್ ಮಿಷನರಿಗಳಿಗೂ ಮೋದಿ ಮೇಲೆ ಸಿಟ್ಟಿತ್ತು. ಬುಡಕಟ್ಟು ಜನರ ಮಧ್ಯ ಹೋಗಿ ಪವಾಡ ತೋರಿಸಿ ಮರಳು ಮಾಡುವ ಅವರ ಚಟುವಟಿಕೆಗಳಿಗೆ ಕಡಿವಾಣ ಬಿದ್ದಿತ್ತು. ಅಮೆರಿಕದ ಕೆಲ ಭಾರತೀಯ ಕ್ರಿಶ್ಚಿಯನ್ನರು ಸಹ ಮೋದಿ ವಿರುದ್ಧ ಹಗೆತನ ಸಾಧಿಸುತ್ತಿದ್ದರು. 'ಇನ್‌ಸ್ಟಿಟ್ಯೂಟ್ ಆನ್ ರಿಲಿಜಿಯನ್ ಅಂಡ್ ಪಬ್ಲಿಕ್ ಪಾಲಿಸಿ' ಹಾಗೂ 'ಇಸ್ಲಾಮಿಕ್ ಸೊಸೈಟಿ ಆಫ್ ನಾರ್ತ್ ಅಮೆರಿಕ' ಸದಸ್ಯತ್ವ ಹೊಂದಿದ್ದ ಕೆಲವು ಯುಎಸ್ ಸೆನೆಟರ್‌ಗಳು ಮೋದಿ ವಿರೋಧಿ ಬಣದಲ್ಲಿದ್ದರು. ಮಾರ್ಚ್ 20ರಿಂದ 26ರವರೆಗೆ ಐದು ದಿನಗಳ ಭೇಟಿಗೆ ಮೋದಿ ಸಿದ್ಧರಾಗಿದ್ದರು. ಫ್ಲೋರಿಡಾದ ಏಷಿಯನ್ ಅಮೆರಿಕನ್ ಹೋಟೆಲ್ ಮಾಲೀಕರ ಸಂಘ ವ್ಯಾಪಾರ ಪ್ರದರ್ಶನದಲ್ಲಿ ಭಾಗವಹಿಸಲು ಅವರನ್ನು ಆಹ್ವಾನಿಸಿತ್ತು. ಕೆಲ ದಿನಗಳ ಮೊದಲೇ ಅಮೆರಿಕ ಮೋದಿಗೆ ವಿಸಾ ನಿರಾಕರಿಸಲಿದೆಯೆಂಬ ಸುದ್ದಿ ಹರಿದಾಡತೊಡಗಿತು. ಅದೇ ವೇಳೆಗೆ ಅಮೆರಿಕದ ವಿದೇಶಾಂಗ ಸಚಿವೆ ಕಾಂಡೋಲಿಸಾ ರೈಸ್ ದಿಲ್ಲಿಗೆ ಭೇಟಿಯಿತ್ತಿದ್ದರು.

ದಿಲ್ಲಿಗೆ ಬಂದ ಆಕೆ ಅಡ್ವಾಣಿಯವರೊಂದಿಗೆ ಮಾತುಕತೆಯಲ್ಲಿದ್ದಾಗ, ಅಡ್ವಾಣಿ ಈ

ವಿಷಯವನ್ನೂ ಪ್ರಸ್ತಾಪಿಸಿದರು. ಇಪ್ಪತ್ತೊಂದು ಅಮೆರಿಕನ್ ಕಾಂಗ್ರೆಸ್(ಸಂಸತ್ತು) ಸದಸ್ಯರು ವ್ಯಕ್ತಪಡಿಸಿದ ವಿರೋಧವನ್ನೇ ಗಣನೆಗೆ ತೆಗೆದುಕೊಂಡು ಸರಕಾರದ ನೀತಿ ನಿರೂಪಕರು ಪ್ರಭಾವಿತರಾಗುವುದು ಸಲ್ಲ ಎಂದು ಅವರು ಕಾಂಡೋಲಿಸಾಗೆ ಸೂಚಿಸಿದ್ದರು. ಇದಕ್ಕೆ ಪ್ರತಿಯಾಗಿ ನಿರ್ದಿಷ್ಟ ಆಶ್ವಾಸನೆಗಳೇನನ್ನೂ ನೀಡದೇ ರೈಸ್ ಹಿಂತಿರುಗಿದ್ದರು. ಕೌತುಕದ ವಿಷಯವೇನೆಂದರೆ, 2002ರ ಗೋಧ್ರಾ ಘಟನೆ ನಡೆದ ನಂತರದಲ್ಲೇ ಮೋದಿ ಎರಡು ಬಾರಿ 'ಸ್ಟೇಟ್ಸ್'ಗೆ ಹೋಗಿ ಬಂದಿದ್ದರು. ಮೊದಲೇ ಮೋದಿ ಬಳಿಯಲ್ಲಿ 'ಟೂರಿಸ್ಟ್ ಬಿಸಿನೆಸ್ ವೀಸಾ' ಇತ್ತು. ಆದರೆ ಈ ಬಾರಿ ಪ್ರಯತ್ನಿಸಿದ್ದು ಡಿಪ್ಲೊಮ್ಯಾಟಿಕ್ ವೀಸಾಕ್ಕೆ. ಅದಕ್ಕೆ ಅನುಸರಿಸಬೇಕಾದ ಎಲ್ಲ ಮಾರ್ಗಗಳನ್ನೂ ಸರಿಯಾಗಿಯೇ ಅನುಸರಿಸಿದ್ದರು ಮೋದಿ.

ಆದಾಗ್ಯೂ ಅದು ಘಟಿಸಿಯೇ ಬಿಟ್ಟಿತು.

ಮಾರ್ಚ್ 18ರ ಮುಂಜಾನೆ ರದ್ದು ಮಾಡಲ್ಪಟ್ಟ ಮೋದಿಯ ವೀಸಾ ಹಾಗೂ ಪಾಸ್ ಪೋರ್ಟ್‌ಗಳು ವಾಪಸ್ ಬಂದಿದ್ದವು. 'ಧಾರ್ಮಿಕ ಸ್ವಾತಂತ್ರ್ಯ ಹರಣ' ಎಂಬ ಕ್ಷುಲ್ಲಕ ಕಾರಣವನ್ನೊಡ್ಡಿ ಅದ್ಯಾವ್ಯಾವುದೋ ಸೆಕ್ಷನ್‌ಗಳನ್ನು ಹೆಸರಿಸಿ ಕೈತೊಳೆದುಕೊಂಡಿತು ಅಮೆರಿಕ ಆಡಳಿತ ವಲಯ. ಅದು ನರೇಂದ್ರ ಮೋದಿಗಾದ ಅವಮಾನ ಎನ್ನುವುದಕ್ಕಿಂತ ಭಾರತಕ್ಕಾದ ಅವಮಾನವೇ ಆಗಿತ್ತು. ವೀಸಾ ರದ್ದತಿಯ ಆದೇಶ ಹೊರಬಿದ್ದು ಒಂದು ತಾಸಿನೊಳಗೆ ವಿದೇಶಾಂಗ ವ್ಯವಹಾರ ಖಾತೆ ಅಮೆರಿಕದ 'ಡೆಪ್ಯುಟಿ ಚೀಫ್ ಆಫ್ ಮಿಷನ್' ರಾಬರ್ಟ್ ಬ್ಲೇಕ್‌ರನ್ನು ಕರೆಸಿ ಕೇಂದ್ರದ ವಿರೋಧವನ್ನು ದಾಖಲಿಸಿತು. ಸಚಿವಾಲಯದ ವಕ್ತಾರ ನವ್ ತೇಜ್ ಸರ್ನಾ ಅಮೆರಿಕದ ಈ ನಿಲುವು ಸೌಹಾರ್ದಶೂನ್ಯತೆ ಹಾಗೂ ಸಂವಿಧಾನಬದ್ಧವಾಗಿ ಆಯ್ಕೆಯಾಗಿರುವ ಭಾರತದ ಮುಖ್ಯಮಂತ್ರಿ ಕುರಿತಾದ ಸಂವೇದನಾಶೀಲತೆಯ ಕೊರತೆಯನ್ನು ಎತ್ತಿ ತೋರಿಸುತ್ತದೆ ಎಂದು ಹೇಳಿಕೆ ನೀಡಿದರು. ಅಮೆರಿಕ ಏನೂ ಆಗೇ ಇಲ್ಲ ಎಂಬಂತೆ ಮೈ ಕೊಡವಿಕೊಂಡಿತು. ಇತ್ತ ಮೋದಿ ವಿರೋಧಿಗಳಿಗೆ ಹಬ್ಬದ ವಾತಾವರಣ. ಅಹಮದಾಬಾದಿನ ಸೇಂಟ್ ಕ್ಸೇವಿಯರ್ ಕಾಲೇಜ್‌ನ ಪ್ರಾಂಶುಪಾಲರಾದ ಫಾದರ್ ಫ್ರಾನ್ಸಿಸ್ ಪರ್ಮಾರ್ ಹೀಗೆಂದರು, ''ಮೋದಿಗೆ ವೀಸಾ ನಿರಾಕರಿಸಿದ ಕ್ರಮ ಸರಿಯಾಗಿಯೇ ಇದೆ. ಅಂತಾರಾಷ್ಟ್ರೀಯ ಸಂಘಟನೆಗಳಾದ ಆಮ್ನೆಸ್ಟಿ ಇಂಟರ್‌ನ್ಯಾಷನಲ್‌ನಂತಹ ಸಂಸ್ಥೆಗಳು ಗುಜರಾತಿನ ಆಡಳಿತದಲ್ಲಿ ಮಾನವ ಹಕ್ಕುಗಳ ಉಲ್ಲಂಘನೆಯಾಗುತ್ತಿರುವುದನ್ನು ಎತ್ತಿ ತೋರಿಸಿವೆ. ಹಾಗಾಗಿ ಅಮೆರಿಕವನ್ನು ಇದರಲ್ಲಿ ಬಯ್ಯುವಂತಿಲ್ಲ''. ಅಷ್ಟು ಹೇಳಿದ ಆಸಾಮಿಗೆ ಆ ಮೇಲೆ ಏನೋ ಜ್ಞಾನೋದಯವಾದಂತಾಗಿ 'ಮಾನವ ಹಕ್ಕುಗಳ ವಿಷಯದಲ್ಲಿ ಅಮೆರಿಕವೇನು ಸಾಚಾ ಅಲ್ಲ, ಆದರೂ...'' ಹೀಗೆ ರಾಗ ಎಳೆದಿದ್ದರು.





ಅಮೆರಿಕದ ಕ್ರಮವನ್ನು ಸಮರ್ಥಿಸಿಕೊಂಡ ಗುಜರಾತಿನವರಲ್ಲಿ ನ್ಯಾಯವಾದಿ ಗಿರೀಶ್ ಪಟೇಲ್, ಹನೀಫ್ ಲಕಡ್‌ವಾಲಾ, ಜೆ.ಎಸ್. ಬಂದೂಕ್‌ವಾಲಾ ಪ್ರಮುಖರಾಗಿದ್ದರು. ಬಹಳಷ್ಟು ಜನ ಮೋದಿಯನ್ನು ವಿರೋಧಿಸುವ ಭರದಲ್ಲಿ ದೇಶಪ್ರೇಮದ ಅಂಶವನ್ನೇ ಸಾರಾಸಗಟಾಗಿ ಮರೆತುಬಿಟ್ಟರು. ಆದರೆ ರಾಜ್ಯಸಭೆಯಲ್ಲಿ ಮಾತನಾಡಿದ ಪ್ರಧಾನಿ ಮನಮೋಹನ್‌ಸಿಂಗ್ ಭಾರತದ ನಿಲುವನ್ನು ಈ ರೀತಿ ಸ್ಪಷ್ಟಪಡಿಸಿದರು–''ಕಾನೂನಿನ ಸಮ್ಮತಿಯಿಲ್ಲದೇ ಯಾವುದೇ ಆರೋಪಗಳನ್ನು ಮಾಡಿ ಭಾರತದ ಸಂವಿಧಾನಬದ್ಧ ಅಧಿಕಾರ ಕೇಂದ್ರವೊಂದರ ಸಂವಿಧಾನಾತ್ಮಕತೆಯನ್ನು ಪ್ರಶ್ನಿಸುವುದು ಸರಿಯಾದ ಕ್ರಮವಲ್ಲ''. ಉದ್ಯಮರಂಗ ಮಾತ್ರ ಅಮೆರಿಕದ ನಿಲುವಿನ ಕುರಿತು ಅತಿ ವಿರೋಧ ವ್ಯಕ್ತಪಡಿಸಿತು. ''ಇದು ಅಮೆರಿಕದ ಪ್ರಜ್ಞಾವಂತಿಕೆಯ ಕೊರತೆಯನ್ನು ತೋರಿಸುತ್ತದೆ. ಈ ನಿಲುವು ಎರಡೂ ದೇಶಗಳಿಗೂ ಒಳಿತುಂಟುಮಾಡುವಂತಹದ್ದಲ್ಲ'' ಎಂದರು 'ಎಫ್‌ಐಸಿಸಿಐ' ಅಧ್ಯಕ್ಷ ಅಮಿತ್ ಗೊರಾಡಿಯಾ.

**ಪ್ರತಿಸ್ಪಂದಿಸಿತು ಮಾಧ್ಯಮ:**

ಅಮೆರಿಕದ ನಿಲುವಿಗೆ ಸಂಬಂಧಿಸಿದಂತೆಯೂ ಮಾಧ್ಯಮಗಳು ಎಂದಿನಂತೆ ತಮ್ಮ ಮೋದಿ ವಿರೋಧಿ ನೀತಿಗೆ ಜೋತು ಬಿದ್ದವು. 'ಗುಜರಾತಿಗಳು ಮೋದಿಯನ್ನು ಒಂದು ಅನಪೇಕ್ಷಿತ ಭಾರ ಎಂದು ಭಾವಿಸಿದ್ದಾರೆ' ಎಂದು 'ಟೈಮ್ಸ್ ಆಫ್ ಇಂಡಿಯಾ' ಬರೆಯಿತು. 'ಬುದ್ಧಿಜೀವಿಗಳ ವರ್ಗದಲ್ಲಿ ಇರುವ ಅಭಿಪ್ರಾಯವೆಂದರೆ, ಮೋದಿಗೆ ಏನು ಸಿಗಬೇಕಿತ್ತೋ ಅದೇ ಸಿಕ್ಕಿದೆ' ಎಂದಿತು 'ಬಿಸಿನೆಸ್ ಸ್ಟಾಂಡರ್ಡ್'. ಆದರೆ ಮೋದಿಯನ್ನೂ ಟೀಕಿಸುತ್ತಲೇ ಬಂದು ಈ ವಿಷಯದಲ್ಲಿ ಬಿಗು ವಿಶ್ಲೇಷಣೆಗಿಳಿದ ಪತ್ರಿಕೆಗಳೂ ಇದ್ದವು. ''ಅಮೆರಿಕದ ನಡಾವಳಿ ಸೆಕ್ಯುಲರ್ ನಿಲುವಿನವರಿಗೆ ಸಂತಸ ತಂದಿರಬಹುದು. ಆದರೆ ಈ ವಿಷಯದಲ್ಲಿ ಸೈದ್ಧಾಂತಿಕ ಭಿನ್ನಾಭಿಪ್ರಾಯಗಳನ್ನು ಬದಿಗಿಟ್ಟು ಚರ್ಚೆ ಮಾಡಬೇಕಾಗುತ್ತದೆ. ಅಮೆರಿಕ ಸರಕಾರ ಭಾರತದ ಪ್ರಜಾಪ್ರಭುತ್ವ ನೀಡಿದ ತೀರ್ಪನ್ನೇ ವಿರೋಧಿಸುವ ಕೆಲಸ ಮಾಡಿದೆ. ಇದೇ ಬುಷ್ ಆಡಳಿತದಲ್ಲಿ ಅಮೆರಿಕನ್ ಆಡಳಿತ ಯಂತ್ರ ಇರಾಕಿನಲ್ಲಿ ಸಮೂಹನಾಶದ ಶಸ್ತ್ರಾಸ್ತ್ರಗಳಿವೆ ಅಂತ ಸುಳ್ಳು ದಾಖಲೆಗಳನ್ನು ಹುಟ್ಟುಹಾಕಿ ಆ ದೇಶದ ಮೇಲೆ ಯುದ್ಧ ಸಾರಿತು. ಬುಷ್‌ನ ಈ ಕೃತ್ಯ ಮನುಕುಲಕ್ಕೆ ಬಗೆದ ಅಪಚಾರವಲ್ಲವೇ? ಆದಾಗ್ಯೂ ಆತ ಅಮೆರಿಕದ ಜನತೆಯಿಂದ ಆರಿಸಿ ಹೋದಾತ. ಆದರ್ಶ ಹಾಗೂ ಸಿದ್ಧಾಂತಗಳನ್ನೆಲ್ಲ ಮೀರಿ ಆ ವಿಷಯಕ್ಕಾಗಿಯೇ ಬುಷ್‌ಗೆ ಗೌರವ ಕೊಡಬೇಕು. ಮೋದಿಗೂ ಸಹ ವೈಯಕ್ತಿಕ

ಗೌರವ ಕೊಡಬೇಕಾದ ಅವಶ್ಯಕತೆಯಿರಲಿಲ್ಲ. ಅವರೊಳಗಿರುವ ಒಬ್ಬ ಚುನಾಯಿತ ಪ್ರತಿನಿಧಿಗೆ ಗೌರವ ನೀಡಬೇಕು ಅಂತ ನಾವು 'ಅಂಕಲ್ ಸ್ಯಾಮ್'(ಅಮೆರಿಕವನ್ನು ಹಾಗೂ ಕರೆಯುತ್ತಾರೆ)ನಿಂದ ಅಪೇಕ್ಷಿಸಬಾರದೇ? ಅಮೆರಿಕದ ಅಧ್ಯಕ್ಷರಾಗಿದ್ದ ಜಾನ್ ಎಫ್. ಕೆನಡಿ ಹಾಗೂ ಲಿಂಡನ್ ಬಿ. ಜಾನ್ಸನ್ ಸಹಸ್ರಾರು ಅಮಾಯಕ ವಿಯೆಟ್ನಾಮಿಗಳ ಸಾವಿಗೆ ಕಾರಣರಾದ ಮೇಲೂ ಎಲ್ಲಾ ಕಡೆ ಪ್ರವಾಸ ಮಾಡಿದರು. ಯಾಕೆಂದರೆ ಅವರ ಹುದ್ದೆಗೆ ಆ ಗೌರವವಿತ್ತು'' ಎಂದು ಮಾರ್ಚ್ 20ರ ಸಂಚಿಕೆಯಲ್ಲಿ 'ಟೆಲಿಗ್ರಾಫ್' ಬರೆಯಿತು. ಮಾರ್ಚ್ 20ರ 'ಸ್ಟೇಟ್ಸ್‌ಮನ್' ಕೂಡ ವಿಭಿನ್ನ ನೆಲೆಯಲ್ಲಿ ಘಟನೆಯ ವಿಶ್ಲೇಷಣೆ ಮಾಡಿತು. 'ಸೌದಿ ಅರೇಬಿಯಾ ಅಮೆರಿಕದ ಮಿತ್ರ ರಾಷ್ಟ್ರಗಳಲ್ಲೊಂದು. ಅಲ್ಲಿ ಧಾರ್ಮಿಕ ಸ್ವಾತಂತ್ರ್ಯ ಇಲ್ಲವೇ ಇಲ್ಲ, ಇಸ್ಲಾಂ ಬಿಟ್ಟರೆ ಇನ್ಯಾವ ಧರ್ಮವನ್ನೂ ಅಲ್ಲಿ ಅನುಸರಿಸುವಂತಿಲ್ಲ. ಅಷ್ಟಾಗಿಯೂ ಸಾಂಸ್ಕೃತಿಕ ವೈವಿಧ್ಯಗಳಿಂದ ಕೂಡಿದ ಗುಜರಾತ್ ನೆಲದ ಮೋದಿಗೆ ಮಾತ್ರ ಧಾರ್ಮಿಕ ಸ್ವಾತಂತ್ರ್ಯ ಹರಣದ ಆರೋಪವೇಕೆ? ಅಮೆರಿಕ ಆಧುನಿಕ ಇಸ್ಲಾಂನ ತುಷ್ಟೀಕರಣಕ್ಕೆ ನಿಂತಿದೆಯಷ್ಟೆ' ಎಂದು ವಸ್ತುನಿಷ್ಠವಾಗಿ, ಅರ್ಥಪೂರ್ಣವಾಗಿ ಬರೆಯಿತು.

''ಖುದ್ದು ಅಮೆರಿಕ ಪ್ರಜಾಪ್ರಭುತ್ವದ ಬಗೆಗಾಗಲಿ, ಮಾನವ ಹಕ್ಕುಗಳ ಕುರಿತಾಗಲಿ ಕಾಳಜಿ ಹೊಂದಿಲ್ಲ. ಗ್ವಾಟೆಮಾಲಾದಂತಹ ಪ್ರಕರಣಗಳಿಂದ ಇದು ತಿಳಿಯುತ್ತದೆ. ಅಮೆರಿಕ ಸದ್ದಾಂ, ತಾಲಿಬಾನ್ ಹಾಗೂ ಓಸಾಮಾರೊಂದಿಗೆ ಸಂಘರ್ಷಕ್ಕಿಳಿದಾಗಲೂ ಜನ ಕೇಳಿದ್ದರು, 'ಇವರನ್ನೆಲ್ಲ ಹುಟ್ಟಿಸಿದವರ್‍ಯಾರು?'' ಎಂದು ಪ್ರಶ್ನಿಸಿತು 'ಪಯೋನೀರ್'. 'ಫ್ರಿ ಪ್ರೆಸ್ ಜರ್ನಲ್' ಸಹ ಅಮೆರಿಕದ ನಿಲುವನ್ನು ಖಂಡಿಸಿ ಶಂಕರ್ ಸಿಂಗ್ ವಾಘೇಲಾರಂತಹ ಕಾಂಗ್ರೆಸ್ಸಿಗರು ರಾಷ್ಟ್ರೀಯತೆಯನ್ನೂ ಮರೆತು ಮೋದಿ ಪ್ರಕರಣವನ್ನು ರಾಜಕೀಯಕ್ಕೆ ಬಳಸಿಕೊಳ್ಳುತ್ತಿರುವುದನ್ನು ನಿಲ್ಲಿಸಬೇಕು ಅಂತ ತಾಕೀತು ಮಾಡಿತು.

ಇವೆಲ್ಲಾ ಗಲಾಟೆಯನ್ನು ನೋಡುತ್ತಿದ್ದ ಮೋದಿ ಮಾರ್ಚ್ 20ರಂದು 'ಭಾರತ್ ಸ್ವಾಭಿಮಾನ್ ರ್‍ಯಾಲಿ' ಹಮ್ಮಿಕೊಂಡರು.

ಅದರಲ್ಲಿ ರಾಜ್ಯದ ಮೂಲೆ ಮೂಲೆಗಳಿಂದ ಬಂದ 10,000 ಜನ ಭಾಗವಹಿಸಿದ್ದರು. 50 ಶಾಸಕರು ಹಾಜರಿದ್ದರು. ಅವರಲ್ಲಿ 15 ಶಾಸಕರು ಮೋದಿ ವಿರೋಧಿ ಬಣದೊಂದಿಗೆ ಗುರುತಿಸಿಕೊಂಡವರು. ಮಾರ್ಚ್ 21ರಂದು ಮುಂಜಾನೆ, ಅಮೆರಿಕದಲ್ಲಿ ಅದು 20ನೇ ತಾರೀಖಿನ ಸಾಯಂಕಾಲದ ಸಮಯ. ಅಂದು ಮೋದಿ ವಿಡಿಯೋ ಕಾನ್ಫರೆನ್ಸ್ ಮುಖಾಂತರ ಅಲ್ಲಿನ ಏಷಿಯನ್ ಅಮೆರಿಕನ್ ಹೋಟೆಲ್ ಮಾಲೀಕರ ಸಂಘವನ್ನುದ್ದೇಶಿಸಿ ಮಾತಿಗಿಳಿದರು. ಅಮೆರಿಕದ ಕ್ರಮ ಕೆಲವೇ ಪೂರ್ವಗ್ರಹಪೀಡಿತ ಮನಸ್ಥಿತಿಗಳ ನಿರ್ಧಾರದಿಂದಾದದ್ದು ಎಂದ





ಮೋದಿ, ಅಲ್ಲಿನ ಕೇಳುಗರನ್ನು ಭಾರತದ ಅಭಿಮಾನವನ್ನು ಬಿಂಬಿಸುತ್ತಿರುವ ಹೆಮ್ಮೆಯ ಜನರೆಂದು ಕರೆದರು. ಭಾರತದ ಶ್ರೀಮಂತವಾದ ಸಂಸ್ಕೃತಿ ಹಾಗೂ ಪರಂಪರೆಗಳ ರಾಯಭಾರಿಗಳಾಗಿರಬೇಕಾದವರು ನೀವು. ಅಲ್ಲದೇ ಗುಜರಾತ್ ಜಗತ್ತಿನಲ್ಲೇ ಬಂಡವಾಳ ಹೂಡಿಕೆಗೆ ಅತ್ಯಂತ ಪ್ರಶಸ್ತ ಜಾಗ ಅಂತ ಸಾರಿ ಸಾರಿ ಹೇಳಿರಿ, ಹಾಗಂತ ಸಂದೇಶ ರವಾನಿಸಿದರು ಮೋದಿ. ಸುಮಾರು ನೂರು ನಿಮಿಷಗಳ ಕಾಲ ಮಾತನಾಡಿದ ಮೋದಿ ಮಾತಿನ ನಡು ನಡುವಿನಲ್ಲೇ ಚಪ್ಪಾಳೆಗಳ ಸುರಿಮಳೆಯಾಗುತ್ತಿತ್ತು. ಅವತ್ತು ಮ್ಯಾಡಿಸನ್ ಸ್ಕ್ವೇರ್‌ನಲ್ಲಿ ಮೋದಿ ಖುದ್ದು ಹಾಜರಿರದಿದ್ದರೇನಂತೆ, ಪರಿಣಾಮ ಮಾತ್ರ ಬದಲಾಗಿರಲಿಲ್ಲ. ಅಮೆರಿಕ ಮೋದಿಗೆ ವೀಸಾ ನಿರಾಕರಿಸಿ ತನ್ನ ದ್ವಂದ್ವ ನಿಲುವನ್ನು ಜಾಹಿರು ಮಾಡಿಕೊಂಡಿದ್ದಷ್ಟೇ ಲಾಭ.

ಅನಂತರ ಈ ವಿಚಾರವಾಗಿ ಅಮೆರಿಕ ತೇಪೆ ಹಚ್ಚಲು ನೋಡಿತು.

ಹೊಸದಿಲ್ಲಿಯಲ್ಲಿನ ಅಮೆರಿಕ ರಾಯಭಾರಿ ಡೇವಿಡ್ ಮುಲ್‌ಫೋರ್ಡ್ ಮೋದಿ ಕುರಿತಾದ ವಿಸಾ ನಿರಾಕರಣೆ ಕ್ರಮವನ್ನು ಸಮರ್ಥಿಸಿಕೊಳ್ಳುತ್ತಲೇ 'ಈ ನಿರ್ಧಾರ ಮೋದಿ ವಿಷಯಕ್ಕೆ ಮಾತ್ರ ಸೀಮಿತ. ಇದನ್ನು ಬಿಜೆಪಿಯನ್ನು ಗುರಿಯಾಗಿರಿಸಿಕೊಂಡಾಗಲಿ, ಗುಜರಾತಿನ ಸಮುದಾಯವನ್ನು ಗುರಿಯಾಗಿರಿಸಿಕೊಂಡಾಗಲಿ ತೆಗೆದುಕೊಂಡಿದ್ದಲ್ಲ' ಅಂದರು. ಆದಾಗ್ಯೂ ಭಾರತದ ವಿದೇಶಾಂಗ ವ್ಯವಹಾರ ವಿಭಾಗ ಇದನ್ನು ತಳ್ಳಿಹಾಕುತ್ತ, 'ಈ ನಿರ್ಧಾರ ತೆಗೆದುಕೊಳ್ಳುವಾಗ ಮೋದಿ ಒಬ್ಬ ಸಂವಿಧಾನಬದ್ಧವಾಗಿ ಆಯ್ಕೆಯಾಗಿರುವ ಮುಖ್ಯಮಂತ್ರಿ ಎಂಬ ಸತ್ಯಾಂಶವನ್ನು ಅಮೆರಿಕ ಮರೆತಿದೆ' ಅಂತ ಪ್ರತಿಕ್ರಿಯಿಸಿತು. ಬ್ರಿಟನ್‌ಗೆ ಕೂಡ ಮೋದಿ ವಿರೋಧಿ ನಿಲುವಿದ್ದರೂ ಅದು ಅಮೆರಿಕದ ಹಾದಿಯನ್ನು ತುಳಿಯಲಿಲ್ಲ. ಮಾರ್ಚ್ 26ರಂದು ನಡೆಯಲಿದ್ದ 'ಗುಜರಾತ್ ಡೇ' ಕಾರ್ಯಕ್ರಮದಲ್ಲಿ ಪಾಲ್ಗೊಳ್ಳಲು ಮೋದಿ ಲಂಡನ್‌ಗೆ ಹೊರಟು ನಿಂತಿದ್ದರು. 'ಮೋದಿಗೆ ಈಗಾಗಲೇ ವೀಸಾ ಇದೆ. ಅವರ ಪ್ರವಾಸವನ್ನು ತಡೆಯುವ ಯಾವ ಕಾರಣಗಳೂ ಎದುರಿಗಿಲ್ಲ' ಹೀಗೆಂದು ಹೇಳಿ ಯಾವುದೇ ಗಲಿಬಿಲಿಗಳಿಗೆ ಮಣೆ ಹಾಕದೆ ಇರುವ ನಿಲುವು ತೆಗೆದುಕೊಂಡರು ಹೈ ಕಮೀಷನ್ ವಕ್ತಾರ ಜೆಫ್ ವಿಲ್ಸನ್. ಇಷ್ಟಾಗಿಯೂ ಪ್ರವಾಸ ರದ್ದುಪಡಿಸುವ ಅನಿವಾರ್ಯತೆ ಮೋದಿಗೇ ಎದುರಾಯಿತು. ಲಂಡನ್ ಪ್ರವಾಸದ ವೇಳೆ ಮೋದಿಯವರನ್ನು ಮುಗಿಸಲು ದಾವೂದ್ ಇಬ್ರಾಹಿಮ್ ಪಡೆ ಹಾಗೂ ಜಿಹಾದಿ ಗುಂಪುಗಳು ಹೊಂಚುಹಾಕುತ್ತಿವೆ ಅಂತ ನಮ್ಮ 'ಇಂಟಲಿಜನ್ಸ್ ಏಜೆನ್ಸಿ' ಎಚ್ಚರಿಕೆಯ ವರದಿ ನೀಡಿತು. ಖುದ್ದು ಗೃಹಮಂತ್ರಿ ಶಿವರಾಜ್ ಪಾಟೀಲ್ ಮೋದಿಗೆ ಪರಿಸ್ಥಿತಿ ವಿವರಿಸಿ ಅಲ್ಲಿಗೆ ತೆರಳದಂತೆ ಕೇಳಿಕೊಂಡರು. ಕೊನೆಗೆ ಪ್ರಧಾನಿ ಸಹ ಅದೇ ಅಭಿಪ್ರಾಯವನ್ನೇ ಹೇಳಿದಾಗ ಮೋದಿ ಲಂಡನ್ ಪ್ರವಾಸವನ್ನೇ ರದ್ದುಗೊಳಿಸಿದರು.





# 38

## ಹೆಚ್ಚುತ್ತಾ ಹೋದ ಮೋದಿ ಪ್ರಭೆ ಕ್ಷೀಣಿಸಿತು ಬಂಡಾಯದ ಹಬೆ

ವೀಸಾ ಗಲಾಟೆಯನ್ನು ಹಿಂದಿಕ್ಕಿ ಮತ್ತೆ ಸಾಮಾನ್ಯ ಜನರ ಮಧ್ಯೆ ಹೋಗಿ ನಿಂತರು ಮೋದಿ. ದಿನಾಂಕ 11 ಮೇ 2005. ತೆರೆದುಕೊಂಡಿತು ಕೃಷಿ ಮಹೋತ್ಸವ. ಈ ಉತ್ಸವಕ್ಕೂ ಮೊದಲು ಮೋದಿ ನಾಲ್ಕು ರ್‍ಯಾಲಿಗಳಲ್ಲಿ ಮಾತನಾಡಿದರು. ಕೃಷಿಯ ಆಧುನಿಕ ವಿಧಿವಿಧಾನಗಳನ್ನು ತಿಳಿದುಕೊಳ್ಳಬೇಕಾದ ಅವಶ್ಯಕತೆಯನ್ನು ಒತ್ತಿಹೇಳಿದರು. 299 ಕಿಸಾನ್ ರಥಗಳನ್ನು ನಿರ್ಮಿಸಿ ರಾಜ್ಯದ ಎಲ್ಲ ಹಳ್ಳಿಗಳನ್ನೂ ತಲುಪುವ ಆಸೆ ಅಲ್ಲಿ ಅನಾವರಣಗೊಂಡಿತು. 34–35 ಲಕ್ಷ ರೈತರನ್ನು ಹೊಂದಿರುವ ರಾಜ್ಯ ಗುಜರಾತ್. ಒಂದು ಲಕ್ಷ ಹೆಕ್ಟೇರ್ ಜಾಗವನ್ನು ಹನಿ ನೀರಾವರಿಗೊಳಪಡಿಸಿ ಅಧ್ಯಯನ ಕೈಗೊಳ್ಳುವುದು ರಾಜ್ಯದ ಇಚ್ಛೆಯಾಗಿತ್ತು. 18,000 ಹಳ್ಳಿಗಳಲ್ಲಿ ಪ್ರತಿಯೊಂದು ಹಳ್ಳಿಯಲ್ಲೂ ಒಂದು ನೀರಿನ ಒಡ್ಡು ಇರಬೇಕು, 4,000 ಊರಿನ ಕೆರೆಗಳು ಹಾಗೂ ಕನಿಷ್ಠ 1400 ಸ್ವಸಹಾಯ ಸಂಘಗಳನ್ನು ಕಟ್ಟುವ ಕಾಳಜಿ ಸರಕಾರದ್ದಾಗಿತ್ತು. ಒಟ್ಟಾರೆ ಸರಕಾರವನ್ನು ಜನರ ಬಳಿಗೊಯ್ದು ವಿವಿಧ ಯೋಜನೆಗಳ ಕುರಿತಾಗಿ ಅರಿವು ಮೂಡಿಸುವುದು ಕೃಷಿ ಮಹೋತ್ಸವದ ಕಾರ್ಯಸೂಚಿಯಾಗಿತ್ತು.

ವೈಭವದಿಂದಲೇ ನಡೆಯಿತು ಕೃಷಿಮಹೋತ್ಸವ. ಮೇ 10 ರಿಂದ ಜೂನ್ 11 ರವರೆಗೂ ಒಂದು ತಿಂಗಳು ಕಾಲ ಈ ಕೃಷಿಜಾತ್ರೆ ಕಳೆಗಟ್ಟಿತ್ತು. ಮುಖ್ಯಮಂತ್ರಿ, ಸಚಿವರು ಹಾಗೂ ಅಧಿಕಾರಿಗಳ ಸಭೆ ವಿಚಾರ ಮಂಥನ ಮಾಡಿ ಸಮ್ಮೇಳನವನ್ನು ಆಯೋಜಿಸಿತ್ತು. ಮೊದಲ ಹಂತದಲ್ಲಿ ಕಿಸಾನ್ ರಥಗಳು ಸಾಗಬೇಕಾದ ಹಾದಿ ಹಾಗೂ ಹಳ್ಳಿಗಳಲ್ಲಿ ದಿನಂಪ್ರತಿ ನಡೆಸಬೇಕಾದ ಚಟುವಟಿಕೆಗಳ ಕುರಿತಾಗಿ ಯೋಜನೆ ಅಂಗೀಕರಿಸಲಾಯಿತು. ಎರಡನೇ ಹಂತದಲ್ಲಿ ಗ್ರಾಮಸಭೆಗಳನ್ನು ಆಯೋಜಿಸಿ ಕೃಷಿಮಹೋತ್ಸವದಲ್ಲಿ ಜರುಗಲಿರುವ ಕಾರ್ಯಕ್ರಮಗಳ ಕುರಿತಾಗಿ ರೈತರಿಗೆ ವಿವರ ನೀಡಲಾಯಿತು. ಮೂವತ್ತಾರು ಚಟುವಟಿಕೆಗಳನ್ನು

ಹಮ್ಮಿಕೊಳ್ಳಲಾಗಿತ್ತು. ಮೂರನೇ ಹಂತದಲ್ಲಿ ಕಿಕ್ಕಿರಿದ ಜಾಮ್‌ನಗರ ಸಮಾವೇಶದಲ್ಲಿ ಮುಖ್ಯಮಂತ್ರಿ ನರೇಂದ್ರ ಮೋದಿ ಕಿಸಾನ್‌ರಥಕ್ಕೆ ಹಸಿರು ನಿಶಾನೆ ತೋರಿದರು. ಕಿಸಾನ್ ರಥ ಪೋಸ್ಟರ್‌ಗಳು, ಆಡಿಯೋ ವಿಶುವಲ್ ಸೌಕರ್ಯ, ಆಧುನಿಕ ಕೃಷಿ ಉಪಕರಣಗಳ ಪ್ರದರ್ಶನ ಇವೆಲ್ಲವನ್ನೂ ಒಳಗೊಂಡ 600 ಚದರ ಅಡಿಗಳನ್ನು ಆಕ್ರಮಿಸಿಕೊಂಡಿತ್ತು. ಕೃಷಿ ಪರಿಣತರು ಹಾಗೂ ವಿಜ್ಞಾನಿಗಳು ಹಳ್ಳಿಗರಿಗೆ ಆಧುನಿಕ ಕೃಷಿಯ ಕುರಿತಾಗಿ ಅರಿವು ಮೂಡಿಸಲು ಹೊರಟಿದ್ದರು. ಕೃಷಿ ಆದಾಯವನ್ನು ದುಪ್ಪಟ್ಟುಗೊಳಿಸುವುದರತ್ತ ದೃಷ್ಟಿ ನೆಟ್ಟಿದ್ದ ಮಹೋತ್ಸವ ಎಲ್ಲಾ 18,600 ಹಳ್ಳಿಗಳನ್ನೂ ತಲುಪಿತ್ತು. ಈ ಯಾತ್ರೆಯಲ್ಲಿ ಒಂದು ಲಕ್ಷ ಸರಕಾರಿ ಅಧಿಕಾರಿಗಳು ಭಾಗವಹಿಸಿ ಜನರ ಬಳಿ ತೆರಳಿ ಅವರ ಸಂಕಷ್ಟಗಳನ್ನು ಪರಾಮರ್ಶಿಸುವ ಅವಕಾಶವೊದಗಿತು.

"ರೈತರ ಹಾಗೂ ಬಡ ಬುಡಕಟ್ಟುಗಳ ಆರ್ಥಿಕ ಸ್ಥಿತಿಯನ್ನು ಉದ್ಧರಿಸುವುದಕ್ಕೆ ಸರಕಾರ ಬದ್ಧವಾಗಿದೆ. ಕಪಾಡ್ವಾಡದಲ್ಲಿ ವಾಡಿ ಯೋಜನೆಯ ನೆರವಿನೊಂದಿಗೆ ಅಲ್ಲಿನ ಬುಡಕಟ್ಟು ರೈತರು 4 ಕೋಟಿ ಕೆ.ಜಿ. ಗೋಡಂಬಿಯನ್ನು ಉತ್ಪಾದಿಸಿದ್ದಾರೆ. ಇಂತಹ ಅನುಭವಗಳು ಮರುಕಳಿಸಬೇಕು. ನೀವೆಲ್ಲರೂ ಈ ಪ್ರಯತ್ನದಲ್ಲಿ ಕೈ ಜೋಡಿಸಬೇಕೆಂದು ನಾನು ಆಹ್ವಾನಿಸುತ್ತಿದ್ದೇನೆ. ಇದು ರಾಜಕೀಯ ಕಾರ್ಯಕ್ರಮವಲ್ಲ; ರಚನಾತ್ಮಕ ಪ್ರಯತ್ನ" ಎಂದು ನವಸಾರಿಯಲ್ಲಿ ನಡೆದ ದೊಡ್ಡ ರೈತ ಶಿಬಿರವೊಂದರಲ್ಲಿ ಮಾತನಾಡುತ್ತಾ ಮೋದಿ ಭರವಸೆಯಿತ್ತರು. ಕೃಷಿಮಹೋತ್ಸವದ ಲಾಭ ಪಡೆದುಕೊಳ್ಳಲು ಬ್ಯಾಂಕ್‌ಗಳೂ ಮುಗಿಬಿದ್ದವು. ಅವು ಹೊಸ ಹೊಸ ಸಾಲಯೋಜನೆಗಳನ್ನು ರೈತರಿಗೆ ತಲುಪಿಸಲು ಕಾತರಗೊಂಡವು. ಕೃಷಿಮಹೋತ್ಸವವಿನ್ನೂ ಜಾರಿಯಲ್ಲಿದ್ದಾಗಲೇ ಒಂದು ವರದಿ ಹೊರಬಿತ್ತು. ಬ್ರಿಟನ್ ಮಾರುಕಟ್ಟೆಯಲ್ಲಿ ಪಾಕಿಸ್ತಾನದ ಕ್ರೋಸೊ ಮಾವಿನ ಹಣ್ಣುಗಳ ಸ್ಥಾನವನ್ನು ಕಛ್‌ನ ಕೇಸರ ಮಾವು ಆಕ್ರಮಿಸಿಕೊಂಡಿದೆ ಅಂತ. 2004ರಲ್ಲಿ ಸುಮಾರು 250 ಟನ್ ಕೇಸರ ಮಾವು ಬ್ರಿಟನ್, ತೈವಾನ್ ಹಾಗೂ ದುಬೈಗಳಿಗೆ ರಫ್ತಾಗಿ 1.5 ಕೋಟಿ ವಿದೇಶಿ ವಿನಿಮಯವನ್ನು ತಂದುಕೊಟ್ಟವು. ಕಛ್‌ನ ತೋಟಗಾರಿಕಾ ಇಲಾಖೆಯ ಉಪನಿರ್ದೇಶಕ ಎಸ್ ಬಿ ಮಾರ್ಟಿಯಾ ಅವರ ಪ್ರಕಾರ 2004ರಲ್ಲಿ 10-15,000 ಟನ್‌ಗಳಷ್ಟಿದ್ದ ಕೇಸರ ಮಾವಿನ ಉತ್ಪಾದನೆ 30-35000 ಟನ್‌ಗಳಿಗೇರಿತ್ತು.

ಇದರ ಜತೆ ಇತರ ವಿಭಾಗಗಳ ಯಶೋಗಾಥೆಗಳೂ ಸೇರಿಕೊಂಡು ಗುಜರಾತನ್ನು ಪ್ರಜ್ವಲಿಸುವಂತೆ ಮಾಡಿದವು. ಅಹಮದಾಬಾದ್, ಗಾಂಧೀನಗರ ಹಾಗೂ ಸೂರತ್‌ಗಳು ಹೊಸ ಪಟ್ಟಣಗಳಾಗಿ ತಲೆಎತ್ತುತ್ತಿದ್ದಂತೆ ಹೋಟೆಲ್ ಉದ್ಯಮ ಚೆನ್ನಾಗಿ ಬೆಳೆದು ನಿಂತಿತು.





ಐದು ವರ್ಷಗಳ ಅವಧಿಯಲ್ಲಿ ಅತಿಹೆಚ್ಚಿನ ಬಂಡವಾಳವನ್ನು ಆಕರ್ಷಿಸಿದ ರಾಜ್ಯ ಗುಜರಾತ್ ಆಗಿತ್ತು. ಗುಜರಾತಿನ ಬಂಡವಾಳ ಸಾಧನೆ 95,000 ಕೋಟಿ ರೂಪಾಯಿಗಳಾದರೆ, ಎರಡನೇ ಸ್ಥಾನದಲ್ಲಿದ್ದ ಆಂಧ್ರಪ್ರದೇಶ ಆಕರ್ಷಿಸಿದ್ದ ಬಂಡವಾಳದ ಮೊತ್ತ, 3,000 ಕೋಟಿ ರೂ.ಗಳು. ಈ ಅಂಶ ಲೋಕಸಭೆಯಲ್ಲೇ ಪ್ರಸ್ತಾಪವಾಗಿದ್ದು, ರಾಜ್ಯ ಕೈಗಾರಿಕಾ ಹಾಗೂ ವಾಣಿಜ್ಯ ಮಂತ್ರಿ ಕಮಲ್‌ನಾಥ್ ಅದನ್ನು ಬಹಿರಂಗಗೊಳಿಸಿದರು. ಅಲ್ಲಿಗೆ ಯುಪಿಎ ಸರಕಾರವೇ ಗುಜರಾತ್ ಸರಕಾರದ ಅಭಿವೃದ್ಧಿಯ ಓಟವನ್ನು ಒಪ್ಪಿಕೊಂಡಂತಾಗಿತ್ತು. ಮೋದಿ ಯಶಸ್ಸಿನ ಪ್ರಭೆ ಹೆಚ್ಚು ಹೆಚ್ಚು ಬೆಳಗುತ್ತಾ ಹೋದಂತೆ ಬಂಡಾಯ ಮನೋಭಾವದವರ ವ್ಯಥೆಯೂ ಹೆಚ್ಚಾಯಿತು. ಕೇಶುಭಾಯ್ ಪಟೇಲ್ ಮತ್ತೊಮ್ಮೆ ಮೋದಿ ವಿರುದ್ಧ ದೆಹಲಿಗೆ ದೂರು ಒಯ್ದರು. ಈ ಬಾರಿಯೂ ಮೋದಿ ಸರ್ವಾಧಿಕಾರಿ ಧೋರಣೆಯೇ ಅವರ ಅಸಮಾಧಾನಕ್ಕೆ ಕೊಟ್ಟ ಕಾರಣವಾಗಿತ್ತು.

ಆದರೆ ಬಿಜೆಪಿ ರಾಷ್ಟ್ರೀಯ ಕಾರ್ಯದರ್ಶಿ ಓಮ್ ಮಾಥೂರ್ ನಾಯಕತ್ವ ಬದಲಾವಣೆಗೆ ನಕಾರ ಸೂಚಿಸಿ ಬಂಡಾಯಗಾರರಿಗೆ ಮೌನವಹಿಸಲು ತಾಕೀತು ಹಾಕಿದರು.

### ಅಪ್ಪಳಿಸಿತ್ತು ಪ್ರವಾಹ, ಸತ್ತು ಮಲಗಿತ್ತು ಸಂಪರ್ಕ ವ್ಯವಸ್ಥೆ

ಬದುಕು ಸರಾಗವಾಗಿ ಸಾಗುತ್ತಿರುವಾಗಲೇ ಗುಜರಾತ್‌ಗೆ ಪ್ರವಾಹದ ರೂಪದಲ್ಲಿ ಆಘಾತ ಬಂದೆರಗಿತ್ತು. ತೀರ ನೆಲಕಚ್ಚಿಹೋಗಿದ್ದು ಫಾರ್ಮಾಸ್ಯೂಟಿಕಲ್ ಇಂಡಸ್ಟ್ರಿ. ಅದರಲ್ಲೂ ವೇಡಾ ಹಾಗೂ ಬರೋಡಾಗಳಲ್ಲಿ ಇದರ ಪ್ರತಾಪ ಜೋರಾಗಿತ್ತು. ಪ್ರವಾಸೋದ್ಯಮವನ್ನಂತೂ ಬುಡಸಮೇತ ಅಲುಗಾಡಿಸಿತ್ತು. ವ್ಯಾಪಾರ 50 ಶೇಕಡ ಕುಸಿತ ಕಂಡಿತು. ಒಂದೇ ವಾರದಲ್ಲಿ 10 ರಿಂದ 12 ಶತಕೋಟಿ ರೂ.ಗಳವರೆಗೆ ಕಳೆದುಕೊಂಡಿತು ಉದ್ಯಮರಂಗ. ಅಹಮದಾಬಾದಿನ ಅಷ್ಟೂ ದೂರವಾಣಿ ಲೈನುಗಳೂ ಸತ್ತು ಮಲಗಿದ್ದವು. ಆದರೆ ರಾಜಕೀಯ ಮಾತ್ರ ಅಲ್ಲೂ ತನ್ನ ಚಾಳಿ ಬಿಡಲಿಲ್ಲ. 'ಗುಜರಾತಿನ ರಾಜಕಾರಣಿಗಳು ಲಂಡನ್ ಬ್ಲಾಸ್ಟ್ ಪ್ರಕರಣದಿಂದ ಏನನ್ನೂ ಕಲಿಯದಿರುವುದೇ ವಿಷಾದದ ಸಂಗತಿ. ವಿಕೋಪದ ಸಂದರ್ಭದಲ್ಲಿ ಅಲ್ಲಿನ ವಿರೋಧ ಪಕ್ಷ ಆಡಳಿತ ಪಕ್ಷದ ಬೆನ್ನಿಗೆ ನಿಂತಿತ್ತು. ಆಡಳಿತ ಪಕ್ಷ ಹಾಗೂ ವಿರೋಧ ಪಕ್ಷಗಳು ಇಂತಹ ಸಂದರ್ಭದಲ್ಲೂ ಕೆಸರೆರಚಾಟ ಮುಂದುವರೆಸಿದ್ದು ಜನರ ಸಂಕಷ್ಟವನ್ನೇ ಅಡಿಕೊಂಡಂತಿತ್ತು' ಎಂದು ಬರೆಯಿತು 'ಏಷ್ಯನ್ ಏಜ್". ವಾಸ್ತವದಲ್ಲಿ ನೆರೆಪರಿಹಾರವನ್ನು ಪ್ರೋತ್ಸಾಹಿಸುವ ಬದಲು ಕಾಂಗ್ರೆಸ್ ಮೋದಿಯನ್ನು ಕೆಳಗಿಳಿಸಲಾದೀತಾ ಅಂತ ಆ ಕ್ಷಣ ದಲ್ಲೂ ಪ್ರಯತ್ನಿಸಿತು. "2001ರ ಭೂಕಂಪ, ನೆರೆಹಾವಳಿ ಇತ್ಯಾದಿ ಎಲ್ಲ ನೈಸರ್ಗಿಕ

ವಿಕೋಪಗಳ ನಡುವೆಯೂ ಗುಜರಾತು ಅಭಿವೃದ್ಧಿಯ ಪಥದಲ್ಲಿ ದಾಪುಗಾಲಿಡುತ್ತಾ ದೇಶದಲ್ಲೇ ಉತ್ತಮ ಆಡಳಿತದ ರಾಜ್ಯವಾಗುವಲ್ಲಿ ದಿಟ್ಟ ಹೆಜ್ಜೆಯನ್ನೇ ಇಟ್ಟಿದೆ. ಭೂಕಂಪದಲ್ಲಿ ನಿರಾಶ್ರಿತರಾದ ಎಲ್ಲರಿಗೂ ಪುನರ್ವಸತಿ ದೊರಕಿದೆ. ಈ ಹಂತದಲ್ಲಿ ಅವರ ಜಾತಿ, ಧರ್ಮ, ಬಣ್ಣ ಯಾವುದನ್ನೂ ಪರಿಗಣನೆಗೆ ತೆಗೆದುಕೊಳ್ಳದೇ ಸಮಾನವಾಗಿ ಕಾಣಲಾಗಿದೆ. ಲಕ್ಪತ್‌ನಲ್ಲಿ ಭೂಕಂಪದಿಂದಾಗಿ ಘಾಸಿಗೊಳಗಾಗಿದ್ದ ಹರಿದ್ವಾರದ ಪುನರ್ ನಿರ್ಮಾಣಕ್ಕಾಗಿ ಗುಜರಾತ್ ರಾಜ್ಯಕ್ಕೆ 'ಯುನೆಸ್ಕೋ'ದ ಏಷಿಯಾ ಪೆಸಿಫಿಕ್ ಹೆರಿಟೇಜ್ ಅವಾರ್ಡ್ ಲಭಿಸಿದೆ. ಜಾಗತಿಕ ಸಂಸ್ಥೆಯಾದ 'ಟ್ರಾನ್ಸ್‌ಪರೆನ್ಸಿ ಇಂಟರ್ ನ್ಯಾಷನಲ್' ಭಾರತದ 20 ರಾಜ್ಯಗಳಲ್ಲಿ ಅಧ್ಯಯನ ಕೈಗೊಂಡು ಗುಜರಾತ್ ಲಂಚಕೋರ ಯಾದಿಯಲ್ಲಿ ಕಡೆ ಸ್ಥಾನದಲ್ಲಿರುವುದನ್ನು ತೋರಿಸಿದೆ'- ದಿ ಪಯೋನೀರ್'ನಲ್ಲಿ ಪ್ರಕಟವಾದ ಓದುಗರ ಅಭಿಪ್ರಾಯವೊಂದು ಹೀಗಿತ್ತು. ಆ ಸಮಯದಲ್ಲೇ ರಾಜ್ಯಮಟ್ಟದ 'ಬ್ಯಾಂಕರ್ಸ್ ಸಮಿತಿ' ಅಹಮದಾಬಾದಿನಲ್ಲಿ ಸಭೆ ಸೇರಿತು. ಅದರಲ್ಲಿ ಪ್ರವಾಹ ಪೀಡಿತ ಕೈಗಾರಿಕೆಗಳಿಗೆ, ವ್ಯಾಪಾರಿಗಳಿಗೆ ಹಾಗೂ ರೈತರಿಗೆ ಆರ್ಥಿಕವಾಗಿ ನೆರವು ನೀಡುವ ನಿರ್ಣಯ ಹೊರಬಿತ್ತು. ಸರಕಾರ 14 ಜಿಲ್ಲೆಗಳ 80 ತಾಲೂಕುಗಳ ಒಟ್ಟೂ 2056 ಹಳ್ಳಿಗಳನ್ನು ಪ್ರವಾಹಪೀಡಿತ ಎಂಬುದಾಗಿ ಘೋಷಣೆ ಮಾಡಿತು. 4,500 ಕೈಗಾರಿಕೆಗಳು ಅಂದಾಜು 11.3 ಶತಕೋಟಿ ರೂ. ನಷ್ಟ ಅನುಭವಿಸಿದ್ದವು. ಪ್ರವಾಹವನ್ನೂ ಸಹ ರಚನಾತ್ಮಕ ಕಾರ್ಯಗಳಿಗೆ ಬಳಸಿಕೊಳ್ಳಬಹುದೆಂದು ಗುಜರಾತ್ ಸರಕಾರ ತೋರಿಸಲು ಮುಂದಾಯಿತು. ಅದು ನದಿಗಳ ನವೀಕರಣಕ್ಕಿಳಿಯಿತು. ಬತ್ತಿ ನಿಂತ ನದಿಗಳ ಪಕ್ಕದಲ್ಲಿ 490 ದೊಡ್ಡ ಹಾಗೂ ಮಧ್ಯಮ ಮಟ್ಟದ ಚೆಕ್‌ಡ್ಯಾಮ್‌ಗಳನ್ನು ನಿರ್ಮಿಸುವ ಯೋಜನೆ ಕೈಗೆತ್ತಿಕೊಂಡಿತದು. 25 ನದಿಗಳು ಕಾಲಾಂತರಗಳಿಂದ ಬತ್ತಿ ನಿಂತಿದ್ದವು. ಸರಕಾರದ ಪ್ರಯತ್ನದಲ್ಲಿ 'ಸೌರಾಷ್ಟ್ರ ಜಲಧಾರಾ ಟ್ರಸ್ಟ್' ಸಹ ಕೈಗೂಡಿಸಿತು. ಸೌರಾಷ್ಟ್ರವೊಂದರಲ್ಲೇ 175 ದೊಡ್ಡಮಟ್ಟದ ಡ್ಯಾಮ್‌ಗಳು ತಲೆಯೆತ್ತಿ ನಿಂತವು. ಪ್ರವಾಹದ ವಿಕೋಪ ಬಡಿಯುವುದಕ್ಕೂ ಮುಂಚೆ ರಾಜ್ಯ ಆಗಷ್ಟೇ ಆಘಾತವೊಂದರಿಂದ ಚೇತರಿಸಿಕೊಳ್ಳುತ್ತಿತ್ತು. ಸಾಬರ್‌ಮತಿ ಎಕ್ಸ್‌ಪ್ರೆಸ್ ನಿಂತಿದ್ದ ಗೂಡ್ಸ್ ರೈಲೊಂದಕ್ಕೆ ಗುದ್ದಿ 15 ಜನ ಸತ್ತು 90 ಜನಕ್ಕೆ ಗಾಯಗಳಾಗಿದ್ದವು.

ಆ ಘಟನೆಯ ರಾಜಕೀಯ ಲಾಭ ಪಡೆಯಲು ರೈಲ್ವೆ ಸಚಿವ ಲಾಲು ಪ್ರಸಾದ್ ಯಾದವ್ ಗುಜರಾತಿಗೆ ಭೇಟಿ ಇತ್ತರು. ಆದರೆ ಲಾಲು ಬ್ಯಾನರ್ಜಿ ಕಮಿಟಿ ವರದಿಯನ್ನಿಟ್ಟುಕೊಂಡು ಮಾಡಿದ್ದ ರಾಜಕೀಯ ಜನರನ್ನು ರೊಚ್ಚಿಗೆಬ್ಬಿಸಿತ್ತು. ಯಾರೋ ಲಾಲು ಕಾರಿನ ಮೇಲೆ ಕಲ್ಲು ತೂರಿದರು. ನರೇಂದ್ರ ಮೋದಿಯೇ ಜನರನ್ನು ರೊಚ್ಚಿಗೆಬ್ಬಿಸಿ ಈ ಕೃತ್ಯಕ್ಕೆ ಕಾರಣರಾಗಿದ್ದಾರೆಂದು ಲಾಲೂ ವರಾತಕ್ಕಿಳಿದರು. ಸಂಘ ಪರಿವಾರ ತಮ್ಮನ್ನು





ಮುಗಿಸಿಬಿಡಲು ಪ್ರಯತ್ನಿಸುತ್ತಿದೆ ಅಂತಲೂ ಕೂಗುಹಾಕಿದರು. ಮೋದಿಯನ್ನು ಕೆಳಗಿಳಿಸಬೇಕು ಅಂತ ಗರ್ಜಿಸಿದರು. ಇಷ್ಟೆಲ್ಲ ಆಗುತ್ತಿದ್ದರೆ ಮೋದಿ ಇದ್ಯಾವುದಕ್ಕೂ ತಲೆಕೆಡಿಸಿಕೊಳ್ಳದೇ ಆಸ್ಪತ್ರೆಯಲ್ಲಿ ಗಾಯಾಳುಗಳನ್ನು ಸಂತೈಸುತ್ತಿದ್ದರು. ಲಾಲುನಂತಹ ಜೋಕರ್‌ಗೆ ಉತ್ತರ ಕೊಡುತ್ತಾ ಕೂರುವುದಕ್ಕಿಂತ, ಮಾಡಬೇಕಾದ ಬೇರೆ ಕೆಲಸಗಳು ಮೋದಿಯ ಪಾಲಿಗೆ ಬಹಳಿದ್ದವು. ಏಪ್ರಿಲ್ 22ರ 'ಏಷಿಯನ್ ಏಜ್'ನ ವರದಿ ಇಲ್ಲಿ ಗಮನಾರ್ಹವಾಗುತ್ತದೆ. "ಕೋಮುವಾದಿಗಳು, ಹಿಂದೂ ಮೂಲಭೂತವಾದಿಗಳು ಎಂದು ಹಣೆಪಟ್ಟಿಹಚ್ಚಿಕೊಂಡ ಮೇಲೂ ಆರೆಸ್ಸೆಸ್ ಏಕೆ ಮುಖ್ಯವಾಗುತ್ತದೆ ಎಂಬುದಕ್ಕೆ ಬಹುಶಃ ಇದೇ ವಿವರಣೆಯಾಗಬಲ್ಲುದು. ಅಪಘಾತದ ಬಗ್ಗೆ ತಿಳಿಯುತ್ತಲೇ ಸಾಲ್ವಿ, ಬರೋಡಾ, ಹಲಾಲ್ ಮತ್ತು ಕಲಾಲ್‌ಗಳ ಸುಮಾರು 200 ಸ್ವಯಂಸೇವಕರು ಸ್ಥಳಕ್ಕೆ ಧಾವಿಸಿ ಪರಿಹಾರ ಕಾರ್ಯದಲ್ಲಿ ತೊಡಗಿಸಿಕೊಂಡರು".

ಸುಮ್ಮನೇ ಬೊಬ್ಬಿರಿಯುತ್ತಿದ್ದ ಲಾಲುಗೆ 'ಇಂಡಿಯನ್ ಎಕ್ಸ್‌ಪ್ರೆಸ್' ಸಹ ತನ್ನ ಸಂಪಾದಕೀಯದ ಮೂಲಕ ಕಿವಿ ಹಿಂಡಿತು.

# 39
# ಸರಸ್ವತಿಗೆ ಪುನರ್ಜನ್ಮ

ಮೋದಿ ವಿರುದ್ಧದ ಟೀಕೆಗಳು ಹಾಗೆಯೇ ಮುಂದುವರೆದಿದ್ದವು. ಅರ್ಜುನ್ ಸಿಂಗ್‌ರಂತಹ ಮಂತ್ರಿಗಳೂ ಅದರಲ್ಲಿ ಗಂಭೀರವಾಗಿ ತೊಡಗಿಕೊಂಡಿದ್ದರು. ಆದರೆ ಮೋದಿಗೆ ಅರ್ಥಹೀನ ರಾಜಕೀಯದಲ್ಲಿ ಬಿದ್ದು ಹೊರಳಾಡುವುದು ಬೇಕಿರಲಿಲ್ಲ. ಗುಜರಾತಿನ ಅಭಿವೃದ್ಧಿಯ ಮೇಲೆ ತಮ್ಮೆಲ್ಲ ಗಮನ ಕೇಂದ್ರೀಕರಿಸಿದ್ದರು ಮೋದಿ. ಅಷ್ಟರಲ್ಲಾಗಲೇ ಒಂದು ವಿಚಿತ್ರ ಬೆಳವಣಿಗೆ ನಡೆದಿತ್ತು. ಸೆಪ್ಟೆಂಬರ್ 9ರಂದು ಅಹಮದಾಬಾದಿಗೆ ಭೇಟಿಯಿತ್ತಿದ್ದ ಯುಎಸ್ ಕೌನ್ಸಿಲ್ ಜನರಲ್, "ಮೋದಿ ಬೇಕಾದರೆ ವೀಸಾಕ್ಕೆ ಅರ್ಜಿ ಸಲ್ಲಿಸಬಹುದು. ನಾವೇನೂ ಮೋದಿ ಭೇಟಿಯ ಕುರಿತು ಭಯ ಹೊಂದಿಲ್ಲ. ಆದರೆ ಮಾನವ ಹಕ್ಕುಗಳಿಗೆ ಸಂಬಂಧಿಸಿದಂತೆ ಯಾವ ಪ್ರವಾಸಿಗಾದರೂ ಕೆಲವು ನೀತಿ ನಿಯಮಗಳು ಅನ್ವಯಿಸುತ್ತವೆ" ಎಂದು ಬಿಟ್ಟರು. ಹಾಗೆ ಮಾತನಾಡಿದ ಅಮೆರಿಕಕ್ಕೆ ತೇಪೆ ಹಚ್ಚುವ ಉತ್ಸುಕತೆಯಿತ್ತು. ಆದರೆ ಮೋದಿ ಈ ಬಗ್ಗೆ ತಲೆಕೆಡಿಸಿಕೊಳ್ಳುವುದಕ್ಕೆ ಹೋಗಲಿಲ್ಲ. ಕೌನ್ಸಿಲ್ ಜನರಲ್ ಮೈಕೆಲ್ ಎಸ್. ಓವೆನ್‌ಗೆ ಮೋದಿ ಜತೆ ಅಪಾಯಿಂಟ್‌ಮೆಂಟ್ ಸಹ ದೊರೆಯದಾಯಿತು! ಅಮೆರಿಕದ ಈ ಪುನರ್ವಿಮರ್ಶೆಗೆ ಕಾರಣವೇನೆಂದು ವಿವರಿಸುವ ಸರದಿ ಮೈಕೆಲ್‌ನದಾಯಿತು. "ನಾನು ಗುಜರಾತಿನ ಅನೇಕ ಸ್ವಯಂಸೇವಾ ಸಂಸ್ಥೆಗಳು, ಮಾನವ ಹಕ್ಕು ಸಂಘಟನೆಗಳನ್ನು ಭೇಟಿ ಮಾಡಿದೆ. ಅವರೆಲ್ಲರ ಅಭಿಪ್ರಾಯ 'ಗೋಧ್ರಾ ಒಂದು ಮುಗಿದು ಹೋದ ಘಟನೆ. ಅವತ್ತಿನಿಂದ ಇವತ್ತಿಗೆ ಪರಿಸ್ಥಿತಿ ಸಾಕಷ್ಟು ಸುಧಾರಿಸಿದೆ' ಎನ್ನುವ ಮಾತು ಬಂತು" ಎಂದರು.

ಆದರೆ ನರೇಂದ್ರ ಮೋದಿಗೆ ವೀಸಾ ಪಡೆದುಕೊಳ್ಳುವುದಕ್ಕಿಂತ ಮಹತ್ವದ ಕೆಲಸಗಳು ಮಾಡಲಿಕ್ಕಿದ್ದವು. ಅದು ಅರ್ಥವಾಗಲು 'ಫೈನಾನ್ಷಿಯಲ್ ಎಕ್ಸ್‌ಪ್ರೆಸ್'ನ ಬರಹ ಗಮನಿಸಬೇಕು. ಅದು 'ಗುಜರಾತ್ ಗ್ರೀನ್ ರೆವಲ್ಯೂಷನ್ ಕಂಪನಿ'ಯ ಯೋಜನೆಯಾದ

'ಮೆಕ್ರೋ ಇರಿಗೇಷನ್' ತುಂಬ ಜನಪ್ರಿಯವಾಗುತ್ತಿರುವುದರ ಬಗ್ಗೆ ಬರೆದಿತ್ತು. ರೈತರು ಆ ಪದ್ಧತಿಯನ್ನು ಅಳವಡಿಸಿ ಕೊಳ್ಳಲು ಅತ್ಯುತ್ಸಾಹವನ್ನು ತೋರಿಸುತ್ತಿದ್ದಾರೆ. ಮೇ 2005ರ ಮೊದಲ ವಾರದಲ್ಲಿ ಕಂಪನಿ ಶುರುವಾದಾಗಿನಿಂದ ಸ್ಪ್ರಿಂಕ್ಲರ್‌ಗಳ ಅಳವಡಿಕೆಯನ್ನು ಕೋರಿ 8834 ಅರ್ಜಿಗಳು ಬಂದಿದ್ದವು. ರಾಜ್ಯಾದ್ಯಂತ 11000 ಹೆಕ್ಟೇರ್ ಒಟ್ಟಾರೆ ಭೂಮಿ ಸ್ಪ್ರಿಂಕ್ಲರ್ ಅಳವಡಿಸಿಕೊಳ್ಳಲು ಸಿದ್ಧವಾಗಿ ನಿಂತಿದೆ. ಇನ್ನೂ 20,000 ಹೆಕ್ಟೇರ್ ನೆಲವನ್ನು ಯೋಜನೆ ಯಡಿ ತರಲು ಕಂಪನಿ ದಾಪುಗಾಲು ಹಾಕಿದೆ. ಅನಂತರ ಬಂತೊಂದು ದೊಡ್ಡ ಸುದ್ದಿ- ರಾಜ್ಯದ ಅಧೀನವಾದ 'ಗುಜರಾತ್ ಪೆಟ್ರೋಲಿಯಮ್ ಕಾರ್ಪೋರೇಷನ್' ದೇಶದ ವಾಯವ್ಯ ಭಾಗದಲ್ಲಿ ಭಾರಿ ತೈಲ ನಿಕ್ಷೇಪವನ್ನು ಪತ್ತೆ ಹಚ್ಚಿತ್ತು. 20 ಟ್ರಿಲಿಯನ್ ಕ್ಯೂಬಿಕ್ ಮೀಟರ್‌ನ ಈ ತೈಲ ನಿಕ್ಷೇಪ 50 ಬಿಲಿಯನ್ ಡಾಲರ್ ಆದಾಯದ್ದಾಗಿತ್ತು! ಸದ್ಯಕ್ಕೆ ತೈಲ ನಿಕ್ಷೇಪವನ್ನು ಅಭಿವೃದ್ಧಿ ಪಡಿಸಲು 341 ಮಿಲಿಯನ್ ಡಾಲರ್‌ಗಳ ಆವಶ್ಯಕತೆಯಿತ್ತು. ಸುದ್ದಿ ತಿಳಿಯುತ್ತಲೇ ಬ್ರಿಟನ್ನಿನ ಬಿ.ಜಿ. ಗ್ರೂಪ್, ಫ್ರಾನ್ಸ್‌ನ ಇನ್ನೆರಡು ಕಂಪನಿಗಳು ಈ ಬೃಹತ್ ತೈಲ ನಿಕ್ಷೇಪದ ಅಭಿವೃದ್ಧಿಗೆ ಬಂಡವಾಳ ಹೂಡಲು ಮುಂದೆ ಬಂದವು. ಅದೇ ಸಮಯಕ್ಕೆ ಎಸ್ಸಾರ್ ಸ್ಟೀಲ್ ಸಮೂಹ 1.2 ಮಿಲಿಯನ್ ಟನ್ ಸಾಮರ್ಥ್ಯದ ಮಿಲ್ ಸ್ಥಾಪಿಸಿ, ನರೇಂದ್ರ ಮೋದಿಯವರನ್ನು ಉದ್ಘಾಟನೆಗೆ ಕರೆಯಿತು. ಈ ಹೊಸದಾದ ಉತ್ಪಾದಕ ಸ್ಥಾವರ 1000 ಕೋಟಿ ವೆಚ್ಚದಲ್ಲಿ ನಿರ್ಮಾಣವಾಗಿದ್ದು ಅದರಲ್ಲಿ 750 ಕೋಟಿ ಈಕ್ವಿಟಿ ಹಾಗೂ ಆಂತರಿಕ ಷೇರುಗಳಿಂದಲೇ ಬಂದಿತ್ತು. ಈ ಅಭಿವೃದ್ಧಿಯ ಟ್ರೆಂಡ್‌ನಿಂದ ಉತ್ತೇಜಿತಗೊಂಡು 'ಗುಜರಾತ್ ಮಾರಿಟೈಮ್ ಡೆವಲಪ್‌ಮೆಂಟ್ ಬೋರ್ಡ್' ಸಣ್ಣ ಬಂದರುಗಳನ್ನು ಅಭಿವೃದ್ಧಿ ಪಡಿಸುವುದರತ್ತ ಚಿತ್ತ ಹಾಯಿಸಿತು. ಆ ನಿಟ್ಟಿನಲ್ಲಿ ವಿದೇಶಿ ಬಂಡವಾಳ ಆಕರ್ಷಿಸಲು ಮಾತುಕತೆಗಳಿಗೆ ಮೊದಲಾಯ್ತು. ಇದಕ್ಕೆಲ್ಲ ಮೊಹರು ಒತ್ತುವಂತೆ ಅಹಮದಾಬಾದಿನ ಒಟ್ಟು 12 ಮುನ್ಸಿಪಾಲಿಟಿ ಸ್ಥಾನಗಳಲ್ಲಿ 11ನ್ನು ಬಿಜೆಪಿ ಬಾಚಿಕೊಂಡಿತು. ಕಾಂಗ್ರೆಸ್ ಪಾಲಿಗೆ ದಕ್ಕಿದ್ದು ಕೇವಲ ಒಂದು ಸ್ಥಾನ. ಇಲ್ಲಿ ಬಿಜೆಪಿ ಪಾಲಿಗೆ ಸಂಭ್ರಮದ ಸುದ್ದಿ ಸ್ಫೋಟವಾಗುತ್ತಿದ್ದರೆ ಮೋದಿ ಮಾತ್ರ ತಮ್ಮ ಅಭಿವೃದ್ಧಿ ಯಾತ್ರೆಯಲ್ಲಿ ನಿರತರಾಗಿದ್ದರು. 225 ಕಿಲೋಮೀಟರ್‌ಗಳ ಗ್ಯಾಸ್ ಪೈಪ್‌ಲೈನ್ ಯೋಜನೆಗೆ ಅವರಲ್ಲಿ ಅಡಿಗಲ್ಲು ಹಾಕುತ್ತಿದ್ದರು. ಒಮ್ಮೆ ಗ್ಯಾಸ್ ಪೂರೈಕೆ ಆರಂಭವಾಯಿತೆಂದರೆ ಅದು ಸೌರಾಷ್ಟ್ರ ಹಾಗೂ ಮೋರ್ಬಿಯಲ್ಲಿನ ಸಾಂಪ್ರದಾಯಿಕ ಸಿರಮಿಕ್ ಇಂಡಸ್ಟ್ರಿಗೆ ಅನುಕೂಲವನ್ನೊದಗಿಸಲಿತ್ತು.

ನರೇಂದ್ರ ಮೋದಿ ಎಲ್ಲೆಲ್ಲೂ ವಿಜೃಂಭಿಸುತ್ತಿದ್ದರು.

ಸೆಪ್ಟೆಂಬರ್ 8. ಆ ದಿನ 'ನ ಭೂತೊ, ನ ಭವಿಷ್ಯತಿ' ಎಂಬ ಒಂದು ಕಾರ್ಯಕ್ರಮಕ್ಕೆ ಮುನ್ನುಡಿ





ಬರೆದರು ಮೋದಿ. ಅದು ಇತಿಹಾಸದಲ್ಲೇ ಅಪೂರ್ವ ಘಟನೆ. ಶತಮಾನಗಳಿಂದ ಬತ್ತಿ ನಿಂತಿದ್ದ, ಪುರಾಣಗಳಲ್ಲಿ ಮಾತ್ರವೇ ಉಳಿದಿದ್ದ ಸರಸ್ವತಿ ನದಿಯನ್ನು ನರ್ಮದೆಯೊಂದಿಗೆ ಬೆಸೆದು ಅದರೊಡಲಲ್ಲಿ ನೀರು ಚಿಮ್ಮುವಂತೆ ಮಾಡಿದ ಅಸಾಮಾನ್ಯ ಘಳಿಗೆ ಅದಾಗಿತ್ತು. ಆ ಕ್ಷಣಕ್ಕೆ ಸಾವಿರಾರು ಸಂತರು ಸಾಕ್ಷಿಯಾದರು. ಮಂತ್ರಘೋಷಗಳು ಮೊಳಗಿದವು. 'ಇದು ನರ್ಮದಾ ಸರಸ್ವತಿಯೊಳಗೆ ಹರಿದು ಬಂದ ಘಟನೆ ಮಾತ್ರವೇ ಅಲ್ಲ, ಇದು ಈ ಪ್ರದೇಶದ ಜನರೆಲ್ಲ ಸುಭಿಕ್ಷದಿಂದಿರುವಂತೆ ಮಾಡುತ್ತದೆ' ಎಂದು ಭಾವುಕರಾಗಿ ನುಡಿದರು. ಅಲ್ಲಿಗೆ ಮೋದಿ 'ಹಿಂದೂ ಹೃದಯ ಸಾಮ್ರಾಟ' ಎಂದು ಯಾವ ಕಾರಣಕ್ಕೆ ಕರೆಸಿಕೊಳ್ಳುತ್ತಾರೆ ಎಂಬುದು ಖಾತ್ರಿಯಾಗಿತ್ತು. ಸರಸ್ವತಿ ಎಂಬ ಹಿಂದೂಗಳ ಅಗಾಧ ಶ್ರದ್ಧೆಯನ್ನು ಸಾಕ್ಷಾತ್ಕರಿಸಿದ್ದರು ಮೋದಿ. ಶನಿವಾರ, ಸೆಪ್ಟೆಂಬರ್ 10. ಮೋದಿ 1100 ಮೆಗಾವ್ಯಾಟ್ ಅನಿಲ ಸ್ಥಾವರಕ್ಕೆ ಶಂಕುಸ್ಥಾಪನೆ ನೆರವೇರಿಸಿದರು. ಸೂರತ್‌ನಿಂದ ಸುಮಾರು 25 ಕಿಲೋಮೀಟರ್‌ಗಳ ದೂರವಿದ್ದ ಅಕ್ಲಾಕೊಲ್ ಗ್ರಾಮದಲ್ಲಿ 'ಟೊರೆಂಟ್ ಪವರ್ ಜನರೇಷನ್ ಲಿಮಿಟೆಡ್' ಅದನ್ನು ಸ್ಥಾಪಿಸಿತ್ತು. ಅದರ ಬೆನ್ನಲ್ಲೇ ಮೋದಿ ಉದ್ಘಾಟಿಸಿದ್ದು ಸೂರತ್‌ನಲ್ಲಿ 30.39 ಕೋಟಿ ವೆಚ್ಚದಲ್ಲಿ ನಿರ್ಮಾಣವಾದ ಸೈನ್ಸ್ ಸೆಂಟರ್. ಅದಾದ ನಂತರ ಕಚ್‌ನಲ್ಲಿ ಮಾಂಡ್ವಿ ಹಾಗೂ ಅಬ್ದಸಾಗಳು ನೀಡಿದ್ದ ಭೂಮಿಯಲ್ಲಿ 'ಸುಜ್ಲಾನ್ ಎನರ್ಜಿ ಪ್ಲಾನ್'ರವರ 500 ಮೆಗಾವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಘಟಕ. ಹೀಗೆ ಒಂದರ ಹಿಂದೊಂದರಂತೆ ಘಟಿಸುತ್ತಿದ್ದ ಅಭಿವೃದ್ಧಿ ಓಟಗಳು ಎಂಥವರ ಕಣ್ಣಿಗೂ ರಾಚುವಂತಿದ್ದವು. ಎಲ್ಲರಿಗೂ ತಿಳಿದಿದ್ದ ಒಂದು ಅಂಶವೆಂದರೆ, ಈ ಎಲ್ಲಾ ಅಭಿವೃದ್ಧಿ ಯಾನಗಳಿಗೆ ಸ್ಫೂರ್ತಿ 'ಮುಖ್ಯಮಂತ್ರಿ ನರೇಂದ್ರ ಮೋದಿ'.

ಸೆಪ್ಟೆಂಬರ್ 13ರ 'ಟೈಮ್ಸ್ ಆಫ್ ಇಂಡಿಯಾ' ಬರೆಯಿತು, 'ಭಾರತದ ವಿಶೇಷ ವಿತ್ತ ವಲಯಗಳ ರಾಜಧಾನಿಯಾಗಿ ಗುಜರಾತ್ ಬೆಳೆಯುತ್ತಿದೆ. ಆರ್ಥಿಕ ವಲಯದ ವಿಸ್ತೀರ್ಣ ಹಾಗೂ ಒಟ್ಟೂ ಯೋಜನೆಗಳು ಈ ಎರಡೂ ಹಂತಗಳಲ್ಲೂ ಗುಜರಾತ್ ಮುಂದಿದೆ. ಬಂದರು, ರಸ್ತೆ ಹಾಗೂ ರೈಲ್ವೆ ಈ ಎಲ್ಲಾ ಕಡೆಗಳಿಂದಲೂ ಇರುವ ಉತ್ತಮವಾದ ಸಂಪರ್ಕ ವ್ಯವಸ್ಥೆ, ರಾಜ್ಯ ಸರಕಾರದ ಉತ್ತಮ ಪ್ರೋತ್ಸಾಹ, ಇಲ್ಲವೇ ಇಲ್ಲ ಎನ್ನಬಹುದಾದ ಕಾರ್ಮಿಕರ ಗಲಾಟೆ, ಜನತೆಯ ಸಂಘಟನಾ ಮನೋಭಾವ ಇವೆಲ್ಲದರಿಂದಾಗಿ ಎಸ್‌ಇಝಡ್‌ಗೆ ಅತಿ ಪ್ರಶಸ್ತ ಸ್ಥಳವಾಗಿ ಹೊರಹೊಮ್ಮುತ್ತಿದೆ ಗುಜರಾತ್ ರಾಜ್ಯ'. ಮಾರ್ಚ್ 2004ರ ವೇಳೆಗಾಗಲೇ ವಿಶೇಷ ಆರ್ಥಿಕ ವಲಯವನ್ನು ಜಾರಿಗೆ ತಂದಂತಹ ಗುಜರಾತ್ ಆ ವಿಷಯದಲ್ಲಿ ದೇಶದಲ್ಲೇ ಮೊದಲ ರಾಜ್ಯ ಸಹ ಆಗಿತ್ತು. ಇಲ್ಲಿ ಗಮನಿಸಬೇಕಾದ ಮತ್ತೊಂದು ಮಹತ್ವದ

ಅಂತವೇನೆಂದರೆ ಎಸ್‌ಇಝೆಡ್‌ಗಳ ಸ್ಥಾಪನೆ ವಿಷಯದಲ್ಲಿ ಸಣ್ಣ ವಿವಾದಕ್ಕೂ ಒಳಗಾಗದ ದೇಶದ ಏಕೈಕ ರಾಜ್ಯವೆಂದರೆ ಗುಜರಾತ್. ಅಷ್ಟಕ್ಕೂ ಎಸ್‌ಇಝೆಡ್‌ಗಳ ಸ್ಥಾಪನೆಗೆ ಮೋದಿ ನೀಡಿದ್ದು ಕೃಷಿ ಭೂಮಿಯನ್ನಲ್ಲ, ಏನೂ ಬೆಳೆಯದ ಬಂಜರು ನೆಲವನ್ನು! ಇಂಥದ್ದೇ ಅನೇಕ ವಿಶೇಷ ಆರ್ಥಿಕವಲಯಗಳು ಸ್ಥಾಪಿತವಾಗಬೇಕು ಅನ್ನೋದು ನರೇಂದ್ರ ಮೋದಿ ಬಯಕೆಯಾಗಿತ್ತು. ಮಾಧ್ಯಮದಲ್ಲಿ ವರದಿಗಳು ಕಾಣಿಸಿಕೊಳ್ಳಲು ಶುರುವಾದವು. 'ದೇಶ ಕೈಗಾರಿಕೀಕರಣದ ಚಕ್ರಕ್ಕೆ ಸಿಲುಕಿದೆ. ದೇಶದಲ್ಲೇ ಎರಡನೇ ಅತಿಹೆಚ್ಚು ಕೈಗಾರಿಕೆಗಳನ್ನು ಹೊಂದಿರುವ ರಾಜ್ಯವಾಗಿರುವ ಗುಜರಾತ್ ಬಂಡವಾಳ ಹೂಡಿಕೆಯ ನೆಚ್ಚಿನ ತಾಣವಾಗಿ ಬೆಳೆಯುತ್ತಿದೆ. ಕೈಗಾರಿಕಾ ಮೆಮೋರ್‍ಯಾಂಡಾಗಳು ಹಾಗೂ ಬಂಡವಾಳದ ಅಂದಾಜು ಹೂಡಿಕೆಯ ಲೆಕ್ಕದಲ್ಲಿ ಗುಜರಾತ್ ತುಂಬ ಮುಂದಿದೆ.' 'ಸೆಕ್ರೆಟರಿಯೆಟ್ ಫಾರ್ ಇಂಡಸ್ಟ್ರಿಯಲ್ ಅಸಿಸ್ಟೆನ್ಸ್' ವರದಿ ಪ್ರಕಾರ 2005ರ ಮೊದಲ ಐದು ತಿಂಗಳುಗಳಲ್ಲಿ ಗುಜರಾತ್ 318 'ಇಂಡಸ್ಟ್ರಿಯಲ್ ಎಂಟರ್‌ಪ್ರಿನಿಯರ್‌ಶಿಪ್ ಮೆಮೊರಾಂಡಾ'ಗಳಿಗೆ ಸಹಿ ಬಿದ್ದಿತ್ತು. 43,054 ಕೋಟಿಗಳಷ್ಟು ಅಂದಾಜು ಬಂಡವಾಳ ಹರಿದು ಬಂದಿತ್ತು. ಇನ್ನೂ ಹೆಚ್ಚಿನ ಬಂಡವಾಳ ಬರಲಿ ಎಂಬ ದೃಷ್ಟಿಯಿಂದ ರಾಜ್ಯ ಸರಕಾರ ಹೊಸದಾಗಿ ಸ್ಥಾಪನೆಗೊಳ್ಳುವ ಕೈಗಾರಿಕಾ ಸ್ಥಾವರಗಳಿಗೆ 5 ವರ್ಷಗಳ ಪರ್ಯಂತ ವಿದ್ಯುತ್ ಮೇಲಿನ ಸುಂಕವನ್ನು ಕಡಿತಗೊಳಿಸಿತ್ತು. ಗುಜರಾತ್ ಮೂಲದ ಕಂಪನಿಗಳೆಲ್ಲ ಬೆಳವಣಿಗೆಯಲ್ಲಿ ದಾಪುಗಾಲನ್ನೇ ಹಾಕಿದ್ದವು. ಜೂನ್ 30ರ ಅಂತ್ಯದಲ್ಲಿ ಲಭ್ಯವಾದ ಕಾಲುವರ್ಷದ ಬ್ಯಾಲೆನ್ಸ್ ಶೀಟಿನಲ್ಲಿ ಗುಜರಾತು ಮೂಲದ ಕಂಪನಿಗಳು ಶೇ. 73.19ರ ವೇಗದಲ್ಲಿ ಬೆಳವಣಿಗೆ ಹೊಂದಿದ್ದವು. ದೇಶದ ಗತಿಯಿದ್ದುದ್ದು ಕೇವಲ ಪ್ರತಿಶತ 21.72. ಇತರ ಪ್ರಮುಖ ಕೈಗಾರಿಕಾ ರಾಜ್ಯಗಳಾದ ಮಹಾರಾಷ್ಟ್ರ, ಕರ್ನಾಟಕ, ಆಂಧ್ರಪ್ರದೇಶ ಮತ್ತು ತಮಿಳುನಾಡುಗಳಿಗೆ ಹೋಲಿಸಿದರೆ ಗುಜರಾತ್ ಅತಿಹೆಚ್ಚಿನ ಬೆಳವಣಿಗೆ ಸಾಧಿಸಿದೆ ಎಂದು "ಇಕಾನಮಿ ಸರ್ವೇ ರಿಪೋರ್ಟ್" ಸಾರಿ ಹೇಳಿತು.

ಇದರೊಟ್ಟಿಗೆ ಮೋದಿಯ ಗುಜರಾತ್ ಹೆಮ್ಮೆಪಡಬಹುದಾದ ಇತರ ಅಂಶಗಳೂ ಸಾಕಷ್ಟಿದ್ದವು. ಉತ್ತರದ ರಾಜ್ಯಗಳು ರಫ್ತು ಹಾಗೂ ಆಮದು ಚಟುವಟಿಕೆಗಳಿಗೆ ಪಶ್ಚಿಮದ ಸಮುದ್ರವನ್ನೇ ಹೆಚ್ಚಾಗಿ ಅವಲಂಬಿಸಿದ್ದವು. ಗುಜರಾತಿನ ಬಂದರುಗಳಿಂದ ಇತರೆಡೆಗೆ ಸಂಪರ್ಕ ವ್ಯವಸ್ಥೆ ಭಾರಿ ಬದಲಾವಣೆ ಕಂಡಿದ್ದು ಅವರೆಲ್ಲರಿಗೂ ನಿಟ್ಟುಸಿರು ಬಿಡುವಂತಾಯ್ತು. ಬಹಳ ದಿನಗಳಿಂದ ನನೆಗುದಿಗೆ ಬಿದ್ದಿದ್ದ 313 ಕಿ.ಮೀ. ಉದ್ದದ ಪಾಲನ್ಪುರ್-ಗಾಂಧೀಧಾಮ ಮಾರ್ಗ, ಗೇಜ್ ಪರಿವರ್ತನೆಗೊಳಗಾಗಿ ಸುಧಾರಣೆ ಕಂಡಿತ್ತು. ಕೃಷಿ ಉತ್ಪನ್ನಗಳು, ಪೆಟ್ರೋಲಿಯಂಗಳು ಅಗಾಧ ಪ್ರಮಾಣದಲ್ಲಿ ರಫ್ತಿಗಾಗಿ





ಗುಜರಾತ್ ಬಂದರು ಪ್ರದೇಶಕ್ಕೆ ಜಮೆಯಾಗುತ್ತಿತ್ತು. ಸಂಪರ್ಕ ಸುಧಾರಣೆ ಅದಕ್ಕೆ ಭಾರೀ ವರದಾನವಾಗಿ ಪರಿಣಮಿಸಿತು. 'ಗುಜರಾತಿನ ತೀರ ಪ್ರದೇಶದ ಕಂಟೈನರ್ ಹಡಗುಗಳು 2020ರ ವೇಳೆಗೆ 20 ಪಟ್ಟು ಹೆಚ್ಚಾಗಲಿವೆ. ಇದನ್ನು ಭರಿಸಲು ರಾಜ್ಯ ಸರಕಾರ ಇನ್ನೂ 5300 ಕೋಟಿ ಬಂಡವಾಳ ವ್ಯಯಿಸಬೇಕಾಗುತ್ತದೆ' ಅಂತ "ಇಕನಾಮಿಕ್ ಟೈಮ್ಸ್" ವರದಿ ಮಾಡಿತು. ಸಾಫ್ಟ್‌ವೇರ್ ಮತ್ತು ಸಿಸ್ಟಮ್ ಇಂಟಿಗ್ರೇಷನ್ ಟೆಕ್ನಾಲಜಿಯಲ್ಲಿ ಹೆಸರುವಾಸಿ ಕಂಪನಿಯಾದ ಎಂಫೆಸಿಸ್ ಕಂಪನಿ ಗುಜರಾತಿಗೆ ಕಾಲಿಡುತ್ತಿದೆ ಎಂಬುದು ತುಂಬ ದೊಡ್ಡ ಸುದ್ದಿಯಾಯಿತು. ಅಹಮದಾಬಾದಿನಲ್ಲಿ 100ಕ್ಕೂ ಮಿಕ್ಕಿ ಕಾಲ್‌ಸೆಂಟರ್‌ಗಳನ್ನು ತೆರೆಯಲು ಅದು ಸನ್ನದ್ಧವಾಗಿದೆ ಎಂಬ ಬಗ್ಗೆ ಮಾಧ್ಯಮದಲ್ಲಿ ವರದಿಗಳಾದವು.

ಆದಾಗಿ ಬಂದಿದ್ದೇ ನವರಾತ್ರಿ.

ನರೇಂದ್ರ ಮೋದಿ ಬರುವುದಕ್ಕೂ ಮೊದಲು ನವರಾತ್ರಿ ಎಲ್ಲಾ ಹಬ್ಬಗಳಂತೇ ಒಂದಾಗಿತ್ತು. ಆದರೆ ಮೋದಿ ಅದನ್ನೊಂದು ಸರಕಾರಿ ಪ್ರಾಯೋಜಿತ ವೈಭವಯುತವಾದ ಹಬ್ಬವನ್ನಾಗಿ ಮಾಡಿದರು. ಅದನ್ನು ಹೂಡಿಕೆದಾರರ ಹಬ್ಬವನ್ನಾಗಿಸಿದರು. ಈ ಬಾರಿಯೂ ಹಬ್ಬದ ನೆಪದಲ್ಲಿ ಪ್ರವಾಸೋದ್ಯಮವನ್ನು ಅಭಿವೃದ್ಧಿಪಡಿಸಲು ಸರಕಾರ 3 ಕೋಟಿ ರೂಪಾಯಿಗಳನ್ನು ವ್ಯಯಿಸಿತ್ತು. ರಾಜ್ಯಪಾಲರ ಉಪಸ್ಥಿತಿಯಿದ್ದ ಕಾರ್ಯಕ್ರಮ ಹಾಡು, ನೃತ್ಯಗಳಿಂದ ಕಳೆಕಟ್ಟಿತ್ತು. ನೇಪಾಳ, ಭೂತಾನ್, ಶ್ರೀಲಂಕಾ, ಪೋರ್ಟರಿಕೋಗಳಿಂದ ಬಂದ ಕಲಾವಿದರುಗಳು ಕಾರ್ಯಕ್ರಮ ನೀಡಿದರು. ರಾಜ್ಯವನ್ನು ಸಾಹಸ ಹಾಗೂ ಅಧ್ಯಾತ್ಮಿಕ ಪ್ರವಾಸೋದ್ಯಮ ತಾಣವನ್ನಾಗಿ ಬೆಳೆಸುವಲ್ಲಿ ಪ್ರಯತ್ನ ಕೇಂದ್ರೀಕರಿಸಲಾಗಿತ್ತು. ಹಿಂದೂ ಯಾತ್ರಾರ್ಥಿಗಳನ್ನು ಆಕರ್ಷಿಸಲು "ಕೃಷ್ಣಾ ಸರ್ಕ್ಯೂಟ್", ಗಾಂಧಿ ಅಭಿಮಾನಿಗಳ ಆಕರ್ಷಣೆಗೆ "ಗಾಂಧೀ ಸರ್ಕ್ಯೂಟ್" ಹೀಗೆ ಥರಾವರಿ ಕಾರ್ಯಕ್ರಮಗಳು ರೂಪುಗೊಂಡಿದ್ದವು. ಇದರ ಜತೆ ವೈದ್ಯಕೀಯ ಪ್ರವಾಸೋದ್ಯಮವನ್ನೂ ಅಭಿವೃದ್ಧಿಪಡಿಸುವ ಉಮೇದಿದೆ ಎಂದು ಮಾಧ್ಯಮದವರ ಮುಂದೆ ಹೇಳಿಕೊಂಡರು ಮೋದಿ. ರಾಜ್ಯದ ಅಭಿವೃದ್ಧಿ ಹಾಗೂ ಜನತೆಯ ಖುಷಿಯೇ ಮೋದಿಯ ಮೂಲಮಂತ್ರಗಳಾಗಿದ್ದವು. ಅವರ ಪ್ರಯತ್ನಗಳು ಫಲಕೊಟ್ಟವು. ಎಡಿಷಿ ಸಂಸ್ಥೆ ವರದಿ ಮಾಡಿದ ಪ್ರಕಾರ 2002-2004ರಲ್ಲಿ 27% ಜಿಡಿಪಿ ದಾಖಲಿಸಿತ್ತು ಗುಜರಾತ್!!

ನರೇಂದ್ರ ಮೋದಿಯವರನ್ನು ತಡೆಯುವ ಮಾರ್ಗಗಳೇ ಮುಚ್ಚಿಹೋಗಿದ್ದವು.

ಹಾಗೆಂದು ಸಾರಿತು ಅಹಮದಾಬಾದಿನ ಸಿಟಿ ಮುನ್ಸಿಪಲ್ ಎಲೆಕ್ಷನ್. ಅಕ್ಟೋಬರ್ ಮಧ್ಯದಲ್ಲಿ ಫಲಿತಾಂಶ ಹೊರಬಿದ್ದಾಗ 129 ಸೀಟುಗಳಲ್ಲಿ ಬಿಜೆಪಿಗೆ 96 ಸೀಟುಗಳು

ಒಲಿದಿದ್ದವು. ಕಾಂಗ್ರೆಸ್‌ಗೆ ದಕ್ಕಿದ್ದು ಕೇವಲ 32 ಸೀಟುಗಳು. ಉಳಿದಿದ್ದೆಲ್ಲ ಸ್ವತಂತ್ರ ಅಭ್ಯರ್ಥಿಗಳ ಪಾಲಾಗಿತ್ತು. ಮೋದಿಯ ಬಲುದೊಡ್ಡ ಟೀಕಾಕಾರನಾಗಿದ್ದ 'ಟೈಮ್ಸ್ ಆಫ್ ಇಂಡಿಯಾ' ಬರೆಯಿತು–'ಮುಂಚೂಣಿಯಲ್ಲಿ ನಿಂತು ಹೋರಾಡಿದ ನಾಯಕ ಮೋದಿ. ಮೋದಿ ಮೋಡಿ ಕಳೆಗುಂದುತ್ತಿದೆ, ಸುಶಿಕ್ಷಿತರು ಮೋದಿಯನ್ನು ಒಪ್ಪುತ್ತಿಲ್ಲ ಎಂಬ ವಾದಗಳನ್ನೆಲ್ಲ ಅತಿದೊಡ್ಡ ನಗರವಾದ ಅಹಮದಾಬಾದಿನ ಈ ಫಲಿತಾಂಶ ಹೊಡೆದುರುಳಿಸಿದೆ. ಬಂಡಾಯದ ವಿರುದ್ಧ ಸೆಣಸುತ್ತಿದ್ದ ಮೋದಿಗೆ ಒಲಿದ ಸ್ವಚ್ಛ ಜಯವಿದು. ಕಾಂಗ್ರೆಸ್ಸಿನ ಕೆಟ್ಟ ಆಡಳಿತದಿಂದ ಬೇಸತ್ತಿದ್ದ ಮತದಾರರು ಮೋದಿಯನ್ನಾಯ್ದುಕೊಂಡರು'. 'ಬಿಜೆಪಿಯೊಳಗೇ ಇದ್ದ ಅತಿ ಆಶಾವಾದಿಗಳೂ ಕೂಡ ನಿರೀಕ್ಷೆ ಮಾಡಿರದಿದ್ದ ಜಯವಿದು' ಎಂದು ಬರೆಯಿತು 'ಇಂಡಿಯನ್ ಎಕ್ಸ್‌ಪ್ರೆಸ್'. ಜಯದಿಂದ ಉಲ್ಲಸಿತರಾದ ಮೋದಿ ಹೇಳಿದರು, "ಇತಿಹಾಸ ಮರುಕಳಿಸಿದೆ. ವಿರೋಧಿಗಳು ನಮ್ಮತ್ತ ನಿರಂತರ ಕೆಸರೆರಚಿದರು. ಅದರಲ್ಲೇ ನಮ್ಮ ಕಮಲವು ಅರಳಿ ನಿಂತಿತು!"

"ದೇಖೋ ದೇಖೋ ಕೌನ್ ಆಯಾ, ಗುಜರಾತ್ ಕೀ ಶೇರ್ ಆಯಾ"!

ಅಂತ ಬಿಜೆಪಿ ಕಾರ್ಪೊರೇಟರ್‌ಗಳು ಮೋದಿ ಸನ್ಮಾನ ಸಮಾರಂಭದಲ್ಲಿ ವಿಜಯೋನ್ಮಾದದಿಂದ ಕೇಕೆ ಹಾಕಿದರು. ಅಕ್ಟೋಬರ್ 25ಕ್ಕೆಲ್ಲ ಪಂಚಾಯತ್ ಚುನಾವಣೆ ಬಂದು ನಿಂತಿತ್ತು. 23 ಜಿಲ್ಲಾ ಪಂಚಾಯತ್‌ಗಳಲ್ಲಿ 16 ಬಿಜೆಪಿ ತೆಕ್ಕೆಗೆ ಬಂದಿತ್ತು. 209 ತಾಲೂಕು ಪಂಚಾಯತ್‌ಗಳಲ್ಲಿ 134 ಹಾಗೂ 49 ಮುನ್ಸಿಪಾಲ್ಟಿಗಳಲ್ಲಿ 38 ಬಿಜೆಪಿ ಪರವಾಗಿದ್ದವು. ನಗರ, ಹಳ್ಳಿಗಳ ಬೇಧವಿಲ್ಲದೇ ಎಲ್ಲಾ ಮತದಾರರೂ ಕೇಸರಿ ಪರವಾಗಿದ್ದರು. ಹೊಗಳಿಕೆಯನ್ನು ಹಿಡಿದಿಟ್ಟುಕೊಳ್ಳಲಾರದ 'ಇಂಡಿಯನ್ ಎಕ್ಸ್‌ಪ್ರೆಸ್' ಬರೆಯಿತು 'ಸ್ಥಳೀಯ ಸಂಸ್ಥೆ ಚುನಾವಣೆಗಳನ್ನು ಸಹ ವೈಯಕ್ತಿಕ ವಿದರಿನಿಂದಲೇ ಎದುರಿಸಿದ ಮುಖ್ಯಮಂತ್ರಿ ಮೋದಿ ಹೊರತುಪಡಿಸಿ ಇನ್ನೊಬ್ಬನಿಲ್ಲ' ಅಂತ. ಇತ್ತ ಸೆಕ್ಯುಲರಿಸ್ಟ್‌ಗಳು ಮೂಕರಾಗಿದ್ದರು. 'ಬಿಜೆಪಿ ಸ್ವೀಪ್ಸ್, ಕಾಂಗ್ರೆಸ್ ವೀಪ್ಸ್' ಅಂತ ಹೆಡ್ಡಿಂಗ್ ಕೊಟ್ಟಿತು 'ಏಷಿಯನ್ ಏಜ್'! ಮೋದಿ ಸಹ ಈ ವಿಜಯ ಕೇಂದ್ರದ ಯುಪಿಎ ಸರಕಾರದ ವಿರುದ್ಧ ಜನ ತಾಳಿರುವ ಅಸಮಾಧಾನ ಎಂದೇ ಬಣ್ಣಿಸತೊಡಗಿದರು. ಮುಖ್ಯವಾಗಿ, ಇದು ಬರೀ ಕಾಂಗ್ರೆಸ್ ವಿರುದ್ಧದ ಗೆಲುವಾಗಿರಲಿಲ್ಲ, ಬಂಡಾಯದ ಬಾವುಟ ಹಾರಿಸುತ್ತಿದ್ದವರ ಬಾಯಿಗೆ ಬೀಗ ಹಾಕಿಸಿತು ಈ ಗೆಲುವು. ಇವೆಲ್ಲದರ ನಡುವೆ ಬಹಳ ಮುಖ್ಯವಾಗಿ ಗಮನಿಸಬೇಕಾದ ಸಂಗತಿಯೆಂದರೆ ಬಿಜೆಪಿಯ ಪ್ರೇಮ್‌ಲತಾಬೆಹನ್ ಗಾಂಧಿ, ಗೋಧ್ರಾ ಮುನ್ಸಿಪಾಲ್ಟಿಯ ಅಧ್ಯಕ್ಷರಾಗಿ ಆಯ್ಕೆಯಾಗಿದ್ದು. ಅವರು 42 ಕೌನ್ಸಿಲರ್‌ಗಳಿಂದ ಅವಿರೋಧವಾಗಿ ಆಯ್ಕೆಯಾದರು. ಅವರಲ್ಲಿ 18 ಜನ ಸ್ವತಂತ್ರ ಮುಸ್ಲಿಂ





ಕೌನ್ಸಿಲರ್‌ಗಳಿದ್ದರು. ಹಾಗೆ ಸಪೋರ್ಟ್ ಮಾಡಿದ್ದ ಮುಸ್ಲಿಮರು ಲತಾಬೆಹನ್‌ರನ್ನು 'ಕೋಮು ಐಕ್ಯತೆಯ ಆದರ್ಶ' ಅಂತ ಕರೆದಿದ್ದರು. ಗೋಧ್ರಾದ ಇಮೇಜನ್ನೇ ಬದಲಿಸುವ ಘಟನೆ ಇದಾಗಿತ್ತು. ಮೋದಿ ಜೀವನದ ತುಂಬ ಖುಷಿಯ ಘಟ್ಟವಾಗಿತ್ತದು. ಜನರು ಮೋದಿ ಕೈಯನ್ನು ಭದ್ರವಾಗಿ ಹಿಡಿದಿದ್ದರು. ಇದಕ್ಕೂ ಹೆಚ್ಚಿನ ರೋಚಕತೆಯಿಂದ ಕೂಡಿದ್ದಿದ್ದು ಡಿಸೆಂಬರ್ 11ರಂದು ಸೂರತ್, ವಡೋದರಾ, ರಾಜ್‌ಕೋಟ್, ಭಾವ್‌ನಗರ್ ಮತ್ತು ಜಾಮ್‌ನಗರಗಳಿಗೆ ಆದ ಮುನ್ಸಿಪಲ್ ಕಾರ್ಪೊರೇಷನ್ ಚುನಾವಣೆ. ಐದೂ ಸ್ಥಳಗಳಲ್ಲೂ ಕಾಂಗ್ರೆಸ್ ಹೇಳಹೆಸರಿಲ್ಲದಂತಾಗಿತ್ತು. ವಡೋದರಾದಲ್ಲಿ ಬಿಜೆಪಿ ಸತತ ಮೂರನೇ ಬಾರಿಗೆ ಅಧಿಕಾರಕ್ಕೆ ಬಂದಿತ್ತು. ಒಟ್ಟು 84 ಸೀಟುಗಳಲ್ಲಿ ಬಿಜೆಪಿ 74 ಸೀಟುಗಳನ್ನು ಪಡೆದರೆ ಕಾಂಗ್ರೆಸ್ ಸ್ಕೋರು ಕೇವಲ ಆರು. ರಾಜ್‌ಕೋಟ್‌ನ 69 ಸೀಟುಗಳಲ್ಲಿ 59 ಬಿಜೆಪಿಗೊಲಿಯಿತು. ಜಾಮ್‌ನಗರದ ಒಟ್ಟು 51 ಸೀಟುಗಳಲ್ಲಿ ಬಿಜೆಪಿಗೆ 37 ಸೀಟು. ಅಲ್ಲೂ ಕಾಂಗ್ರೆಸ್ ಪಾಲಿಗೆ ಬರೀ 9 ಸೀಟುಗಳು. ಭಾವ್‌ನಗರದಲ್ಲಿ 51ರಲ್ಲಿ ಬಿಜೆಪಿಯದು 39, ಕಾಂಗ್ರೆಸ್‌ನದು 12. ಸೂರತ್‌ನ 102 ಸೀಟುಗಳಲ್ಲಿ ಬಿಜೆಪಿ 90ನ್ನು ತನ್ನದಾಗಿಸಿಕೊಂಡರೆ ಎದುರಾಳಿ ಕಾಂಗ್ರೆಸ್‌ನದು ಅಲ್ಲಿ ಹನ್ನೊಂದೇ ಸೀಟು! ವಿಜಯದ ಪಾಳಯವನ್ನು ಉದ್ದೇಶಿಸುತ್ತಾ ಮಾತನಾಡಿದ ಮೋದಿ "ಈ ವಿಜಯಕ್ಕೆ ಒಬ್ಬ ವ್ಯಕ್ತಿ ಕಾರಣನಲ್ಲ, ಪಕ್ಷದ ಗೆಲುವಿಗಾಗಿ ಹಗಲಿರುಳು ದುಡಿದ ಕಾರ್ಯಕರ್ತರ ಗೆಲುವಿದು" ಎನ್ನುವ ಮೂಲಕ ಗೆಲುವಿನ ಶ್ರೇಯಸ್ಸನ್ನು ಕಾರ್ಯಕರ್ತರಿಗೇ ಕೊಡಮಾಡಿದರು ಮೋದಿ. "ನಮ್ಮ ಪಕ್ಷದೊಳಗೆ ಕೆಲ ಸಮಸ್ಯೆಗಳು ತಲೆದೋರಿದಾಗ ಹಲವರು ಪಕ್ಷ ಹತ್ತು ಹೋಳಾಗಿ ಒಡೆದು ಹೋಗಲಿದೆ ಅಂತ ಪ್ರಚಾರಕ್ಕಿಳಿದಿದ್ದರು. ಈ ಚುನಾವಣಾ ಫಲಿತಾಂಶ ಅವರೆಲ್ಲರ ಕೆನ್ನೆಗೆ ಬಾರಿಸಿದಂತಿದೆ" ಎಂದ ಮೋದಿ ಮಾತು ಮಾಧ್ಯಮಗಳಿಗೂ ಚಾಟಿ ಬೀಸಿದಂತಿತ್ತು.

ಮೂರು ವರ್ಷಗಳ ಕಾಲ ಮಾಧ್ಯಮಗಳೆಲ್ಲಾ ಮೋದಿ ಕುರಿತಾಗಿ ಅಪಪ್ರಚಾರದಲ್ಲೇ ತೊಡಗಿದ್ದವು. 2005 ಮುಗಿಯುವ ವೇಳೆಗೆಲ್ಲ ಅವೆಲ್ಲವಕ್ಕೂ ಜನತೆಯೇ ಸರಿಯಾದ ಉತ್ತರ ನೀಡಿ ಬಿಟ್ಟಿದ್ದರು. ಗುಜರಾತ್ ರಾಜಕೀಯದಲ್ಲಿ ಮೋದಿ ಸ್ಥಾನ ಎಂಥದ್ದೆಂದು ನಿರ್ಧಾರವಾಗಿ ಹೋಗಿತ್ತು. ಪಂಚಾಯತ್‌ನಿಂದ ಮುನ್ಸಿಪಾಲಿಟಿವರೆಗೆ ನಡೆದ ಚುನಾವಣೆಗಳು ಮೋದಿ ಜನರ 'ಹೃದಯ ಸಾಮ್ರಾಟ' ಅನ್ನುವುದನ್ನು ಸಾಬೀತು ಮಾಡಿದ್ದವು.





# 40
## ಗಡಸು ನಾಯಕನದ್ದು ಅಪ್ಪಟ ಮಗು ಹೃದಯ!

ರಮಣ್‌ಭಾಯ್ ಶಾ ಒಬ್ಬ ಹಿರಿಯ ಆರೆಸ್ಸೆಸ್ಸಿಗ. 1942-43ರಲ್ಲಿ ಸ್ವಯಂಸೇವಕರಾಗಿದ್ದವರು. ಇವರಿಗೆ ಆರು ದಶಕಗಳಿಂದ ಮೋದಿ ಪರಿಚಿತರು. ರಮಣ್‌ಭಾಯ್ ಕುಟುಂಬದೊಂದಿಗೂ ಮೋದಿಯದು ಆತ್ಮೀಯ ಬಾಂಧವ. ಮೋದಿಯವರನ್ನು ನೆನಪಿಸಿಕೊಳ್ಳುತ್ತಾ ರಮಣ್‌ಭಾಯ್ ಅಚ್ಚರಿಪಡುವುದು, 'ಅವರ ನೆನಪಿನ ಶಕ್ತಿ ಇದೆಯಲ್ಲ, ಅದಕ್ಕೆ ಸಾಟಿಯಿಲ್ಲ' ಅಂತ. ರಮಣ್‌ಭಾಯ್‌ಗೊಬ್ಬ ಮೊಮ್ಮಗನಿದ್ದಾನೆ. ಹೆಸರು ಚಿಂತನ್. ರಮಣ್ ಕುಟುಂಬಕ್ಕೆ ಮೋದಿ ಭೇಟಿಯಿತ್ತ ಸಂದರ್ಭದಲ್ಲೆಲ್ಲೋ ಆಗಿನ್ನೂ ತುಂಬ ಚಿಕ್ಕವನಾಗಿದ್ದ ಚಿಂತನ್‌ನನ್ನು ಮಾತಾಡಿಸಿದ್ದರು ಮೋದಿ. ಅದಾಗಿ ವರ್ಷಗಳೇ ಉರುಳಿಬಿಟ್ಟಿದ್ದವು. ಚಿಂತನ್ ಕನ್‌ಸ್ಟ್ರಕ್ಷನ್ ಕಂಪನಿಯೊಂದರಲ್ಲಿ ಕೆಲಸ ಹಿಡಿದಿದ್ದ. ಇತ್ತ ರಾಜಕೀಯ ಅಜ್ಞಾತವಾಸದಲ್ಲಿದ್ದಾಗ ಮೋದಿಯವರು ಪ್ರಾರಂಭಿಸಿದ್ದ 'ಸಂಸ್ಕಾರಧಾಮ' ಶಾಲೆಯ ಸಣ್ಣ ಕಾಮಗಾರಿಯೊಂದರ ಗುತ್ತಿಗೆ ಕಾಕತಾಳೀಯವಾಗಿ ಚಿಂತನ್ ಕೆಲಸ ಮಾಡುತ್ತಿದ್ದ ಕಂಪನಿಗೇ ಸಿಕ್ಕಿತು. ಶಾಲೆಯ ಸಣ್ಣಪುಟ್ಟ ಕಾರ್ಯಗಳಲ್ಲೂ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದ ಮೋದಿ, ಮುಖ್ಯಮಂತ್ರಿಯಾದರೂ ಕರ್ತವ್ಯವನ್ನು ಮರೆತಿರಲಿಲ್ಲ. ಅವರು ಕಾಮಗಾರಿಯ ಕುರಿತು ಅಧಿಕಾರಿಗಳೊಂದಿಗೆ ಚರ್ಚಿಸುತ್ತಿದ್ದಾಗ ಚಿಂತನ್ ಅಲ್ಲಿಗೆ ಹೋಗಬೇಕಾಗಿ ಬಂತು. ಆತನನ್ನು ನೋಡಿದ್ದೇ ತಡ, 'ಚಿಂತನ್ ಬೇಟಾ, ನೀನಿಲ್ಲಿ...?' ಹೆಸರು ಹಿಡಿದು ಮಾತನಾಡಿಸಿದ ಮೋದಿ ಧ್ವನಿಯಲ್ಲಿ ಎಂಥದ್ದೋ ಕಕ್ಕುಲಾತಿಯಿತ್ತು! ಚಿಂತನ್‌ಗೆ ಅದನ್ನು ನಂಬುವುದೇ ಕಷ್ಟವಾಗಿ ಹೋಯಿತು. ಒಬ್ಬ ಮುಖ್ಯಮಂತ್ರಿ ಒಬ್ಬ ತರುಣನನ್ನು ಹಾಗೊಂದು ಪ್ರೀತಿ ತುಳುಕುವ ಧ್ವನಿಯಲ್ಲಿ ತನ್ನದೇ ಕುಟುಂಬದ ಹುಡುಗನೇನೊ ಅನ್ನುವ ಹಾಗೆ ಹೆಸರು ಹಿಡಿದು ಕರೆಯುವುದು ಅಂತಂದ್ರೆ ಏನು? ಚಿಂತನ್‌ನ ಬಾಸ್ ಹಾಗೂ ಸಹೋದ್ಯೋಗಿಗಳು ಸಹ

ಅಚ್ಚರಿಯಲ್ಲಿ ಮುಳುಗಿಬಿಟ್ಟರು.

ರಮಣ್‌ಭಾಯ್ ಪ್ರಕಾರ ಸಂಬಂಧಗಳ ವಿಷಯದಲ್ಲಿ ಮೋದಿ ತುಂಬ ಭಾವುಕ ಹಾಗೂ ಮಮತೆಯ ಮನುಷ್ಯ. ನನಗೆ ಗೊತ್ತಿರುವ ಹಾಗೆ ಬಹಳಷ್ಟು ಕುಟುಂಬಗಳೊಂದಿಗೆ ಮೋದಿ ಹಾಗೊಂದು ಆರ್ದ್ರ ಸಂಬಂಧ ಹೊಂದಿದ್ದಾರೆ. ರಮಣ್‌ಭಾಯ್‌ರ 75ನೇ ಹುಟ್ಟುಹಬ್ಬ ನರೇಂದ್ರ ಮೋದಿಯವರಿಗೊಂದು ಆಹ್ವಾನ ನೀಡೋಣ ಎಂಬ ಮನಸ್ಸಾಯಿತು. ಸರಿ, ಫೋನ್ ಮೂಲಕ ಆಹ್ವಾನ ನೀಡಿದಾಗ ಮೋದಿ ದಿಲ್ಲಿಯಲ್ಲಿದ್ದರು. ಆದರೂ ಧಾವಿಸಿ ಬಂದು ಆ ದಿನ ಬೆಳಗ್ಗೆ 8ರಿಂದ ಸಂಜೆ 4ರವರೆಗೆ ರಮಣ್‌ಭಾಯ್ ಸಡಗರದಲ್ಲಿ ಪಾಲ್ಗೊಂಡು ಹೋದರು ಮೋದಿ. ಕುಟುಂಬದ ಮಧ್ಯ ಇದ್ದಾಗ ಮೋದಿ ಒಬ್ಬ ಸಾಮಾನ್ಯ ಮನುಷ್ಯ. ಯಾವ ಗತ್ತು ಗೈರತ್ತುಗಳೂ ಇಲ್ಲದೇ ಎಲ್ಲರೊಂದಿಗೆ ಬೆರೆತು ಮಾತಾಡುವ ನಿಷ್ಕಲ್ಮಶ ವ್ಯಕ್ತಿತ್ವ ಅವರದು. ಹಾಗಂತ ತಮ್ಮ ಅನುಭವ ಬಿಚ್ಚಿಡುತ್ತಾರೆ ರಮಣ್‌ಭಾಯ್.

ಕವಿ ಸುರೇಶ್ ದಲಾಲ್ ಸಹ ಮೋದಿ ವ್ಯಕ್ತಿತ್ವವನ್ನು ಕೊಂಡಾಡುತ್ತಾರೆ. 'ಮೋದಿ ನಿಮ್ಮೊಂದಿಗೆ ಇರುವಾಗ ಅವರು ನಿಮ್ಮವರೇ ಆಗಿರುತ್ತಾರೆ. ಮಾತನ್ನು ಕೃತಿಯಾಗಿಸುವ ಸಾಮರ್ಥ್ಯದಲ್ಲೇ ಅವರ ಅಸ್ತಿತ್ವ ಅಡಗಿದೆ. ತುಂಬ ನಿರಾಳ ವ್ಯಕ್ತಿತ್ವ ಅವರದು'. ಒಮ್ಮೆ ದಲಾಲ್, ಇಮೇಜ್ ಪಬ್ಲಿಕೇಷನ್‌ನ ಗೋಪಾಲ್ ದೇವ್ ಜತೆ ಆಗಿನ ಮುಖ್ಯಮಂತ್ರಿ ಕೇಶುಭಾಯ್ ಪಟೇಲರ ಭೇಟಿಗಾಗಿ ಕಚೇರಿಯ ಹೊರಗಡೆ ಕಾಯುತ್ತಿದ್ದರು. ಆಗ ಅಲ್ಲಿಗೆ ಬಂದ ಮೋದಿ ದಲಾಲ್‌ರನ್ನು ಗುರುತಿಸಿದರು. ಮುಖ್ಯಮಂತ್ರಿ ಭೇಟಿಗಾಗಿ ಕಾದಿರುವವರೆಂದು ತಿಳಿದ ಕೂಡಲೇ 'ಕವಿಗಳೆಲ್ಲ ಹೀಗೆ ಹೊರಗೆ ಕಾಯುತ್ತಾ ಕುಳಿತುಕೊಳ್ಳುವುದು ತರವಲ್ಲ' ಎಂದು ಆ ಕೂಡಲೇ ಭೇಟಿಗೆ ವ್ಯವಸ್ಥೆ ಮಾಡಿಸಿದರು. ಮೋದಿ ಸಂಪುಟದಲ್ಲಿ ಕಾನೂನು ಹಾಗೂ ಸಂಸದೀಯ ವ್ಯವಹಾರಗಳ ಮಂತ್ರಿಯಾಗಿದ್ದ ಅಶೋಕ್ ಭಟ್ ಅಪ್ತವಲಯಕ್ಕೆ ಸೇರಿದವರು. ಮುಖ್ಯವಾಹಿನಿಯ ಬಹುತೇಕ ಮಾಧ್ಯಮಗಳೆಲ್ಲ ಮೋದಿಯ ವಿರುದ್ಧ ನಿಂತು ದಿನಂಪ್ರತಿ ಆರೋಪಗಳ ಸುರಿಮಳೆಗೈಯ್ಯುತ್ತಿದ್ದ ಸಂದರ್ಭದಲ್ಲೂ ಸಹ ಮೋದಿ ಅಚಲರಾಗಿಯೇ ಇದ್ದರು. 'ಗೋಧ್ರಾ ಘಟಿಸುತ್ತಿದ್ದಂತೆ ಸರ್ವಪಕ್ಷಗಳ ಸಮಿತಿಯೊಂದನ್ನು ರಚಿಸಿದರು ಮೋದಿ. ಹೀಗೊಂದು ಕಮಿಟಿಯನ್ನು ಹಿಂದಿನ ಯಾವ ಸರಕಾರಗಳೂ ಅಷ್ಟು ತುರ್ತಾಗಿ ರಚಿಸಿದ ಉದಾಹರಣೆ ಇರಲಿಲ್ಲ, ಆ ಸಮಿತಿಗೆ ರಾಜ್ಯಪಾಲರೇ ಅಧ್ಯಕ್ಷರಾಗಿದ್ದರು. ಅಲ್ಲದೆ ಮೋದಿ ಮುಸ್ಲಿಂ ನಾಯಕರುಗಳ ಜತೆಯೂ ನಿರಂತರ ಸಂಪರ್ಕ ಇರಿಸಿಕೊಂಡಿದ್ದರು. ಕಾಂಗ್ರೆಸ್ಸಿಗರನ್ನೂ ಒಳಗೊಂಡಿದ್ದ ಸಮಿತಿ ತುರ್ತಾಗಿ ಪುನರ್ವಸತಿ ಕಾರ್ಯಕ್ರಮಗಳು ಆಗುವಂತೆ ನೋಡಿಕೊಂಡಿತು' - ಹೀಗೆ ವಿವರಗಳನ್ನು ಬಿಚ್ಚಿಡುತ್ತಾ ಹೋಗುತ್ತಾರೆ ಅಶೋಕ್ ಭಟ್.





ಗುಜರಾತಿ ಪತ್ರಿಕೆ 'ಅಭಿಯಾನ್'ದಲ್ಲಿ ಗುಣವಂತ್‌ಭಾಯ್ ಶಾ ಅವರು ಬರೆದ ಲೇಖನ ಮೋದಿಯವರ ವ್ಯಕ್ತಿತ್ವವನ್ನು ಕಟ್ಟಿಕೊಡುತ್ತಿತ್ತು. ಗೋಧ್ರಾದ ಮೊದಲನೇ ವಾರ್ಷಿಕೋತ್ಸವ ನೆನಪಿಸಿಕೊಂಡರೆ ಎದೆ ಜೋರಾಗಿಯೇ ಬಡಿದುಕೊಳ್ಳುತ್ತದೆ. ಗೋಧ್ರಾದಲ್ಲಿ ನಡೆದಿದ್ದು ಆ ಸ್ಥಳವನ್ನು ಒಂದು ವಿಚಾರವನ್ನಾಗಿಸಿತು. ಅದರ ತಿರುಳು ಹಿಂದುತ್ವವೂ ಆಗಿರಲಿಲ್ಲ, ಅಥವಾ ಮುಸ್ಲಿಂ ದ್ವೇಷವೂ ಆಗಿರಲಿಲ್ಲ. ಅದನ್ನು ಒಂದು ವಾಕ್ಯದಲ್ಲಿ ಹೀಗೆ ಹೇಳಬಹುದು. 'ಇನ್ನು ಮುಂದೆ ಈ ದೇಶದಲ್ಲಿ ಅವಾಸ್ತವಿಕ ಸೆಕ್ಯುಲರಿಸಂ ಕೆಲಸಕ್ಕೆ ಬರುವುದಿಲ್ಲ'. ಅವರೊಂದಿಗೆ ನನ್ನ ವೈಯಕ್ತಿಕ ಭೇಟಿಗಳಾಗಿಲ್ಲ, ಆದರೂ ನಿಸ್ಸಂಶಯವಾಗಿ ಹೇಳಬಲ್ಲೆ, ಆತ ಒಬ್ಬ ಲೋಹದ ಮನುಷ್ಯ. ಏಕೆಂದರೆ ಅದೆಷ್ಟೋ ಅಗ್ನಿಪರೀಕ್ಷೆಗಳನ್ನು ಹಾಯ್ದುಹೋದವರು ಮೋದಿ. ಮೋದಿ ಚುನಾವಣೆಗಳನ್ನು ಗೆಲ್ಲುತ್ತ ಹೀರೊ ಆದರು ಎನ್ನುವುದಕ್ಕಿಂತ, ನಿರಂತರವಾಗಿ ಅವರತ್ತ ಅಪ್ಪಳಿಸಿದ ದ್ವೇಷದ ಅಲೆಗೆದುರಾಗಿ ಗಟ್ಟಿಯಾಗಿ ನಿಂತರಲ್ಲ, ಅದು ತುಂಬ ಮುಖ್ಯವಾಗುತ್ತದೆ. ಅವರ ಜಾಗದಲ್ಲಿ ಇನ್ಯಾರಾದರೂ ಸಾಮಾನ್ಯ ಮನುಷ್ಯರಿದ್ದರೆ ಕುಸಿದು ಹೋಗುತ್ತಿದ್ದರು. ಮಾಧ್ಯಮಗಳಂತೂ ಗುಜರಾತನ್ನು ಜಗತ್ತಿನೆದುರು ಅಗೌರವಗೊಳಿಸಿದ್ದವು. "ಈವಿಲ್, ವಿಕೆಡ್, ಸಿನ್‌ಫುಲ್, ಲೊ, ಮೀನ್, ಫಾಲ್ಟಿ" ಅಂತೆಲ್ಲ ಪದಪುಂಜಗಳನ್ನು ಬಳಸಿ ಇಂಗ್ಲಿಷ್ ಪತ್ರಿಕೆಗಳು ಹಾಗೂ ವಿದ್ಯುನ್ಮಾನ ಮಾಧ್ಯಮದೊಂದಿಗೆ ಸಖ್ಯ ಹೊಂದಿದವರೆಲ್ಲ ರಾಗ ಹಾಡತೊಡಗಿದರು. ಒಟ್ಟಾರೆಯಾಗಿ ಈ ದುಷ್ಟಕೂಟ ಅದೆಂಥ ಪ್ರಮಾದ ಸೃಷ್ಟಿಸಿಬಿಟ್ಟಿತೆಂದರೆ, ಶಾಂತಿ, ಅಹಿಂಸೆಗಳಲ್ಲಿ ನಂಬಿಕೆ ಇಟ್ಟಿರುವ ಉದಾರ ಮನಸ್ಸಿನ ಸಜ್ಜನ ಮುಸ್ಲಿಮರ ಮೇಲೆ ಕ್ರೂರ ಹಿಂದೂಗಳು ವಿಧ್ವಗಳೊಂದಿಗೆ ಹಲ್ಲೆ ನಡೆಸುತ್ತಿದ್ದಾರೆ ಎಂಬ ಭಾವನೆಯನ್ನು ಜಗತ್ತಿನಲ್ಲಿ ಬಿತ್ತಿಬಿಟ್ಟರು. "ಜನಾಂಗೀಯ ಮೂಲೋತ್ಪಾಟನೆ, ಹತ್ಯಾಕಾಂಡ, ಪ್ರಾಯೋಜಿತ ನರಮೇಧ" ಎನ್ನುವ ಮೂರು ಶಬ್ದಗಳಂತೂ ಪದೇ ಪದೆ ಬಳಕೆಯಾದವು. ಇಂಗ್ಲಿಷ್ ಮಾಧ್ಯಮಗಳ ಪಾಲಿಗೆ ನರೋಡಾದಲ್ಲಿ ಘಟಿಸಿದ್ದು ಹತ್ಯಾಕಾಂಡವಾಗಿತ್ತು, ಆದರೆ ಗೋಧ್ರಾದಲ್ಲಾಗಿದ್ದರ ಬಗ್ಗೆ ಏನೂ ಅನ್ನಿಸುತ್ತಿರಲಿಲ್ಲ. ನರೇಂದ್ರ ಮೋದಿ ಪಾಲಿಗಂತೂ ಇಂಗ್ಲಿಷ್‌ನಲ್ಲಿ ಯಾವ್ಯಾವ ಕೆಟ್ಟ ವಿಶೇಷಣಗಳಿವೆಯೋ ಅವನ್ನೆಲ್ಲ ತಗುಲಿಸಿಯಾಗಿತ್ತು. "ಕಟುಕ, ಕೊಲೆಪಾತಕಿ, ಹಿಟ್ಲರ್..." ಹೀಗೆಲ್ಲ ಮಾತನಾಡುವುದೇ ಒಂದು ಫ್ಯಾಷನ್ ಎಂಬಂತಾಗಿ ಹೋಗಿತ್ತು. ಹಿಂದೂಗಳಿಗೆ ಅವರದೇ ದೇಶದಲ್ಲಿ ಪರಕೀಯರಾಗುತ್ತಿದ್ದೇವೆ ಎಂಬ ಭಾವನೆ ಬಂತು. ಇದೇ ಭಾವನೆಯೇ ನರೇಂದ್ರ ಮೋದಿಯವರನ್ನು 'ಹಿಂದೂ ಸಾಮ್ರಾಟ'ನನ್ನಾಗಿಸಿತು. ಹಿಂದೂಗಳು ದುಷ್ಟರು ಅಲ್ಲ; ಅವರಿಗೆ ಮುಸ್ಲಿಮರನ್ನು ಶೋಷಿಸುವ ಮನಸ್ಥಿತಿಯೂ ಇಲ್ಲ, ಆದರೆ ಏಕಮುಖವಾದ ಸೆಕ್ಯುಲರಿಸ್ಟ್ ಧೋರಣೆಗಳನ್ನು

ಕಂಡು ಬೇಸತ್ತ ಅವರು ನರೇಂದ್ರ ಮೋದಿಯವರಲ್ಲಿ ತಮಗೆ ಬೇಕಾದ ನಾಯಕನನ್ನು ಕಂಡುಕೊಂಡರು. ತುಂಬ ಬಲಾಢ್ಯವಾದ ಮನೋಸ್ಥೈರ್ಯ ಹಾಗೂ ಶುದ್ಧವಾದ ವಿಚಾರ ಅವರು ಆಯ್ದುಕೊಂಡ ನಾಯಕನಲ್ಲಿತ್ತು. ಆತ ಅವರೆಲ್ಲರ ಎದೆಯಾಳದಲ್ಲಿನ ನೋವು, ನಿರಾಸೆ, ಅಸಮಾಧಾನಗಳಿಗೆ ಧ್ವನಿ ನೀಡಬಲ್ಲವನಾಗಿದ್ದ. ಗೌರವ ಯಾತ್ರಾದ ಸಂದರ್ಭದಲ್ಲಿ ಮೋದಿಗೆ ಸಿಕ್ಕ ಪ್ರತಿ ಪ್ರತಿಕ್ರಿಯೆ ಹಿಂದೂಗಳ ಪ್ರತಿಧ್ವನಿಯಾಗಿತ್ತು.

ನಿಜ, ಮೋದಿ ಅವೆಲ್ಲದರ ರಾಜಕೀಯ ಲಾಭ ಪಡೆದುಕೊಂಡರು. ಇಷ್ಟಕ್ಕೂ ಅವರೇನು ಮಹಾತ್ಮರಲ್ಲ.

"ನಾನೊಮ್ಮೆ ಕೆಪಿಎಸ್ ಗಿಲ್ ಅವರೊಂದಿಗೆ ಪ್ರಯಾಣಿಸುತ್ತಿದ್ದಾಗ ಮಾತಿನ ಮಧ್ಯೆ ಈ ಚರ್ಚೆ ಬಂತು. ಅವರೊಂದು ಮಾತು ಹೇಳಿದರು, 'ಮೋದಿ ಬೇಕಂತಲೇ ಅಥವಾ ತಿಳಿದೂ ತಿಳಿದೂ ಇವನ್ನೆಲ್ಲ ಮಾಡಿದ್ದಾರೆ ಅನ್ನೋದನ್ನು ನಾನಂತೂ ನಂಬುವುದಿಲ್ಲ. ಇದನ್ನೇಕೆ ಇಲ್ಲಿ ಉಲ್ಲೇಖಿಸುತ್ತಿದ್ದೇನೆಂದರೆ ಮಾನವತೆಗಿಂತ ಮಿಗಿಲಾದ ಧರ್ಮವಿಲ್ಲ, ಸೆಕ್ಯುಲರಿಸಂ ಅನ್ನು ತಿರುಚಬಹುದು, ಆದರೆ ಮಾನವತೆಯನ್ನಲ್ಲ" ಎಂದು ನೆನಪಿಸಿಕೊಳ್ಳುತ್ತಾರೆ ಖ್ಯಾತ ಪತ್ರಕರ್ತ ಎಂ.ವಿ. ಕಾಮತ್. ಡಾಕ್ಟರ್ ಕಾಲಿಂದಿ ರಾಂಧೇರಿ, ನರೇಂದ್ರ ಮೋದಿಯವರ ಶಾಲಾ ಸಹಪಾಠಿಗಳಾಗಿದ್ದ 19 ಮಂದಿಯನ್ನು ಗುರುತಿಸಿ ಮೋದಿ ಬಗ್ಗೆ ಅಭಿಪ್ರಾಯ ಕೇಳಿದಾಗ ಅವರೆಲ್ಲರೂ ಮೋದಿ ಕುರಿತು ಅಗಾಧ ಗೌರವ, ಹೆಮ್ಮೆ ವ್ಯಕ್ತಪಡಿಸಿದರು. ಒಮ್ಮೆ ಅವರನ್ನೆಲ್ಲ ಸಪತ್ನೀಕರನ್ನಾಗಿ ಊಟಕ್ಕೆ ಆಹ್ವಾನಿಸಿ ಆದರಿಸಿದ್ದನ್ನೂ ಅವರಲ್ಲೊಬ್ಬರು ಹೇಳಿಕೊಂಡರು. ಮೋದಿ ಯಾರನ್ನೂ ಮರೆತಿರಲಿಲ್ಲ. ಮುಕುಂದ್‌ರಾವ್‌ಜೀ ಗುಜರಾತ್ ಆರೆಸ್ಸೆಸ್‌ನ ಮಾಧ್ಯಮ ವಿಭಾಗವನ್ನು ನೋಡಿಕೊಂಡಿದ್ದವರು. ಮೋದಿ ಜತೆ ಕೆಲಸ ಮಾಡಿದ್ದ ಅನುಭವ ಅವರದ್ದು. 'ಎಲ್ಲಾ ಥರದ ಕಾರ್ಯಕ್ರಮಗಳನ್ನೂ ಸಂಘಟಿಸುವ ಸಾಮರ್ಥ್ಯ ಮೋದಿಯವರಿಗಿತ್ತು. ಯಾವುದೇ ವಿಷಯದ ಕುರಿತಾಗಿ ಸಹ ಮಾತನಾಡಬಲ್ಲವರಾಗಿದ್ದರವರು. ಸ್ಲೋಗನ್‌ಗಳನ್ನು ಬರೆಯುವುದರಲ್ಲಂತೂ ಅವರದು ಎತ್ತಿದ ಕೈ' ಎಂದು ವಿವರಿಸುತ್ತಾರೆ ಮುಕುಂದ್ ರಾವ್. ಜಸೋದ್‌ಭಾಯ್ ಪಠಾಣ್ ಹಾಗೂ ಗನಿಭಾಯ್ ಮನ್ಸೂರಿ ಮೋದಿಯ ಶಾಲಾ ಸ್ನೇಹಿತರು. ಹತ್ತಿರದ ಮೊಹಲ್ಲಾಗಳಲ್ಲೇ ವಾಸಿಸುತ್ತಿದ್ದ ಅವರಿಗೆ ಮೋದಿ ಸಹವಾಸ ಹೆಚ್ಚಿತ್ತು. ಅವರ್‍ಯಾರಿಗೂ ಮೋದಿ ಧರ್ಮದ ಆಧಾರದ ಮೇಲೆ ತಾರತಮ್ಯ ತೋರುತ್ತಿದ್ದುದು ಅನುಭವಕ್ಕೆ ಬಂದಿಲ್ಲ. ತಾರಕ್ ಮೆಹ್ತಾ ಗುಜರಾತಿನ ಪ್ರಖ್ಯಾತ ಹಾಸ್ಯಗಾರರು. ನರೇಂದ್ರ ಮೋದಿಯವರನ್ನು ಒಂದು ಪುಸ್ತಕ ಬಿಡುಗಡೆ ಸಮಾರಂಭಕ್ಕೆ ಆಹ್ವಾನಿಸಿ ಅವರು ಆಗಮಿಸಿದ್ದನ್ನು ಅವರು ನೆನಪಿಸಿಕೊಳ್ಳುತ್ತಾರೆ. ಹಾಸ್ಯ ಸಾಹಿತಿಗಳೆಲ್ಲ





ನೆರೆದಿದ್ದ ಆ ಸಭೆಯಲ್ಲಿ ರಾಜಕಾರಣಿಯಾಗಿ ಬಂದಿದ್ದವರು ನರೇಂದ್ರ ಮೋದಿ ಮಾತ್ರ. ಆದರೆ ಉಳಿದವರೆಲ್ಲರಿಗಿಂತ ಹೆಚ್ಚಾಗಿ ತಮ್ಮ ಚಾಣಾಕ್ಷ ನಗೆ ಬುಗ್ಗೆಗಳಿಂದ ಜನರನ್ನು ಹೊಟ್ಟೆ ಹುಣ್ಣಾಗುವಂತೆ ನಗಿಸಿದವರು ಮೋದಿಯೇ ಅನ್ನುತ್ತಾರೆ ತಾರಕ್. ಇವೆಲ್ಲಕ್ಕಿಂತ ಕುತೂಹಲಕಾರಿಯಾದುದೆಂದರೆ ಕಿಶೋರ್ ಮಕ್ವಾನಾ ಮೋದಿಯೊಳಗಿರುವ ಲೇಖಕನ ಕುರಿತಾಗಿ ಬರೆದಿರುವುದು. ಅವು ಅನೇಕ ಸೋಜಿಗದ ಅಂಶಗಳನ್ನು ಬಿಚ್ಚಿಡುತ್ತವೆ. ಅವರ ಪ್ರಕಾರ ಲೇಖಕರ ಹೆಸರಿಲ್ಲದೇ ಆರೆಸ್ಸೆಸ್‌ನಲ್ಲಿ ಹಾಡಲಾಗುವ ಎಷ್ಟೋ ಹಾಡುಗಳು ಮೂಲತಃ ಮೋದಿಯವರದ್ದು. ಅಲ್ಲದೇ ಹಿಂದುತ್ವ, ವಿಶಿಷ್ಟ ವ್ಯಕ್ತಿತ್ವ, ಸಂಸ್ಕೃತಿ, ರಾಜಕೀಯ, ಧಾರ್ಮಿಕ ಇಂತಹ ಅನೇಕ ವಿಷಯಗಳ ಕುರಿತಾಗಿ ಅವರು ನೂರಾರು ಲೇಖನಗಳನ್ನೂ ಬರೆದಿದ್ದಾರೆ. ಅಷ್ಟೆಲ್ಲ ರಾಜಕೀಯ ಚಟುವಟಿಕೆಗಳ ನಡುವೆಯೂ ಅನೇಕ ಸಣ್ಣ ಕಥೆಗಳನ್ನು ಬರೆದಿದ್ದಾರೆ. ಲಕ್ಷ್ಮಣ್ ರಾವ್ ಅಥವಾ ವಕೀಲ್ ಸಾಹೇಬ್‌ರ ಜೀವನ ಚರಿತ್ರೆ 'ಸೇತುಬಂಧ್' ಮೋದಿಯ ರಚನೆ. ತುರ್ತು ಪರಿಸ್ಥಿತಿಯ ಹೋರಾಟದ ವಿವರಗಳಿರುವ ಮೋದಿ ಪುಸ್ತಕ 'ಸಂಘರ್ಷ ಮಾ ಗುಜರಾತ್'. 'ಸಾಧನಾ' ಎಂಬ ಗುಜರಾತಿ ನಿಯತಕಾಲಿಕಕ್ಕೆ ಕೆಲಕಾಲ 'ಅನಿಕೇತ್' ಎನ್ನುವ ಹೆಸರಿನಲ್ಲಿ ಬರೆಯುತ್ತಿದ್ದರು ಮೋದಿ. ಎಪ್ಪತ್ತೈದು ವರ್ಷ ದಾಟಿದ ಆರೆಸ್ಸೆಸ್ ಸ್ವಯಂಸೇವಕರನ್ನು ಅಭಿನಂದಿಸುವ ಸಮಾರಂಭದಲ್ಲಿ ಬಿಡುಗಡೆಯಾದ ನರೇಂದ್ರ ಮೋದಿ ಬರೆದ ಹಾಡುಗಳ ಸಿಡಿ 'ತಪೋವಂದನ್' ಅವರ ಸಾಹಿತ್ಯಿಕ ಸಾಮರ್ಥ್ಯದ ಪ್ರತಿಫಲನ. ಆರೆಸ್ಸೆಸ್‌ನ ದ್ವಿತೀಯ ಸರಸಂಘಚಾಲಕರಾದ ಗುರೂಜಿಯವರ ಪತ್ರಗಳನ್ನೆಲ್ಲ ಸಂಪಾದಿಸಿ 'ಪತ್ರರೂಪ ಶ್ರೀ ಗುರೂಜಿ' ಎನ್ನುವ ಪುಸ್ತಕ ತಂದಿದ್ದರು ಮೋದಿ.

ನರೇಂದ್ರ ಮೋದಿ ಮುಖ್ಯಮಂತ್ರಿ ಗಾದಿಯೇರಿದಾಗ ಅವರಿಗೆ ಆಡಳಿತದಲ್ಲಿ ಅನುಭವವೇ ಇಲ್ಲ, ಅದನ್ನು ಹೇಗೆ ನಿಭಾಯಿಸಿಯಾರು?

ಇಂತಹ ಅನುಮಾನ, ಟೀಕೆಗಳಿದ್ದಿದ್ದವು. ಹಾಗೆ ಟೀಕಿಸಿದವರೇ ಹೊಗಳುವ ಸಮಯ ಬಂತು. ಅವರ ಧನಾತ್ಮಕ ಗುಣಗಳನ್ನು ಹೀಗೆ ಪಟ್ಟಿ ಮಾಡುತ್ತಾ ಹೋಗಬಹುದು. ಹೊಸ ವಿಚಾರಧಾರೆಗಳು ಹಾಗೂ ಆಲೋಚನೆಗಳು, ಸಾಮಾನ್ಯರಂತೆ ಇರುತ್ತಿದ್ದ ಶೈಲಿ, ಎಂತಹುದೇ ರಾಜಕೀಯ ಒತ್ತಡಗಳ ನಡುವೆಯೂ ಕಲ್ಲಿನಂತೆ ನಿಲ್ಲುವ ಶಕ್ತಿ, ಬಡವರು ಹಾಗೂ ತುಳಿತಕ್ಕೊಳಪಟ್ಟವರ ಬಗ್ಗೆ ಮಿಡಿತ, ಮಾನವೀಯ ಸಂಬಂಧ ಹಾಗೂ ಸ್ನೇಹಪರ ನಡುವಳಿಕೆಗಳಿಂದ ಅಧಿಕಾರಿಗಳನ್ನು ಗೆಲ್ಲುವ ರೀತಿ, ಪ್ರಾಮಾಣಿಕತೆ, ಶುದ್ಧಹಸ್ತ, ನೇರವ್ಯಕ್ತಿತ್ವ, ಕರುಣಾಳು, ಸಹನಶೀಲ, ವಾಸ್ತವವಾದಿ, ಘಟನೆ ಹಾಗೂ ವ್ಯಕ್ತಿಗಳ ಕುರಿತಾದ ನಿಖರ ಜ್ಞಾಪಕ ಶಕ್ತಿ, ಎದುರಿಗೆ ನಿಂತವನನ್ನು ಕಣ್ಣೋಟದಲ್ಲೇ ಅಳೆದುಬಿಡುವ ಸಾಮರ್ಥ್ಯ, ಯಾವುದೇ

ಅನವಶ್ಯಕ ಖರ್ಚುಗಳಿಲ್ಲ, ಅರ್ಧದಷ್ಟು ಖರ್ಚುಗಳನ್ನು ಕಡಿತಗೊಳಿಸಲು ಅಧಿಕಾರಿಗಳಿಗೆ ಸೂಚನೆ, ಯಾವುದೇ ಕಡತಗಳನ್ನು ಹೆಚ್ಚು ಸಮಯ ಕಾಯಿಸದೇ ತ್ವರಿತವಾಗಿ ವಿಲೇವಾರಿ ಮಾಡುವತ್ತ ಗಮನ, ಪತ್ರ ವ್ಯವಹಾರಗಳಲ್ಲಿ ಚುರುಕು, ಶುಷ್ಕ ಸರಕಾರಿ ಭಾಷೆ ಬಳಸದಿರಲು ಸೂಚನೆ, ತಂತ್ರಜ್ಞಾನದ ಸಮರ್ಪಕ ಬಳಕೆ, ಸಮಯಕ್ಕೆ ತಕ್ಕ ಸ್ಪಂದನ, ಯಾವತ್ತಿಗೂ ಸಿಟ್ಟಿಗೇಳದ ಸ್ವಭಾವ, ಗಂಟೆಗಳ ಗಣನೆಯಿಲ್ಲದೇ ಕೆಲಸದಲ್ಲಿ ತೊಡಗಿಕೊಳ್ಳುವ ಸ್ವಭಾವ, ಆಧ್ಯಾತ್ಮಿಕ ಪ್ರವೃತ್ತಿ, ವಸ್ತುಗಳನ್ನು ಸಕಾರಾತ್ಮಕ ದೃಷ್ಟಿಕೋನದಿಂದ ನೋಡುವ ಮನೋಭಾವ, ಜನರನ್ನು ಸಂತೈಸುವಲ್ಲಿ ಎತ್ತಿದ ಕೈ, ಅನಭಿಪ್ರಾಯವನ್ನು ಎದುರುಗೊಳ್ಳುವುದರಲ್ಲಿ ಯಾವತ್ತಿಗೂ ಬತ್ತದ ಧೈರ್ಯ, ಸಾಮಾಜಿಕ, ರಾಜಕೀಯ ಹಾಗೂ ಆರ್ಥಿಕ ಸಮಸ್ಯೆಗಳಿಗೆ ಅವರದೇ ನೆಲೆಯಲ್ಲಿ ಪರಿಹಾರ ಸೂಚಿಸುವ ಬುದ್ಧಿಮತ್ತೆ. ಇವನ್ನೆಲ್ಲ ಮೋದಿ ವಿರೋಧಿಗಳು ಒಪ್ಪದೇ ಇರಬಹುದು. ಇದೊಂದು ಸಾಮೂಹಿಕ ಉನ್ಮಾದದ ನೆಲೆಯಲ್ಲಿ ಹುಟ್ಟಿಕೊಂಡ ಅಭಿಪ್ರಾಯ ಅಂತ ತಳ್ಳಿ ಹಾಕಬಹುದು.

ಆದರೆ ಒಮ್ಮೆ ಯೋಚಿಸಿ.

ಸೆಕ್ಯುಲರ್ ಮಾಧ್ಯಮಗಳಿಂದ ಆ ಮಟ್ಟದ ಟೀಕೆಗೊಳಗಾಗಿ, ಅನಾಯಾಸವಾಗಿ ಯಾತ್ರೆಗಳನ್ನು ಸಂಘಟಿಸಿಕೊಂಡು ಬಂದ, ಎನ್ನಾರೈಗಳನ್ನು ಓಲೈಸಿ ದೊಡ್ಡ ಪ್ರಮಾಣದ ಬಂಡವಾಳ ಹರಿದು ಬರುವಂತೆ ಮಾಡುವ, ತನ್ನದೇ ಪಕ್ಷದಲ್ಲಿನ ಬಂಡಾಯದ ಅಲೆಯನ್ನು ಈಜಿ ಬಂದ, ಪಂಚಾಯಿತಿಯಿಂದ ಹಿಡಿದು ಅಸೆಂಬ್ಲಿಯವರೆಗಿನ ಎಲ್ಲ ಚುನಾವಣೆಗಳಲ್ಲೂ ವಿಜಯದ ಸಾರಥ್ಯ ವಹಿಸಿದ ಈ ಮನುಷ್ಯನಲ್ಲಿ ಸಾಮಾನ್ಯರಿಗೆ ಮಿಗಿಲಾದದ್ದು ಏನೋ ಇದ್ದಿರಲೇಬೇಕಲ್ಲವೇ?

ಅವರೊಂದಿಗಿನ ಸಂದರ್ಶನವೊಂದರಲ್ಲಿ 'ನೀವು ಯಾವುದಾದರೂ ನಿರ್ದಿಷ್ಟ ದೇವರನ್ನು ಪೂಜಿಸುತ್ತಿರುವಿರಾ?' ಅಂತ ಕೇಳಿದಾಗ 'ಇಲ್ಲ' ಎಂಬ ಉತ್ತರ ಬಂತು. ಆದರೆ ಅವಕಾಶ ಸಿಕ್ಕಾಗಲೆಲ್ಲ ಶಿವ ದೇವಾಲಯಕ್ಕೆ ಹೋಗುತ್ತಿದ್ದೆ ಎಂಬ ಉತ್ತರವೂ ಬಂತು. ಅಲ್ಲದೆ ಕೈಲಾಸ ಪರ್ವತಕ್ಕೆ ಪ್ರದಕ್ಷಿಣೆ ಹಾಕಿದ್ದಾಗಿ, ಮಾನಸ ಸರೋವರಕ್ಕೂ ಭೇಟಿ ಇತ್ತಿದ್ದಾಗಿ ಹೇಳಿಕೊಂಡರು. ಅನಂತರ ತೂರಿ ಬಂದ ತಮಾಷೆಯ ಪ್ರಶ್ನೆ ಹಾಗೂ ಮೋದಿ ಅವಕ್ಕೆ ಕೊಟ್ಟ ಅಷ್ಟೇ ಕುಶಾಲಿನಿಂದ ಕೂಡಿದ ಉತ್ತರಗಳು ಹೀಗಿವೆ.

ಪ್ರಶ್ನೆ: ನೀವು ಶಿವ ಪಾರ್ವತಿಯರನ್ನು ಭೇಟಿಯಾಗಿಲ್ಲವಾ?

ಮೋದಿ: ಇಲ್ಲ, ಆದರೆ ನಾನು ಗಣೇಶನನ್ನು ಭೇಟಿಯಾಗಿದ್ದೆ!

ಪ್ರಶ್ನೆ: ಅದ್ಹೇಗೆ ಹೇಳ್ತೀರಿ?





ಮೋದಿ: ಅದೊಂದು ಕೌತುಕದ ಘಟನೆ. ಕೈಲಾಸ ಪರ್ವತ, ಮಾನಸ ಸರೋವರ ಪ್ರದೇಶದಲ್ಲಿ ನೀವೊಂದು ಸೊಳ್ಳೆಯನ್ನೂ ಸಹ ಕಾಣಲು ಸಾಧ್ಯವಿಲ್ಲ, ಅಲ್ಲಿ ಜೀವಸಂಕುಲವೇ ಇಲ್ಲ, ಹಾಗಿರುವಾಗ 24,000 ಅಡಿಗಳ ಬೆಟ್ಟದಲ್ಲಿ ನಾನೊಂದು ಇಲಿಯನ್ನು ಕಂಡೆ. ಆಗ ನಾನಂದುಕೊಂಡೆ–ಅದು ಗಣೇಶನೇ ಆಗಿರಬೇಕು!

ಪ್ರಶ್ನೆ: ಹಿಂದುತ್ವ ಅಂದರೆ ನಿಮ್ಮ ದೃಷ್ಟಿಕೋನದಲ್ಲಿ ಏನು?

ಮೋದಿ: ಹಿಂದುತ್ವ ಒಂದು ಜೀವನ ಪದ್ಧತಿ. ಇದು ಎಲ್ಲ ರೀತಿಯ ಆಕ್ರಮಣಗಳನ್ನೂ ಎದುರಿಸಿ ಉಳಿದುಕೊಂಡು ಬಂದಂತಹ ಧರ್ಮ. ಕಳೆದ ಹತ್ತು ಸಾವಿರ ವರ್ಷಗಳಲ್ಲಿ ಅನೇಕ ವಿಚಾರಧಾರೆಗಳು ಒಂದಿಲ್ಲೊಂದು ಕಾರಣಕ್ಕೆ ಕ್ಷೀಣಿಸಿ ಹೋಗಿವೆ. ಆದರೆ ಹಿಂದೂ ಧರ್ಮ ಕಾಲದೊಂದಿಗೆ ಸಾಗಿಬಂದ ಧರ್ಮ. ಇದು ಸಮಾಜಕ್ಕೆ ಭಾರವಾಗಿರದೆ ಜವಾಬ್ದಾರಿಯೊಂದಿಗೆ ಸಾಗುವಂತೆ ವ್ಯಕ್ತಿಯನ್ನು ಪ್ರೇರೇಪಿಸುತ್ತದೆ. ಕ್ರಿಶ್ಚಿಯಾನಿಟಿಗೆ 2,000 ವರ್ಷಗಳ ಪ್ರಾಯ. ಇಸ್ಲಾಮ್ 1,400 ವರ್ಷ ಹಳೆತಾದುದು. ಅವೆರಡೂ ಮತಗಳು. ಆದರೆ ಹಿಂದುತ್ವ ಜೀವನ ಪದ್ಧತಿ. ಸಂಸ್ಕೃತದಲ್ಲಿ ಇದನ್ನು ಸನಾತನ ಧರ್ಮ ಎಂದು ಕರೆಯುತ್ತಾರೆ. ಇದು ಕ್ಲಿಷ್ಟವೂ ಆಗಿದೆ, ಹಾಗೆಯೇ ಕಾಲದೊಂದಿಗೂ ಹೊಂದಿಕೊಳ್ಳುತ್ತದೆ.

ಮೋದಿಗೆ ಅವರದ್ದೇ ಆದ ಜೀವನ ಶೈಲಿಯಿದೆ. ನವರಾತ್ರಿಯ ದಿನಗಳಲ್ಲಿ ಅವರು ನೀರನ್ನು ಬಿಟ್ಟು ಇನ್ನೇನನ್ನೂ ಸೇವಿಸುವುದಿಲ್ಲ, ದಿನಕ್ಕೆರಡು ತಾಸಿನ ಪೂಜೆ. ಪ್ರಾಣಾಯಾಮ, ಯೋಗ ಹಾಗೂ ಧ್ಯಾನಗಳೂ ಸಹ ಅವರ ದಿನಚರಿಯಲ್ಲಿ ಸೇರಿವೆ. ಅಂಬಾಜಿ ಶಕ್ತಿಯನ್ನು ಆರಾಧಿಸುವ ಸಮಯದಲ್ಲೂ ನೀರು ಹೊರತುಪಡಿಸಿ ಇನ್ನೇನನ್ನೂ ಮುಟ್ಟದಿರುವ ವ್ಯಕ್ತಿ ಅವರು. ಅವರಿಗೆ ಪರೀಕ್ಷೆ ಎದುರಾದದ್ದು ಅಡ್ವಾಣಿಯವರ ರಥಯಾತ್ರೆಯ ಸಂದರ್ಭದಲ್ಲಿ, ಅದು ನವರಾತ್ರಿಯ ಸಮಯ. ಮೋದಿಗೆ ಎಲ್ಲಾ ತಯಾರಿಗಳ ಜವಾಬ್ದಾರಿ ವಹಿಸಲಾಗಿತ್ತು. ಅಡ್ವಾಣಿಯವರ ಪತ್ನಿಗೆ ನವರಾತ್ರಿ ಸಂದರ್ಭದಲ್ಲಿ ಮೋದಿ ಅನುಸರಿಸುತ್ತಿದ್ದ ಕಟ್ಟುನಿಟ್ಟು ನಿಯಮಗಳು ಗೊತ್ತಿತ್ತು. ಕಣ್ಣಲ್ಲಿ ನೀರು ತುಂಬಿಕೊಂಡು ಮೋದಿ ಬಳಿ ಬಂದು 'ಏನು ಮಾಡುತ್ತಿದ್ದೀರಿ?' ಅಂತ ಅವರು ಗದ್ಗದಿತರಾದರು. 'ಇದು ನನ್ನ ಜೀವನ ಕ್ರಮ. ನನಗೆ ಹೀಗೆ ಬಾಳಲು ಬಿಟ್ಟುಬಿಡಿ' ಎಂದರು ಮೋದಿ! ಜುಲೈನಿಂದ ನವೆಂಬರ್‌ವರೆಗಿನ ಚಾತುರ್ಮಾಸದಲ್ಲಿ ದಿನಕ್ಕೊಂದೇ ಊಟ. ಸಮರ್ಪಣ, ಸಂಕಲ್ಪಗಳೊಂದಿಗೇನೇ ಅವರ ದಿನ ಶುರುವಾಗುತ್ತದೆ. ಮೋದಿಗೆ ಹೆದರಿಕೆಯೆಂಬುದಿಲ್ಲ, ಅವರದೇ ಒಂದು ಅನುಭವದ ನಿರೂಪಣೆ ಇದನ್ನು ದೃಢಪಡಿಸುತ್ತದೆ. "ಕನ್ಯಾಕುಮಾರಿಯಿಂದ ಕಾಶ್ಮೀರದವರೆಗಿನ 'ಏಕತಾ ಯಾತ್ರೆ'ಯನ್ನು ಸಂಘಟಿಸುವ ಜವಾಬ್ದಾರಿ ನನ್ನ ಹೆಗಲಿಗೆ ಬಿತ್ತು. ಆ ಸಮಯದಲ್ಲಿ

ಅಟಲ್‌ಜೀ, ಸಿಕಂದರ್ ಬಖ್ತ್, ರಾಜಮಾತಾ ಹಾಗೂ ಇನ್ನೂ ಕೆಲವರು ನನ್ನೊಂದಿಗಿದ್ದರು. ನಾನು ಮಾತಾಡುತ್ತಿದ್ದೆ ಅವರೆಲ್ಲ ಕೇಳುತ್ತಿದ್ದರು. ಜನವರಿ 26ಕ್ಕೆ ಎಲ್ಲರೂ ಶ್ರೀನಗರಕ್ಕೆ ಬರುವುದು ಅಸಾಧ್ಯ. ಹಾಗಾಗಿ ಭಾರತದ ಉದ್ದಗಲಕ್ಕೂ ಕಾರ್ಯಕ್ರಮ ಹಮ್ಮಿಕೊಳ್ಳೋಣ. ಪಕ್ಷ ಜನರನ್ನು ಒಟ್ಟುಗೂಡಿಸುತ್ತದೆ. ಭಾರತದ ನಕ್ಷೆ ರಚಿಸಿ, ಅದರಲ್ಲಿ ಶ್ರೀನಗರದ ಜಾಗವನ್ನು ಗುರುತಿಸಿ ಅಲ್ಲಿ ತ್ರಿವರ್ಣ ಧ್ವಜ ಹಾರಿಸುವ ಕೆಲಸವಾಗಲಿ. ಇದು ಭಾರತದ ಎಲ್ಲ ಹಳ್ಳಿ ನಗರಗಳಲ್ಲಿ ನಡೆಯಬೇಕು...... ನಾನಿನ್ನೂ ಮಾತು ಮುಗಿಸಿರಲಿಲ್ಲ, ಅಷ್ಟರಲ್ಲಿ ಸಿಕಂದರ್ ಬಖ್ತ್ ನನ್ನನ್ನು ಎದ್ದು ಬಂದು ತಬ್ಬಿಕೊಂಡು ಬಿಟ್ಟರು. 'ಎಂಥ ವಿಚಾರ! ಅಲ್ಲಾಹು ನಿನ್ನೊಂದಿಗಿದ್ದಾನೆ. ಹಾಗಾಗಿಯೇ ನಿನಗೆ ಇಂತಹ ವಿಚಾರಗಳು ಹೊಳೆಯುತ್ತವೆ' ಎಂದರು. ಆನಂತರದಲ್ಲಿ ಆ ಯೋಚನೆ ಸರಿಯಾಗಿಯೇ ಕೆಲಸ ಮಾಡಿತು ಎನ್ನುತ್ತಾರೆ ನರೇಂದ್ರ ಮೋದಿ.

ಅವರು ತಮ್ಮನ್ನೇ ಗೇಲಿಮಾಡಿಕೊಳ್ಳಬಲ್ಲ ವ್ಯಕ್ತಿ.

ನಿಮಗೇನಾದರೂ ಕೆಟ್ಟ ಅಭ್ಯಾಸಗಳಿವೆಯಾ? ಅಂತ ಅವರನ್ನು ಕೇಳಲಾಯಿತು. ಅದಕ್ಕೆ ಅವರು, "ನಾನು ಕುಡಿಯಲ್ಲ, ಸಿಗರೇಟು ಸೇದಲ್ಲ, ಹಾಗಾಗಿ ಸಮಾಜದ ದೃಷ್ಟಿಯಲ್ಲಿ ನಾನು ವ್ಯಸನಿಯಲ್ಲ. ಆದಾಗ್ಯೂ ನಾನು ತುಂಬ ಕಡಿಮೆ ನಿದ್ರೆ ಮಾಡುತ್ತೇನೆ. ಅದು ದೇಹಕ್ಕೆ ಹಿತವಾದುದಲ್ಲ. ಹಾಗೆಯೇ ನನಗೆ ಬಟ್ಟೆಗಳ ಮೋಹ. ಹೊಸ ಹೊಸ ಎಲೆಕ್ಟ್ರಾನಿಕ್ ಉಪಕರಣಗಳೆಂದರೆ ಅತಿಯಾದ ವ್ಯಾಮೋಹ. ಇವೆಲ್ಲ ಕೆಟ್ಟ ಹವ್ಯಾಸಗಳು" ಎಂದು ನಕ್ಕುಬಿಡುತ್ತಾರೆ. ನಿಮ್ಮನ್ನು ನೀವು ಹೇಗೆ ಕಾಣುತ್ತೀರಿ? ಎಂಬ ಪ್ರಶ್ನೆಗೆ ಮೋದಿಯವರ ಉತ್ತರ ಫಿಲಾಸಫಿಕಲ್ ಆಗಿದೆ. "ಮನುಷ್ಯ ಅಂದ ಮೇಲೆ ಅವನಲ್ಲಿ ಅಪಾರ ಆತ್ಮವಿಶ್ವಾಸ ಇರಬೇಕು. ಆತ್ಮವಿಶ್ವಾಸ ಇಲ್ಲದಿದ್ದರೆ ಏನನ್ನೂ ಸಾಧಿಸಲು ಸಾಧ್ಯವಿಲ್ಲ. ಕೆಲಕಾಲ ಇತರರ ಮೇಲೆ ಅವಲಂಬಿತರಾಗಿರಬಹುದು. ಆದರೆ ಎಲ್ಲ ಸಮಯದಲ್ಲೂ ಅಲ್ಲ. ಈಗ ನಾನು ಕುಳಿತಿರುವ ಕಾರಿನ ಮೇಲೆ ನನಗೆ ವಿಶ್ವಾಸವಿಲ್ಲದಿದ್ದರೆ ನಾನು ಮುಂಬೈ ತಲುಪುವುದಾದರೂ ಹೇಗೆ? ದೇವರು ಕೊಟ್ಟ ವಾಹನದ ಮೇಲೆ ನಂಬಿಕೆಯಿಡಬೇಕು. ಅದರಲ್ಲೇನಾದರು ದೌರ್ಬಲ್ಯಗಳಿದ್ದರೆ ಅದನ್ನು ಸರಿಪಡಿಸಿಕೊಳ್ಳಬೇಕು. ನನ್ನ ದೇಹ ಸಹ ಒಂದು ವಾಹನ. ಅದರ ಮೇಲೆ ನನಗೆ ಪೂರ್ಣ ವಿಶ್ವಾಸವಿರಬೇಕು. ಇದು ಜೀವನದ ಕುರಿತಾದ ನನ್ನ ಮೊದಲ ದೃಷ್ಟಿಕೋನ. ಎರಡನೆದಾಗಿ ನನ್ನ ನಂಬಿಕೆ ಏನೆಂದರೆ, ಪ್ರತಿ ಮನುಷ್ಯನೂ ಏನೋ ಒಂದು ಸಾಮರ್ಥ್ಯ, ಶಕ್ತಿ ಹೊಂದಿದ್ದಾನೆ. ಈ ಸಾಮರ್ಥ್ಯಗಳನ್ನು ಉಪಯೋಗಿಸಿಕೊಳ್ಳುವುದರಲ್ಲೇ ನಮ್ಮ ಪ್ರಯತ್ನ ಅಡಗಿರಬೇಕು. 'ಓ ಪಾಪಿಯೆ, ನನಗೆ





ಶರಣಾಗು' ಎಂಬ ತತ್ವ ನನ್ನದಲ್ಲ. ನನ್ನ ನಂಬಿಕೆಯ ಪ್ರಕಾರ ಪ್ರತಿಯೊಬ್ಬನಲ್ಲೂ ದೇವರು ಇದ್ದಾನೆ. ಹಾಗಾಗಿ ಪ್ರತಿಯೊಬ್ಬನಲ್ಲೂ ಒಳ್ಳೆಯದಿದೆ. ಅದನ್ನು ಕಂಡುಕೊಂಡರೆ ಯಶಸ್ಸಿನತ್ತ ನಡೆಯಬಹುದು. ನನ್ನ ಮೂರನೇ ನಂಬಿಕೆಯೆಂದರೆ- ಮನುಷ್ಯನಲ್ಲಿ ಒಟ್ಟಾರೆ ಮೂವತ್ತು ಗುಣಗಳಿರುತ್ತವಂತೆ. ನಾನು ಚಿಕ್ಕಂದಿನಲ್ಲಿ ಓದಿದ ಎಲ್ಲ ಪುರಾಣ ಕಥೆಗಳೂ ತ್ಯಾಗದ ಕುರಿತಾಗಿ ಹೇಳುತ್ತವೆ. ಅವರವರ ಸಾಮರ್ಥ್ಯಗಳಿಗೆ ಅನುಗುಣವಾಗಿ ಎಲ್ಲರನ್ನೂ ಸಮಾಜದ ಅಭಿವೃದ್ಧಿಗಾಗಿ ಬಳಸಿಕೊಳ್ಳಬೇಕು. ನಾನು ಬಲವಾಗಿ ನಂಬುವುದೇನೆಂದರೆ ಸಮಾಜ ನಮ್ಮ ತಪ್ಪುಗಳನ್ನು ಕ್ಷಮಿಸುತ್ತದೆ. ಆದರೆ ಅಪ್ರಾಮಾಣಿಕತೆಯನ್ನಲ್ಲ. ಸಮಾಜ ಮನುಷ್ಯನಲ್ಲಿ ಸಂಪೂರ್ಣ ಪರಿಪೂರ್ಣತೆಯನ್ನು ನಿರೀಕ್ಷಿಸುವುದಿಲ್ಲ. ಜನ ಹೇಳಬಹುದು, 'ನೋಡು ಆ ಬಡಪಾಯಿಯನ್ನ, ಎಂಥೆಂಥ ಆದರ್ಶಗಳನ್ನಿಟ್ಟುಕೊಂಡಿದ್ದ. ಒಂದನ್ನೂ ಈಡೇರಿಸಲಾರದೇ ಹೋದ ಅಂತ. ಅದು ಸಹಜವಾದುದು. ಆದರೆ ಸಮಾಜ ಪಾರದರ್ಶಕತೆ ಹಾಗೂ ತೆರೆದುಕೊಳ್ಳುವಿಕೆಯನ್ನು ಅಪೇಕ್ಷಿಸುತ್ತದೆ. ಬಹಳಷ್ಟು ಜನ ನಾನು ತುಂಬ ನೇರ ಮಾತಿನವ ಎಂದು ಹೇಳುತ್ತಾರೆ. ವಾಸ್ತವದಲ್ಲಿ ಯಾರನ್ನೋ ಟೀಕಿಸಿ ಬಿಡುವುದು ನನ್ನ ಉದ್ದೇಶವಲ್ಲ. ಆದರೆ ಕೆಟ್ಟದ್ದನ್ನು ಕಂಡಾಗ ಅದು ಕೆಟ್ಟದ್ದು ಎಂದು ಹೇಳಬೇಕಾಗುತ್ತದೆ. ನಾನು ಏನಾದರೂ ತಪ್ಪು ಮಾಡಿ, ವಾರದ ನಂತರ ಅದು ನನ್ನ ಗಮನಕ್ಕೆ ಬಂದಾಗ ಅದನ್ನು ತಿದ್ದಿಕೊಳ್ಳಲು ನಾನು ಸಿದ್ಧ. ಇದು ಬದುಕಿನ ಕುರಿತಾದ ನನ್ನ ಚಿಂತನೆ. 'ಒಂದು ಬದುಕು, ಒಂದೇ ಗುರಿ' ಎಂಬ ಧ್ಯೇಯ ಇರಬೇಕು. ಆ ಗುರಿಯನ್ನು ತಲುಪಲಿಕ್ಕಾಗಿಯೇ ಜೀವಿತವನ್ನು ಮೀಸಲಿಡಬೇಕು. ನಡೆಯುವುದು ನಡೆಯುತ್ತಿರಲಿ. ನಾನಂತೂ ಅಧಿಕಾರವನ್ನು ಒಂದು ಸಾಧನವೆಂದು ಭಾವಿಸಿದ್ದೇನೆ".

ನರೇಂದ್ರ ಮೋದಿ ಜೀವನದುದ್ದಕ್ಕೂ ದೇವರ ಒಂದು ಸಾಧನದಂತೆ ಕೆಲಸ ಮಾಡುತ್ತ ಬಂದವರು. ಅವರಿಗೆ ಅಂತ ಏನೂ ಮಾಡಿಕೊಂಡಿಲ್ಲ. ಆದರೆ ಜನರ ಒಳಿತಿಗಾಗಿ ಸದಾ ಯೋಚಿಸುತ್ತಾರೆ, ಸ್ಪಂದಿಸುತ್ತಾರೆ.

ಇಷ್ಟಾಗಿಯೂ ಒಂದು ಪ್ರಶ್ನೆ ಏಳುತ್ತದೆ- ಗುಜರಾತಿಗಳ ಮನ ಗೆಲ್ಲಲು ನರೇಂದ್ರ ಮೋದಿ ಮಾಡಿದ್ದಾದರೂ ಏನು? ಗ್ರಾಮ ಪಂಚಾಯಿತಿಯಿಂದ, ಜಿಲ್ಲಾಪಂಚಾಯಿತಿ, ನಗರಸಭೆ, ಮಹಾನಗರ ಪಾಲಿಕೆ, ವಿಧಾನ ಪರಿಷತ್‌ವರೆಗಿನ ಎಲ್ಲ ಚುನಾವಣೆಗಳಲ್ಲೂ ಜನ ಬಿಜೆಪಿಗೆ ವೋಟು ನೀಡುವಂತೆ ಅವರು ಮಾಡಿರುವ 'ಮೋಡಿ'ಯಾದರೂ ಯಾವುದು? ಇಡೀ ರಾಷ್ಟ್ರ, ಅಂತಾರಾಷ್ಟ್ರೀಯ ಮಾಧ್ಯಮಗಳ ಟೀಕೆಗೆ, ನಿಂದನೆಗೆ, ದೂಷಣೆಗೆ ಗುರಿಯಾದ ವ್ಯಕ್ತಿಯನ್ನು ಗುಜರಾತಿಗಳು ತಮ್ಮ ಹೃದಯದ ಕದ ತೆರೆದು ಒಳಗೆ ಕರೆದುಕೊಂಡಿದ್ದೇಕೆ?







# 41

## ಅಖ್ತರ್ ಬರೆದುಕೊಟ್ಟರು ಸೋನಿಯಾ ಓದಿದರು!

ಒಂದು ಘಟನೆ ನೆನಪಾಗುತ್ತಿದೆ. ಜಗತ್ತಿನ ಗಮನ ಸೆಳೆದಿದ್ದ 2002ರ ಹಿಂಸಾಚಾರದ ನಂತರ ಗುಜರಾತ್ ಮೈಕೊಡವಿಕೊಂಡು ಚುನಾವಣೆಗೆ ಅಣಿಯಾಯಿತು. ಮಾಧ್ಯಮಗಳ ನಕಾರಾತ್ಮಕ ಪ್ರಚಾರಾಂದೋಲನದ ಹೊರತಾಗಿಯೂ ಭಾರೀ ಬಹುಮತದೊಂದಿಗೆ ಅಧಿಕಾರಕ್ಕೆ ಬಂದ ನರೇಂದ್ರ ಮೋದಿ, ಮೂರು ವರ್ಷಗಳ ಕಾಲ ಯಾವ ಪತ್ರಕರ್ತನನ್ನೂ ಹತ್ತಿರಕ್ಕೆ ಬಿಟ್ಟುಕೊಂಡಿರಲಿಲ್ಲ. ಕೊನೆಗೂ 2005ರಲ್ಲಿ ಮೋದಿಯವರ ಸಂದರ್ಶನ(Modi-fied) ಮಾಡುವ ಅವಕಾಶ ಪಡೆದುಕೊಂಡ 'ಎನ್‌ಡಿಟಿವಿ'ಯ ಹಿರಿಯ ಪ್ರತಿನಿಧಿ ಶ್ರೀನಿವಾಸನ್ ಜೈನ್, ಮೋದಿಯವರನ್ನು ಸಿಕ್ಕಿಹಾಕಿಸಲು ಬಹುವಾಗಿ ಪ್ರಯತ್ನಿಸಿದರು. ಆದರೆ ಗುಜರಾತ್ ಹಿಂಸಾಚಾರದ ಬಗ್ಗೆ ಎಷ್ಟೇ ಒತ್ತಾಯಿಸಿದರೂ ಮೋದಿಯವರು ವಿಷಾದ ವ್ಯಕ್ತಪಡಿಸಲು ನಿರಾಕರಿಸಿದರು.

ಕೊನೆಗೆ "ಮೋದಿಯವರೇ, ನೀವು ಬದಲಾಗಬೇಕು ಅಂತ ಅನಿಸುವುದಿಲ್ಲವೆ?" ಎಂದ ಶ್ರೀನಿವಾಸನ್ ಜೈನ್ ಕೆಣಕಲು ಯತ್ನಿಸಿದರು.  ಮೋದಿ ಮಗುಮ್ಮಾಗಿ ಕುಳಿತುಕೊಳ್ಳಲಿಲ್ಲ, ಹಾವಿನ ಹೆಡೆ ಮುಟ್ಟಿದಂತಾಯಿತು! "2002ರಲ್ಲಿ ನಡೆದ ಚುನಾವಣೆಗಿಂತ ಮೂರು ತಿಂಗಳ ಮೊದಲೇ ನಿಮ್ಮ ಎನ್‌ಡಿಟಿವಿ ಗುಜರಾತ್‌ನಲ್ಲಿ ಠಿಕಾಣಿ ಹೂಡಿತ್ತು. ನಿಮ್ಮ ಪತ್ರಕರ್ತರನ್ನು ಛೂ ಬಿಟ್ಟು ಮಾಧ್ಯಮಗಳಲ್ಲಿ ದೊಡ್ಡ ಪ್ರಚಾರಾಂದೋಲನವನ್ನೇ ಮಾಡಿದಿರಿ. ಆದರೆ ಫಲಿತಾಂಶವೇನಾಯಿತು? ಜನ ಬಿಜೆಪಿಯನ್ನು ಮತ್ತೆ ಅಧಿಕಾರಕ್ಕೇರಿಸಿದರು. ನಿಮ್ಮ ಮಾತನ್ನು ನಂಬಲಿಲ್ಲ. ನೀವೇ ಯೋಚನೆ ಮಾಡಿ, ಬದಲಾಗಬೇಕಾಗಿರುವುದು ನೀವು ಮತ್ತು ನಿಮ್ಮ ಎನ್‌ಡಿಟಿವಿಯೋ ಅಥವಾ ನಾನೋ?" ಎಂದರು ಮೋದಿ!!

ಆ ಕ್ಷಣದಲ್ಲಿ ಶ್ರೀನಿವಾಸನ್ ಜೈನ್ ತೆಪ್ಪಗಾದರು. ಆದರೆ ಮಾಧ್ಯಮಗಳ ಪ್ರಚಾರಾಂದೋ

ಲನ ನಿಲ್ಲಲಿಲ್ಲ, ಇನ್ನೂ ಹೆಚ್ಚಾಯಿತು. ಪ್ರತಿಯೊಂದರಲ್ಲೂ ಮಾಧ್ಯಮಗಳು ತಪ್ಪು ಹುಡುಕಲು ಯತ್ನಿಸಿದವು. ಆದರೆ ವೈಯಕ್ತಿಕ ಹಾಗೂ ಸಾರ್ವಜನಿಕ ಜೀವನದಲ್ಲಿ ಶುದ್ಧಚಾರಿತ್ರ್ಯವನ್ನು ಹೊಂದಿರುವ ಮೋದಿಯವರಲ್ಲಿ ತಪ್ಪು ಹುಡುಕಲು ಸಾಧ್ಯವೇ ಇರಲಿಲ್ಲ. ಹಾಗಾಗಿ ಗುಜರಾತ್ ಹಿಂಸಾಚಾರವನ್ನೇ ಮತ್ತೆ ಮತ್ತೆ ಕೆದಕುವುದು ಹಾಗೂ ಕುಟುಕುವುದು ಆರಂಭವಾಯಿತು. ಮಾಧ್ಯಮಗಳ ಕೆಟ್ಟ ಪ್ರಚಾರಾಂದೋಲನದ ನಡುವೆಯೂ ಯಾವುದಕ್ಕೂ ತಲೆಕೆಡಿಸಿಕೊಳ್ಳದ ಮೋದಿ ಜನ ಸೇವೆ ಮುಂದುವರಿಸಿದರು. ನರ್ಮದಾ ನೀರನ್ನು ಭೂಮಿಗೆ ಹರಿಸಿ ಗುಜರಾತ್‌ನಂತಹ ಒಣ ಪ್ರದೇಶವನ್ನು ಹಸಿರಾಗಿಸಿದರು. ಈ ಹಂತದಲ್ಲಿ ಮೇಧಾ ಪಾಟ್ಕರ್ ಎಂಬ ವೃತ್ತಿಪರ ಹೋರಾಟಗಾರ್ತಿ ಹಾಗೂ ಆಕೆಯ ಜತೆಯಾದ ಪ್ರಚಾರಪ್ರಿಯೆ ಅರುಂಧತಿ ರಾಯ್ ಮಾಧ್ಯಮಗಳಿಗೆ ಹೊಸ ದಾಳಗಳಾದರು. ನರ್ಮದಾ ಸಂತ್ರಸ್ತರ ಪುನರ್ವಸತಿ ಹೆಸರು ಹೇಳಿಕೊಂಡು ಮೋದಿ ವಿರುದ್ಧ ಪ್ರಚಾರಾಂದೋಲನ ಆರಂಭಿಸಿದರು. ಪುನರ್ವಸತಿ ವಿಚಾರದಲ್ಲಿ ಗುಜರಾತ್ ಎಲ್ಲ ಕ್ರಮಗಳನ್ನೂ ತೆಗೆದುಕೊಂಡಿತ್ತು. ಸಣ್ಣ ಲೋಪಕ್ಕೂ ಅವಕಾಶ ನೀಡಿರಲಿಲ್ಲ, ಹಾಗಾಗಿ ಸುಪ್ರೀಂಕೋರ್ಟ್ ಗುಜರಾತ್ ಪರ ನಿಂತಿತು!

2007, ಡಿಸೆಂಬರ್‌ನಲ್ಲಿ ಗುಜರಾತ್ ವಿಧಾನಸಭೆಗೆ ಹೊಸ ಚುನಾವಣೆ ಘೋಷಣೆಯಾಯಿತು.

ಮಾಧ್ಯಮಗಳು ಮಾಮೂಲಿ ವರಸೆ ತೆಗೆದವು. ಆರು ವರ್ಷಗಳಿಂದ ತಪಸ್ಸಿನಂತೆ ಮಾಡಿಕೊಂಡು ಬಂದಿದ್ದ ಪ್ರಚಾರಾಂದೋಲನವನ್ನು ಮುಂದುವರಿಸಲು, ಮೋದಿಯವರನ್ನು ಹೀಗಳೆಯಲು ಹೊಸ ಅವಕಾಶ ಸೃಷ್ಟಿಯಾಯಿತು. ತುರ್ತುಪರಿಸ್ಥಿತಿಯ ನಂತರ ಒಬ್ಬ ವ್ಯಕ್ತಿಯ ವಿರುದ್ಧ ಒಂದು ದೇಶದ ಮಾಧ್ಯಮಗಳೆಲ್ಲ ತಿರುಗಿಬಿದ್ದ ಘಟನೆ ಬಹುಶಃ ಇದೊಂದೇ ಇರಬೇಕು. ಪ್ರಜಾಪ್ರಭುತ್ವದ ನಾಲ್ಕನೇ ಅಂಗ, ಪ್ರಜಾಪ್ರಭುತ್ವದ ಕಾವಲುಗಾರ ಎಂದು ಹೇಳಿಕೊಳ್ಳುವ ಮಾಧ್ಯಮಗಳು ನಿಷ್ಪಕ್ಷಪಾತತನವನ್ನೇ ಮರೆತು ಮೋದಿಯರನ್ನು ರಾಜಕೀಯವಾಗಿ ಮುಗಿಸಲು ಅಣಿಯಾದವು. ಇತ್ತ ಅಹ್ಮದ್ ಪಟೇಲ್, ಗುಲಾಂ ನಬಿ ಆಜಾದ್, ವಿನ್ಸೆಂಟ್ ಜಾರ್ಜ್, ಮಾರ್ಗರೆಟ್ ಆಳ್ವ, ಆಸ್ಕರ್ ಫರ್ನಾಂಡಿಸ್, ಅಂಬಿಕಾ ಸೋನಿ, ಸಾಮ್ಯುಯೆಲ್ ರಾಜಶೇಖರ್ ರೆಡ್ಡಿ ಮುಂತಾದ ಮುಸ್ಲಿಂ ಹಾಗೂ ಕ್ರಿಶ್ಚಿಯನ್ ಸಲಹೆಗಾರರನ್ನೇ ಇಟ್ಟುಕೊಂಡಿರುವ ಸೋನಿಯಾ, ರೋಡ್(ಶೋ) ರೋಮಿಯೋ (ರಾಹುಲ್ ಗಾಂಧಿ) ಕೂಡ ತಯಾರಾದರು. ಖ್ಯಾತ ಸಿನಿಮಾ ಸಾಹಿತ್ಯ ರಚನೆಕಾರ ಜಾವೆದ್ ಅಖ್ತರ್ ಕೂಡ ಸೋನಿಯಾ ಗಾಂಧಿಯವರ ಸೇವೆಗೆ ನಿಂತರು.

"ಮೌತ್ ಕಾ ಸೌದಾಗರ್"(ಸಾವಿನ ವ್ಯಾಪಾರಿ) ಎಂಬ ನುಡಿಗಟ್ಟನ್ನು ಬರೆದುಕೊಟ್ಟಿದ್ದು





ಬೇರಾರು ಅಲ್ಲ, ಜಾವೆದ್ ಅಖ್ತರ್!!

ಆ ಪರಿ ಇತ್ತು ಮೋದಿ ಮೇಲಿನ ಸವಾರಿ. ಅದರಲ್ಲೂ 'ತೆಹಲ್ಕಾ' ವಾರಪತ್ರಿಕೆ ಹಾಗೂ 'ಆಜ್‌ತಕ್' ಟೀವಿಗಳು ಗುಜರಾತ್ ಚುನಾವಣೆ ಘೋಷಣೆಯಾಗುತ್ತಿದ್ದಂತೆಯೇ 2002ರ ಹಿಂಸಾಚಾರಕ್ಕೆ ಸಂಬಂಧಿಸಿದಂತೆ ನಡೆಸಿದ್ದ "ಸ್ಟಿಂಗ್ ಆಪರೇಶನ್" ಅನ್ನು ಬಹಿರಂಗಪಡಿಸುವ ಮೂಲಕ ಮೋದಿಯವರನ್ನು ಹಣಿಯಲು ಯತ್ನಿಸಿದವು. ಆದರೆ ಮೋದಿಯೇನು ದಡ್ಡರಲ್ಲ. ಸೋನಿಯಾ ಗಾಂಧಿ 'ಸಾವಿನ ವ್ಯಾಪಾರಿ' ಎಂದು ಕರೆದಿದ್ದು ಎದುರಾಳಿ ಕೈಗೆ ಬ್ರಹ್ಮಾಸ್ತ್ರ ನೀಡಿದಂತಾಯಿತು. ಅದುವರೆಗೂ ಕೇವಲ ಗುಜರಾತ್ ಅಭಿವೃದ್ಧಿ ಬಗ್ಗೆ ಮಾತನಾಡುತ್ತಿದ್ದ ಮೋದಿ, 'ಸಾವಿನ ವ್ಯಾಪಾರಿ' ಎಂದಿದ್ದನ್ನೇ ನೆಪವಾಗಿಟ್ಟುಕೊಂಡು ಭಾವನಾತ್ಮಕ ವಿಚಾರವನ್ನು ಕೈಗೆತ್ತಿಕೊಂಡರು, ಭಯೋತ್ಪಾದನೆಯನ್ನು ಎಳೆದು ತಂದರು.

ನರೇಂದ್ರ ಮೋದಿಗೆ ಕುಟುಕುವುದೂ ಗೊತ್ತು, ಮುಷ್ಠಿ ಕೊಡುವುದೂ ತಿಳಿದಿದೆ, ಕಂಟಕದಿಂದ ತಪ್ಪಿಸಿಕೊಳ್ಳಲೂ ಬರುತ್ತದೆ.

ನಕಲಿ ಎನ್‌ಕೌಂಟರ್ ಎಂದು ಮಾಧ್ಯಮಗಳು ಬೊಬ್ಬೆಹಾಕುತ್ತಿದ್ದ ಕುಖ್ಯಾತ ಕ್ರಿಮಿನಲ್ ಸೊಹ್ರಾಬುದ್ದೀನ್ ಶೇಖ್ ಪ್ರಕರಣವನ್ನು ಎಳೆದು ತಂದರು. ಆದರೆ ಯಾವುದನ್ನೂ ಬಾಯ್ಬಿಟ್ಟು ಹೇಳಲಿಲ್ಲ! ಅಷ್ಟಕ್ಕೂ ಮೂವರು ಆಯುಕ್ತರಲ್ಲಿ ಒಬ್ಬರಾಗಿರುವ ಕಟ್ಟಾ ಕಾಂಗ್ರೆಸ್ಸಿಗ ನವೀನ್ ಚಾವ್ಲಾ ಇರುವ ಚುನಾವಣಾ ಆಯೋಗ ಕೂಡ ಮೋದಿಯನ್ನು ಹಣಿಯಲು ಕಾದು ಕುಳಿತಿತ್ತು. ಆದರೆ ಮೋದಿ ಮಹಾನ್ ಬುದ್ಧಿವಂತರು. ತಾವು ಹೇಳಬೇಕಾದುದನ್ನು ಜನರ ಬಾಯಿಂದ ಹೇಳಿಸಿ ಬಿಡುತ್ತಾರೆ. ಭಾಷಣದ ಮಧ್ಯೆ ಅವರು ಕೇಳುವ ಪ್ರಶ್ನೆಗಳು ಹೇಗಿರುತ್ತವೆಂದರೆ ಜನರಿಂದ ನಿರೀಕ್ಷಿತ ಉತ್ತರವೇ ಬರಬೇಕು ಹಾಗಿರುತ್ತವೆ. ಗುಜರಾತನ್ನು ಮುಗಿಸಲು ಬಂದಿದ್ದ ಕ್ರಿಮಿನಲ್ ಸೊಹ್ರಾಬುದ್ದೀನ್ ಶೇಖ್‌ಗೆ ಯಾವ ಶಾಸ್ತಿ ಮಾಡಬೇಕಿತ್ತು? ಹಾಗಂತ ಮೋದಿ ಕೇಳಿದರೆ, 'ಕಿಲ್ ಹಿಮ್, ಕಿಲ್ ಹಿಮ್' ಎಂಬ ಉದ್ಘೋಷ ಜನರ ಮಧ್ಯದಿಂದ ಎದ್ದು ಬರುತ್ತಿತ್ತು. ಪ್ರಶ್ನೆ ಕೇಳಿದ್ದು ಮೋದಿ, ಉತ್ತರ ನೀಡಿದ್ದು ಜನ. ಜನ ನೀಡಿದ ಉತ್ತರ ಮೋದಿಯ ಮನದ ಇಂಗಿತವೇ ಆಗಿತ್ತು! ಆದರೆ ಅಂತಹ ಉತ್ತರವನ್ನು ಜನರೇ ನೀಡಿದ್ದರಿಂದಾಗಿ ಚುನಾವಣಾ ಆಯೋಗ ಮೋದಿ ವಿರುದ್ಧ ಕ್ರಮ ಕೈಗೊಳ್ಳಲು ಹೇಗೆತಾನೇ ಸಾಧ್ಯ?!

ಮುಂದೇನಾಯಿತು ಎಂಬುದು ನಿಮಗಾಗಲೇ ತಿಳಿದಿದೆ.

2007, ಡಿಸೆಂಬರ್ 23ರಂದು ಬೆಳಗ್ಗೆ ಗುಜರಾತ್ ವಿಧಾನಸಭೆ ಚುನಾವಣೆಯ ಫಲಿತಾಂಶ ಪ್ರಕಟಗೊಳ್ಳಲು ಆರಂಭಿಸಿದ ಮೊದಲ ಅರ್ಧ ಗಂಟೆಯಲ್ಲಿ ಬಿಜೆಪಿಗೆ ಹಿನ್ನಡೆ

ಉಂಟಾಗುವ ಸೂಚನೆ ದೊರೆತಾಗ ಮಾಧ್ಯಮಗಳ ಮುಖದಲ್ಲಿ ಒಂಥರಾ ಗೆಲುವಿನ ಮಂದಹಾಸ. ಎನ್‌ಡಿಟಿವಿ, ಸಿಎನ್‌ಎನ್-ಐಬಿಎನ್ ಚಾನೆಲ್‌ಗಳ ಆ್ಯಂಕರ್‌ಗಳಂತೂ ಸಂಭ್ರಮಿಸಲು ಸನ್ನದ್ಧರಾಗ ತೊಡಗಿದ್ದರು. ಆದರೆ ಗಂಟೆ ಕಳೆಯುವಷ್ಟರಲ್ಲಿ ಮೋದಿ ಐತಿಹಾಸಿಕ ಜಯದತ್ತ ದಾಪುಗಾಲಿಡುತ್ತಿರುವ ಚಿತ್ರಣ ಸ್ಪಷ್ಟವಾಗುತ್ತಿದ್ದಂತೆ ಮಾಧ್ಯಮಗಳಿಗೆ ಎಷ್ಟು ನಿರಾಸೆಯಾಯಿತೆಂದರೆ "ಗುಜರಾತ್ ಚುನಾವಣೆಯಲ್ಲಿ ನರೇಂದ್ರ ಮೋದಿ ಗೆಲ್ಲಬಹುದು. ಆದರೇನಂತೆ ಅಮೆರಿಕ ಹಾಗೂ ಇತರ ಪಾಶ್ಚಿಮಾತ್ಯ ರಾಷ್ಟ್ರಗಳಿಗೆ ಹೋಗಲು ವೀಸಾ ಪಡೆದುಕೊಳ್ಳಲು ಅವರಿಂದಾಗದು" ಎಂದೇ ಬಿಟ್ಟರು ಎನ್‌ಡಿಟಿವಿಯ ಸ್ಟಾರ್ ನಿರೂಪಕಿ ಬರ್ಖಾ ದತ್!! ಬಿಜೆಪಿಯ 117 ಅಭ್ಯರ್ಥಿಗಳನ್ನು ಗೆಲ್ಲಿಸಿದ ಗುಜರಾತ್ ಮತದಾರರು ಮೋದಿಯವರನ್ನು 'ದಿ ಅಗ್ಲಿ ಇಂಡಿಯನ್', Hero of hatred, 'ಸಾವಿನ ವ್ಯಾಪಾರಿ', 'ಸುಳ್ಳುಗಾರ' ಅಂತ ಸದಾ ದೂಷಿಸುತ್ತಿದ್ದವರಿಗೆ ಸರಿಯಾದ ಬುದ್ಧಿಯನ್ನೇ ಕಲಿಸಿದರು.

ಇಂದು ನರೇಂದ್ರ ಮೋದಿ ಗುಜರಾತ್‌ಗೆ ಸೀಮಿತವಾಗಿಲ್ಲ.





## ಎಂ.ಜೆ. ಅಕ್ಬರ್ ಹೇಳಿದ್ದು

ರಾಜಕಾರಣದ ಮಾನದಂಡದಲ್ಲಿ ಭ್ರಷ್ಟಾಚಾರದಿಂದ ಬಲುದೂರ. ಹಣ ಎಂದೂ ಈತನನ್ನು ಖರೀದಿಸಲಾಗಿಲ್ಲ. ಅದರ ವ್ಯಾಮೋಹಕ್ಕೂ ಬಿದ್ದಿಲ್ಲ. ಉಳಿದಂತೆ ಈತ ಅಲ್ಪಸಂಖ್ಯಾತ ಓಲೈಕೆ ವಿರೋಧಿಗಳ ಹೀರೋ. ದಕ್ಷ, ಪ್ರಾಮಾಣಿಕ, ಎಲ್ಲಕ್ಕೂ ಮಿಗಿಲಾಗಿ ಮಹತ್ವಾಕಾಂಕ್ಷಿ ಇವು ಈತನ ಹೆಗ್ಗುರುತುಗಳು. ಸಮಾಜದಲ್ಲಿ ಉನ್ನತಸ್ಥಾನಕ್ಕೇರಲು ಇನ್ನೇನು ಬೇಕು?!

ಗುಜರಾತ್ ಗಲಭೆಯನ್ನು ಮನಸ್ಸಿನ ಮೂಲೆಗೆ ತಳ್ಳಿ ನಿಸ್ಪೃಹ, ದಕ್ಷ ಆಡಳಿತಗಾರನಿಗೆ ಮಣೆ ಹಾಕುವ ದೊಡ್ಡ ವರ್ಗವೇ ನಮ್ಮಲ್ಲಿದೆ. ಸ್ವಘೋಷಿತ ಸುಧಾರಣಾವಾದಿಗಳು ನರೇಂದ್ರ ಮೋದಿಯವರ ನೆರಳು ಕಂಡರೆ ದೂರ ಸರಿಯಬಹುದು. ಆದರೆ ಮೋದಿಯವರನ್ನಾಗಲಿ, ಅವರ ಸಾಮರ್ಥ್ಯವನ್ನಾಗಲಿ ಕಡೆಗಣಿಸುವವರು ಮೂರ್ಖರೇ ಸರಿ.





# 42

## ರಾಷ್ಟ್ರದ ನಂಬರ್-1 ಮುಖ್ಯಮಂತ್ರಿ ಮುಂದಿನ ಪ್ರಧಾನ ಮಂತ್ರಿ!

ಇಂಗ್ಲಿಷ್ ಅಲ್ಲದೆ ತಮಿಳು, ಹಿಂದಿಯಲ್ಲೂ ಪ್ರಕಟವಾಗುವ 'ಇಂಡಿಯಾ ಟುಡೆ' ದೇಶದಲ್ಲಿಯೇ ಅತಿ ಹೆಚ್ಚು ಪ್ರಸಾರವುಳ್ಳ ವಾರಪತ್ರಿಕೆ. ಅದು ವರ್ಷಕ್ಕೊಮ್ಮೆ ಕೆಲವೊಮ್ಮೆ ವರ್ಷದಲ್ಲಿ ಎರಡು ಬಾರಿ ರಾಷ್ಟ್ರವ್ಯಾಪಿ ಸಮೀಕ್ಷೆ ನಡೆಸುತ್ತದೆ. ಆ ಸಮೀಕ್ಷೆಯ ವೇಳೆ ದೇಶದ ವಿವಿಧ ರಾಜ್ಯಗಳಿಗೆ ಹೋಗಿ ಆಯ್ದ ಕೆಲವು ವ್ಯಕ್ತಿಗಳಿಗೆ ಆಯಾ ಮುಖ್ಯಮಂತ್ರಿಯ ಸಾಧನೆಯ ಬಗ್ಗೆ ಅಭಿಪ್ರಾಯ ಕೇಳುತ್ತದೆ. ಅನಂತರ ಅನ್ಯ ರಾಜ್ಯದ ಮುಖ್ಯಮಂತ್ರಿಗಳ ಬಗ್ಗೆ ನಿಮಗೇನನಿಸುತ್ತದೆ ಎಂದು ರೇಟ್ ಮಾಡುವಂತೆ ಹೇಳುತ್ತದೆ. 2008, ಜನವರಿಯಲ್ಲಿ ನಡೆಸಿದ ಇಂತಹ 14ನೇ ರಾಷ್ಟ್ರ ಮಟ್ಟದ ಸಮೀಕ್ಷೆಯ ವೇಳೆ 19 ರಾಜ್ಯಗಳು ಹಾಗೂ 98 ಲೋಕಸಭೆ ಕ್ಷೇತ್ರಗಳ 12,492 ಮತದಾರರ ಅಭಿಪ್ರಾಯ ಕೇಳಲಾಗಿತ್ತು. ಅದರ ಆಧಾರದ ಮೇಲೆ ಫೆಬ್ರವರಿ 4ರಂದು ಪ್ರಕಟಿಸಿರುವ ಫಲಿತಾಂಶದಲ್ಲಿ ಉತ್ತರಾಖಂಡದ ಬಿಜೆಪಿ ಮುಖ್ಯಮಂತ್ರಿ ಬಿ.ಸಿ. ಖಂಡೂರಿಯವರು ರಾಜ್ಯಮಟ್ಟದಲ್ಲಿ 'ನಂಬರ್-1' ಸ್ಥಾನ ಪಡೆದುಕೊಂಡಿದ್ದರೆ, ಗುಜರಾತ್ ಮುಖ್ಯಮಂತ್ರಿ ನರೇಂದ್ರ ಮೋದಿಯವರು ರಾಷ್ಟ್ರಮಟ್ಟದಲ್ಲಿ 'ನಂಬರ್-1' ಮುಖ್ಯಮಂತ್ರಿಯಾಗಿ ಹೊರಹೊಮ್ಮಿದ್ದಾರೆ!

ಇದೇನು ಸಣ್ಣ ಸಾಧನೆಯಲ್ಲ.

ಅಷ್ಟಕ್ಕೂ ಆಯಾ ರಾಜ್ಯದ ಮತದಾರರ ಅಭಿಪ್ರಾಯವನ್ನು ಮಾತ್ರ ಗಣನೆಗೆ ತೆಗೆದುಕೊಳ್ಳುವುದರಿಂದ ರಾಜ್ಯವಾರು ಮಟ್ಟದಲ್ಲಿ 'ನಂಬರ್-1' ಮುಖ್ಯಮಂತ್ರಿ ಎನಿಸಿಕೊಳ್ಳುವುದಕ್ಕೆ ಭಾರೀ ಶ್ರಮಪಡಬೇಕಿಲ್ಲ, ಆದರೆ ರಾಷ್ಟ್ರಮಟ್ಟದಲ್ಲಿ 'ನಂಬರ್-1' ಎನಿಸಿಕೊಳ್ಳುವುದು ಸಾಮಾನ್ಯ ಮಾತಲ್ಲ, ಅದರಲ್ಲೂ ದೇಶಾದ್ಯಂತ ಇರುವ ದಲಿತರ ಪ್ರಶ್ನಾತೀತ ಅಧಿಪತಿಯಾಗಿರುವ ಮಾಯಾವತಿಯವರನ್ನು ಹಿಂದಕ್ಕೆ ಹಾಕುವುದೆಂದರೆ ಸಣ್ಣ

ವಿಷಯವೇ?! ಇಷ್ಟಾಗಿಯೂ ಮೋದಿಯವರು ನಂಬರ್-1 ಆಗಿದ್ದಾರೆ. ಗುಜರಾತ್‌ನ ಶೇ.77ರಷ್ಟು ಮತದಾರರು ಮೋದಿಯವರೇ ಅತ್ಯುತ್ತಮ ಮುಖ್ಯ ಮಂತ್ರಿ ಎಂದು ತೀರ್ಪು ನೀಡಿರುವುದರಲ್ಲಿ ಯಾವ ಆಶ್ಚರ್ಯ ಇಲ್ಲದಿದ್ದರೂ ಇತರ ರಾಜ್ಯಗಳಲ್ಲಿರುವ ಹೆಚ್ಚಿನ ಮತದಾರರೂ ಮೋದಿಯವರ ಬಗ್ಗೆ ಒಳ್ಳೆಯ ಅಭಿಪ್ರಾಯ ವ್ಯಕ್ತಪಡಿಸಿರುವುದು ನಿಜಕ್ಕೂ ಹುಬ್ಬೇರಿಸುವಂತಿದೆ. ರಾಜಧಾನಿ ದಿಲ್ಲಿಯಲ್ಲಿ ಶೇ.43ರಷ್ಟು ಮತದಾರರು ಮುಖ್ಯಮಂತ್ರಿ ಶೀಲಾ ದೀಕ್ಷಿತ್ ಅವರ ಸಾಧನೆಯ ಬಗ್ಗೆ ತೃಪ್ತಿ ವ್ಯಕ್ತಪಡಿಸಿದ್ದರೆ ಶೇ.31ರಷ್ಟು ಜನರು ಹೊರಗಿನವರಾದ ಮೋದಿಯವರಿಗೆ ಸೈ ಎಂದಿದ್ದಾರೆ! ಅದರಲ್ಲೂ ದಕ್ಷಿಣದ ಆಂಧ್ರದಲ್ಲಂತೂ "ಕಳೆದ ವಿಧಾನಸಭೆ ಚುನಾವಣೆಯಲ್ಲಿ ಗುಜರಾತ್ ಮತದಾರರು ಮೋದಿಯವರ ಅಭಿವೃದ್ಧಿ ಕಾರ್ಯಗಳಿಗೆ ಹಸಿರು ನಿಶಾನೆ ತೋರಿದ್ದಾರೆ" ಎಂದು ಶೇ. 68ರಷ್ಟು ಜನರು ಅಭಿಪ್ರಾಯಪಟ್ಟಿದ್ದಾರೆ. ಪಶ್ಚಿಮ ಬಂಗಾಳ, ಕೇರಳ, ತಮಿಳುನಾಡುಗಳಲ್ಲೂ ಮೋದಿಯವರಿಗೆ ಅಪಾರ ಬೆಂಬಲ ವ್ಯಕ್ತವಾಗಿದೆ. ಕರ್ನಾಟಕದಲ್ಲೂ ಶೇ.35ರಷ್ಟು ಜನರು ಮೋದಿ ಬೇಕೆಂದಿದ್ದಾರೆ!

ಇದನ್ನೆಲ್ಲ ಗಮನಿಸಿದಾಗ ನರೇಂದ್ರ ಮೋದಿ ಗುಜರಾತನ್ನು ಮೀರಿ ಬೆಳೆದಿದ್ದಾರೆ ಎಂಬುದು ಎಂಥವರಿಗೂ ತಿಳಿಯುತ್ತದೆ. ಪ್ರತಿನಿತ್ಯವೂ ಒಂದಿಲ್ಲೊಂದು ನೆಪಮಾಡಿಕೊಂಡು ನರೇಂದ್ರ ಮೋದಿಯವರನ್ನು ನಿಂದಿಸುತ್ತಿದ್ದ ಮಾಧ್ಯಮಗಳ ಬಾಯಲ್ಲಿ 'ಹಿಂದುತ್ವವಾದ' ಎಂಬ ಪದದ ಬದಲು 'ಮೋದಿತ್ವ' ಕೇಳಿಬರುತ್ತಿದೆ. ಒಬ್ಬ ವ್ಯಕ್ತಿಯ ಹೆಸರಿನಲ್ಲಿ ಒಂದು ತತ್ವ ಹುಟ್ಟಿಕೊಳ್ಳುತ್ತಿದೆ ಎಂದಾದರೆ, ಅದೂ ಟೀಕಾಕಾರ ಮಾಧ್ಯಮಗಳು ಅಂತಹ ತತ್ವವನ್ನು ಹುಟ್ಟುಹಾಕಿವೆಯೆಂದರೆ ಅಭಿವೃದ್ಧಿಯ ಹರಿಕಾರ ನರೇಂದ್ರ ಮೋದಿಯವರ ಸಾಧನೆ ಎಂಥದ್ದಿರಬಹುದು! "ನೀವು ಮೋದಿಯನ್ನು ಇಷ್ಟಪಡಿ, ಬಿಡಿ. ಆದರೆ ಇದು ಸತ್ಯ-ಮೋದಿ ಗುಜರಾತ್‌ನಲ್ಲಿ ಗೆಲ್ಲುತ್ತಾರೆ" ಎಂದು ರಾಜ್‌ದೀಪ್ ಸರ್ದೇಸಾಯಿ ಹೇಳುವಷ್ಟರ ಮಟ್ಟಿಗೆ ಪರಿಸ್ಥಿತಿ ಬದಲಾಗಿದೆ. ಕರ್ನಾಟಕದಂತಹ ಚುನಾವಣೆಗೆ ಸನ್ನದ್ಧವಾಗಿರುವ ರಾಜ್ಯ ಕೂಡ 'ಮೋದಿ ಮಾದರಿ' ಆಡಳಿತವೆಂಬ ಮಂತ್ರ ಜಪಿಸುತ್ತಿದೆ. ಅದು ಯಾವುದೇ ರಾಜ್ಯದ ಚುನಾವಣೆ ಇರಲಿ, ಪ್ರಚಾರಕ್ಕೆ ಮೋದಿ ಬೇಕು ಎಂದು ಹೇಳುವಷ್ಟರ ಮಟ್ಟಿಗೆ ಪಕ್ಷದಲ್ಲಿ ಮೋದಿ ಪ್ರಮುಖರಾಗಿ ನಿಲ್ಲುತ್ತಿದ್ದಾರೆ.

ಹಾಗಾದರೆ 2002ರಲ್ಲಿಯೇ ಸ್ವಾಮಿನಾಥನ್ ಅಯ್ಯರ್ ಅಂಕ್ಲೆಸರಿಯಾ ಬರೆದಂತೆ ನರೇಂದ್ರ ಮೋದಿ ಭಾರತದ ಭವಿಷ್ಯದ ಪ್ರಧಾನಿಯೇ?

